# ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಮತ್ತು ಪ್ರಯೋಗ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಮಹಾಪ್ರಬಂಧ



ಸಂಶೋಧಕರು
ಪಾಗುಂಡಪ್ಪ ತಿಮ್ಮಪ್ಪ

ಮಾರ್ಗದರ್ಶಕರು
ಡಾ. ಕೆ.ಸಿ. ಶಿವಾರೆಡ್ಡಿ
ಸಹ ಪ್ರಾಧ್ಯಾಪಕರು



ಭಾಷಾಂತರ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೬



# ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಮತ್ತು ಪ್ರಯೋಗ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಮಹಾಪ್ರಬಂಧ



ಸಂಶೋಧಕರು
**ಪಾಗುಂಡಪ್ಪ ತಿಮ್ಮಪ್ಪ**

ಮಾರ್ಗದರ್ಶಕರು
**ಡಾ. ಕೆ.ಸಿ. ಶಿವಾರೆಡ್ಡಿ**
ಸಹ ಪ್ರಾಧ್ಯಾಪಕರು



ಭಾಷಾಂತರ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಪಾಗುಂಡಪ್ಪ ತಿಮ್ಮಪ್ಪ** ಅವರು **"ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಮತ್ತು ಪ್ರಯೋಗ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : 18.03.2016
ಸ್ಥಳ : ವಿದ್ಯಾರಣ್ಯ

(ಡಾ. ಕೆ.ಸಿ. ಶಿವಾರೆಡ್ಡಿ)
ಸಹ ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಸಂಶೋಧಕರ ಪ್ರಮಾಣ ಪತ್ರ

**"ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಮತ್ತು ಪ್ರಯೋಗ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು **ಡಾ. ಕೆ.ಸಿ. ಶಿವಾರೆಡ್ಡಿ,** ಸಹ ಪ್ರಾಧ್ಯಾಪಕರು, ಭಾಷಾಂತರ ಅಧ್ಯಯನ ವಿಭಾಗ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 18-03-2016
ಸ್ಥಳ : ವಿದ್ಯಾರಣ್ಯ

**(ಪಾಗುಂಡಪ್ಪ ತಿಮ್ಮಪ್ಪ)**
ಸಂಶೋಧಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

ಅಧ್ಯಾಯ ಒಂದು

**ಪ್ರಸ್ತಾವನೆ** ೧

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸ್ವರೂಪ

೧.೫. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ ಎರಡು

**ವಸಾಹತುಶಾಹಿ ಶಿಕ್ಷಣ ಪದ್ಧತಿಯ ಸ್ವರೂಪ** ೧೨

೨.೧. ಭಾರತಕ್ಕೆ ಪಾಶ್ಚಾತ್ಯರ ಆಗಮನ

೨.೨. ಇಂಗ್ಲಿಷ್ ಶಿಕ್ಷಣ ಪ್ರಾರಂಭ

೨.೩. ಇಂಗ್ಲಿಷ್ ಶಿಕ್ಷಣದ ಉದ್ದೇಶಗಳು

೨.೪. ವಸಾಹತುಶಾಹಿ ಕಾಲದ ಪಠ್ಯಪುಸ್ತಕಗಳು

೨.೫. ಇಂಗ್ಲಿಷ್ ಶಿಕ್ಷಣದ ಬೆಳವಣಿಗೆ

೨.೬. ಶಿಕ್ಷಣದ ಮೇಲೆ ಮಿಶನರಿಗಳ ಪ್ರಭಾವ

೨.೭. ವಸಾಹತುಶಾಹಿ ಕಾಲಘಟ್ಟದಲ್ಲಿ ಶೈಕ್ಷಣಿಕ ಸುಧಾರಣೆಗಳು

೨.೮. ಆಂಗ್ಲ ವಿದ್ಯಾಭ್ಯಾಸದಿಂದ ಭಾರತೀಯ ಸಮಾಜದ ಮೇಲೆ ಉಂಟಾದ ಪ್ರಭಾವ

ಅಧ್ಯಾಯ ಮೂರು

**ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಮತ್ತು ಶಿಕ್ಷಣ ಕುರಿತ ಚಿಂತನೆಗಳ ಮುಖಾಮುಖಿ** ೪೮

೩.೧. ಶಿವರಾಮ ಕಾರಂತರ ಪ್ರಾಥಮಿಕ ಶಿಕ್ಷಣ

೩.೨. ಕಾರಂತರ ಶಿಕ್ಷಣ ಚಿಂತನೆಗೆ ಪ್ರಭಾವ ಬೀರಿದ ಅಂಶಗಳು

೩.೩. ವಸಾಹತು ಶಿಕ್ಷಣಕ್ಕೆ ಕಾರಂತರ ಪ್ರತಿಕ್ರಿಯೆ ಹಾಗೂ ಚಿಂತನೆಗಳು

ಅಧ್ಯಾಯ ನಾಲ್ಕು

**ಶಿವರಾಮ ಕಾರಂತರ ಶೈಕ್ಷಣಿಕ ಪ್ರಯೋಗಗಳು** ೭೨

೪.೧. ಮಕ್ಕಳ ಕೂಟ

೪.೨. ಬಾಲವನ

೪.೩. ಮಕ್ಕಳ ಪಠ್ಯಪುಸ್ತಕಗಳು

೪.೪. ಮಕ್ಕಳ ನಾಟಕಗಳು

೪.೫. ಮಕ್ಕಳ ಗದ್ಯಕೃತಿಗಳು

೪.೬. ವಯಸ್ಕರ ಶಿಕ್ಷಣ

೪.೭. ಪ್ರವಾಸ ಸಾಹಿತ್ಯ

೪.೮. ವಿಶ್ವಕೋಶಗಳು

ಅಧ್ಯಾಯ ಐದು

**ಸ್ವಾತಂತ್ರ್ಯಾನಂತರದ ಶಿಕ್ಷಣವ್ಯವಸ್ಥೆ: ಶಿವರಾಮ ಕಾರಂತರ ಶಿಕ್ಷಣ ಚಿಂತನೆಯ ಮುಖಾಮುಖಿ** ೧೩೮

೫.೧. ಸ್ವಾತಂತ್ರ್ಯೋತ್ತರ ಶೈಕ್ಷಣಿಕ ಆಯೋಗಗಳು

೫.೨. ರಾಷ್ಟ್ರೀಯ ಶಿಕ್ಷಣನೀತಿ

೫.೩. ಸ್ವಾತಂತ್ರ್ಯೋತ್ತರ ಶಿಕ್ಷಣ–ಕಾರಂತರ ಶಿಕ್ಷಣ ವಿಚಾರಗಳು

೫.೪. ಕಾರಂತರ ಪ್ರಾಥಮಿಕ ಭಾಷಾ ಶಿಕ್ಷಣ

೫.೫. ಕಾರಂತರ ಶಿಕ್ಷಣನೀತಿ

೫.೬. ಕಾರಂತರ ಶಿಕ್ಷಣ ಮತ್ತು ಸಾಮಾಜಿಕ ಪ್ರತಿಕ್ರಿಯೆ

ಅಧ್ಯಾಯ ಆರು

**ಸಮಾರೋಪ** ೧೭೪

ಅಧ್ಯಯನದ ಫಲಿತಗಳು

**ಅನುಬಂಧಗಳು**

೧. ಮೂಲ ಆಕರಗಳು ೧೮೬

೨. ಪೂರಕ ಆಕರಗಳು ೧೮೮

೩. ಶಿವರಾಮ ಕಾರಂತರ ಶೈಕ್ಷಣಿಕ ಪ್ರಯೋಗಗಳು ೧೯೪

ಅಧ್ಯಾಯ ಒಂದು

# ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸ್ವರೂಪ

೧.೫. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

## ಪ್ರಸ್ತಾವನೆ

ಶಿವರಾಮ ಕಾರಂತರು ಕವಿಯಾಗಿ, ಕಾದಂಬರಿಕಾರರಾಗಿ, ನಾಟಕಕಾರರಾಗಿ, ಪತ್ರಕರ್ತರಾಗಿ ಮತ್ತು ವಿಜ್ಞಾನದ ಲೇಖಕರಾಗಿ ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ಕೃಷಿ ಮಾಡಿದ್ದಾರೆ. ಏಕೆಂದರೆ ಅವರ ಆಸಕ್ತಿಯನ್ನು ಕೆರಳಿಸದ ವಿಷಯವೇ ಇಲ್ಲ. ಸಾಹಿತ್ಯ, ಸಂಗೀತ, ಚಿತ್ರಕಲೆ, ನೃತ್ಯನಾಟಕ ಮತ್ತು ಲಲಿತಕಲೆ ಹೀಗೆ ಎಲ್ಲ ಕ್ಷೇತ್ರದಲ್ಲಿ ಆಸಕ್ತಿಯಿತ್ತು. ಕಾರಂತರು ಮೂಲತಃ ಒಬ್ಬ ಸಾಹಿತಿ ಯಾದರೂ ಸಾಹಿತ್ಯದಾಚೆಗೆ ಇತರ ಜ್ಞಾನಶಾಖೆಗಳಲ್ಲಿಯೂ ಕೆಲಸವನ್ನು ಮಾಡಿದ್ದಾರೆ. ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದಂತೆ ಪ್ರಯೋಗಗಳು, ಪಠ್ಯಪುಸ್ತಕಗಳ ರಚನೆ, ಶಬ್ದಕೋಶಗಳ ರಚನೆ ಹಾಗು ಬಾಲಪ್ರಪಂಚ, ವಿಜ್ಞಾನಪ್ರಪಂಚ, ಮುಂತಾದ ಸಂಪುಟಗಳನ್ನು ರಚಿಸಿದ್ದಾರೆ. ನಾಟಕ ಕ್ಷೇತ್ರದಲ್ಲೂ ಗೀತನಾಟಕ, ನೃತ್ಯನಾಟಕ ಮತ್ತು ಮೂಕನಾಟಕ, ಎಂಬ ಭಿನ್ನ ಪ್ರಯೋಗ ಗಳನ್ನು ಮಾಡಿದ್ದಾರೆ. ಜಾನಪದ ಕಲೆಯಾದ ಯಕ್ಷಗಾನವನ್ನು ಕುರಿತು ಸಂಶೋಧನೆಯನ್ನು ನಡೆಸಿ ಅದರಲ್ಲಿರುವ ಕಲಾತ್ಮಕ ಅಂಶಗಳನ್ನು ನವೀನ ಮಾದರಿಯಲ್ಲಿ ತೋರಿಸಿಕೊಟ್ಟರು. ಇಷ್ಟೇ ಅಲ್ಲದೆ ಹಲವಾರು ಸೃಜನೇತರ ಬರಹಗಳನ್ನು ಬರೆದಿದ್ದಾರೆ. ವೈಚಾರಿಕ ಬರಹಗಳು, ಶೈಕ್ಷಣಿಕ ಲೇಖನಗಳು, ಸೃಜನಶೀಲ ಬಿಡಿ ಬರಹಗಳು, ರಾಜಕೀಯ ಮತ್ತು ನಿಸರ್ಗ, ಪರಿಸರ ಮೊದಲಾದ ವಿಷಯಗಳನ್ನು ಕುರಿತು ಲೇಖನಗಳನ್ನು ಬರೆದಿದ್ದಾರೆ. ಹೀಗೆ ಸಾಹಿತ್ಯದ ವಿವಿಧ

ಕ್ಷೇತ್ರಗಳಲ್ಲಿ ಕೆಲಸ ಮಾಡಿದ ಕಾರಂತರನ್ನು ಮುಖ್ಯವಾಗಿ ಕಾದಂಬರಿಕಾರರಾಗಿಯೇ ಗುರುತಿಸುತ್ತೇವೆ. ಇವರ ಕಾದಂಬರಿ, ನಾಟಕ, ಯಕ್ಷಗಾನವನ್ನು ಕುರಿತು ಅಧ್ಯಯನಗಳು ನಡೆದಿವೆ. ಈ ಬರಹಗಳ ಹಲವಾರು ಗ್ರಂಥಗಳು, ಬಿಡಿ ಲೇಖನಗಳು ವಿಮರ್ಶಾ ಕೃತಿಗಳು ಪ್ರಕಟವಾಗಿವೆ. ಆದರೆ ಅವರ ಇತರೆ ಬರಹಗಳನ್ನು ಅದರಲ್ಲೂ ಮುಖ್ಯವಾಗಿ ಶೈಕ್ಷಣಿಕ ಬರಹಗಳ, ವಿಚಾರಗಳ ಮತ್ತು ಪ್ರಯೋಗಗಳ ಕುರಿತು ಹೆಚ್ಚಾಗಿ ಅಧ್ಯಯನಗಳು ನಡೆದಿಲ್ಲ. ಹಾಗಾಗಿ ಕಾರಂತರ ಶೈಕ್ಷಣಿಕ ಬರಹಗಳನ್ನು ಕುರಿತು ಅಧ್ಯಯನ ಮಾಡಬೇಕೆಂಬ ಉದ್ದೇಶದಿಂದ "ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಮತ್ತು ಪ್ರಯೋಗ" ಎಂಬ ವಿಷಯವನ್ನು ಕುರಿತು ಅಧ್ಯಯನ ಮಾಡಲಾಗಿದೆ. ಈ ಅಧ್ಯಯನವನ್ನು ಮುಖ್ಯವಾಗಿ ಅವರ ಕಾದಂಬರಿ ಸಾಹಿತ್ಯವನ್ನು ಹೊರತುಪಡಿಸಿ, ಮಕ್ಕಳ ಶಿಕ್ಷಣವನ್ನು ಕುರಿತು ಬರೆದ ಬರಹಗಳನ್ನು, ಪಠ್ಯಪುಸ್ತಕಗಳನ್ನು, ಬಾಲಪ್ರಪಂಚ, ವಿಜ್ಞಾನಪ್ರಪಂಚ ಸಂಪುಟಗಳನ್ನು, ಪ್ರವಾಸಸಾಹಿತ್ಯ, ಆತ್ಮಕಥೆ, ಮತ್ತು ವಿವಿಧ ಸೃಜನಶೀಲ ಬಿಡಿ ಬರಹಗಳಲ್ಲಿ ಅಭಿವ್ಯಕ್ತಿಸಿರುವ ಶೈಕ್ಷಣಿಕ ಚಿಂತನೆಗಳನ್ನು ಪ್ರಯೋಗಗಳನ್ನು ಇಲ್ಲಿ ಶೋಧಿಸಿಕೊಳ್ಳಲಾಗಿದೆ.

ವಸಾಹತು ಕಾಲದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪಡೆದ ಕಾರಂತರು ಹೈಸ್ಕೂಲು ಶಿಕ್ಷಣವನ್ನು ಕುಂದಾಪುರದಲ್ಲಿ ಮುಗಿಸಿ ಕಾಲೇಜು ಶಿಕ್ಷಣವನ್ನು ಮಂಗಳೂರಿನಲ್ಲಿ ಮುಂದುವರಿಸುತ್ತಾರೆ. ರಾಷ್ಟ್ರೀಯ ಚಳುವಳಿ ಪ್ರಾರಂಭವಾದಾಗ ವ್ಯಾಸಂಗವನ್ನು ಬಿಟ್ಟು ಚಳವಳಿಯಲ್ಲಿ ಭಾಗವಹಿಸುತ್ತಾರೆ. ಗಾಂಧೀಜಿಯವರ ಸಂದೇಶ, ಆದರ್ಶ, ಮನೋಧರ್ಮಗಳಿಂದ ಸ್ವತಂತ್ರ ವಿಚಾರವಾದಿಯಾಗಿ ಬೆಳೆದ ಕಾರಂತರು ದೇಶ ವಿದೇಶಗಳ ಸಂಚಾರದಿಂದ ಅಲ್ಲಿರುವ ಅನೇಕ ಶಿಕ್ಷಣ ಸಂಸ್ಥೆಗಳನ್ನು ಕಂಡು ಪ್ರಭಾವಿತರಾಗಿ ಇಲ್ಲಿನ ಶಿಕ್ಷಣ ಕುರಿತು ಚಿಂತನೆಯನ್ನು ಮಾಡತೊಡಗಿದರು. ಕೋಟದ ಸುತ್ತಮುತ್ತಲಿನ ಗ್ರಾಮಗಳಿಗೆ ಭೇಟಿ ನೀಡಿ ಅಲ್ಲಿರುವ ಪ್ರಾಥಮಿಕ ಶಾಲೆಯ ಶಿಕ್ಷಕರೊಂದಿಗೆ ಮತ್ತು ಮಕ್ಕಳೊಂದಿಗೆ ಸಂವಾದ ನಡೆಸುತ್ತಿದ್ದರು. ಮಕ್ಕಳಿಗೆ ಕಲಿಸಲಾಗುವ ಪ್ರಾಥಮಿಕ ಪಠ್ಯಪುಸ್ತಕಗಳನ್ನು ಗಮನಿಸಿದಾಗ ಅತ್ಯಂತ ನೀರಸವಾದ ಬರವಣಿಗೆಗಳಿಂದ ಕೂಡಿದ್ದವು. ಮಕ್ಕಳ ಆಸಕ್ತಿಯನ್ನು ಕೆರಳಿಸುವುದಾಗಲಿ, ಅವರ ಮನೋವಿಕಾಸವನ್ನು ಬೆಳೆಸುವಂತಹ ಪಠ್ಯಪುಸ್ತಕಗಳು ರಚನೆಯಾಗಿರಲಿಲ್ಲ. ಆಂಗ್ಲ ಭಾಷೆಯಲ್ಲಿ ಮಕ್ಕಳಿಗೆ ಪ್ರತ್ಯೇಕವಾದ ಹಲವಾರು ಪಠ್ಯಪುಸ್ತಕಗಳು ರಚನೆಗೊಂಡಿದ್ದವು.

ಕನ್ನಡ ಭಾಷೆಯಲ್ಲಿ ಮಕ್ಕಳ ಬೌದ್ಧಿಕ ವಿಕಾಸವನ್ನು ಬೆಳೆಸುವಂತಹ ಪುಸ್ತಕಗಳು ರಚನೆಯಾಗಿರಲಿಲ್ಲ. ಇದನ್ನು ಗಮನಿಸಿದ ಕಾರಂತರು ಸ್ವತಃ ಮಕ್ಕಳಿಗೆ ಸಂಬಂಧಿಸಿದಂತೆ ಪಠ್ಯಪುಸ್ತಕಗಳನ್ನು ಮತ್ತು ವಿಶ್ವಕೋಶಗಳನ್ನು ರಚಿಸಿದರು. ಬಾಲವನವನ್ನು ಸ್ಥಾಪನೆ ಮಾಡಿ ವಸಾಹತು

ಶಿಕ್ಷಣಕ್ರಮಕ್ಕಿಂತ ಭಿನ್ನವಾದ ಪ್ರಯೋಗಗಳನ್ನು ಮಾಡಿ ತೋರಿಸಿದರು. ನಿಸರ್ಗದ ಮಡಿಲಲ್ಲಿಯೇ ಮಕ್ಕಳು ಕಲಿಯಲು ಅನುಕೂಲವನ್ನು ಮಾಡಿಕೊಟ್ಟರು. ಮಕ್ಕಳು ಉತ್ಸಾಹದಿಂದಲೇ ಕಲಿಕೆಯಲ್ಲಿ ಭಾಗವಹಿಸಲು ಅತ್ಯಂತ ಮನರಂಜನೆಯಾಗಿ ಪಠ್ಯಗಳನ್ನು ಮಾಡಿದರು.

ಸದಾ ಕ್ರಿಯಾಶೀಲ ವ್ಯಕ್ತಿತ್ವದ ಕಾರಂತರು ಪತ್ರಿಕೋದ್ಯಮ, ಕಲೆ, ಸಾಹಿತ್ಯ, ಶಿಲ್ಪಕಲೆಗಳ ತುಲನಾತ್ಮಕ ಅಧ್ಯಯನ ಮಾಡುವುದರ ಜೊತೆಗೆ ದೇಶಪರ್ಯಟನೆಯ ಮೂಲಕ ಮಾಹಿತಿಗಳನ್ನು ಸಂಗ್ರಹಿಸುತ್ತಿದ್ದರು. ಬರಹ ಮತ್ತು ಚಿಂತನೆಗಳನ್ನು ಸದಾ ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದ ಕಾರಂತರು ಪ್ರವಾಸಸಾಹಿತ್ಯ, ಆತ್ಮಕಥೆ, ಶೈಕ್ಷಣಿಕ ಬರಹಗಳ ಮೂಲಕ ವಸಾಹತು ಕಾಲದ ಶಿಕ್ಷಣದ ಬಗೆಗೆ ಪ್ರಸ್ತಾಪಿಸಿರುವ ಮತ್ತು ಚರ್ಚಿಸಿರುವ ವಿಷಯಗಳೇನು? ದೇಶಿ ಶಿಕ್ಷಣದಲ್ಲಿ ಬದಲಾವಣೆಗಳನ್ನು ತರಲು ಯಾವ ರೀತಿ ಪ್ರಯತ್ನಿಸಿದರು ಎಂಬ ಮುಂತಾದ ಅಂಶಗಳನ್ನು ಕಂಡುಕೊಳ್ಳುವುದಲ್ಲದೆ ಇವುಗಳ ಜೊತೆಗೆ ಪ್ರಾಥಮಿಕ ಶಿಕ್ಷಣದಲ್ಲಿ ಅವರು ನೀಡಿರುವ ಹೊಸ ಹೊಸ ಪ್ರಯೋಗಗಳು ಯಾವುವು? ಸ್ವಾತಂತ್ರ್ಯಾನಂತರದ ಶಿಕ್ಷಣವ್ಯವಸ್ಥೆ ಮತ್ತು ಕಾರಂತರ ವಿಚಾರಗಳು ಮತ್ತು ಪ್ರಯೋಗಗಳ ಮುಖಾಮುಖಿ ಯಾವ ರೀತಿಯದು ಎಂಬ ಹಲವಾರು ಅಂಶಗಳು ಈ ಅಧ್ಯಯನದ ಭಾಗಗಳಾಗಿವೆ.

ವಸಾಹತು ಸಂದರ್ಭದ ಭಾರತದಲ್ಲಿ ದೇಶಿ ಶಿಕ್ಷಣವು ಹೆಚ್ಚು ವ್ಯಾಪಕವಾಗಿರಲಿಲ್ಲ. ಪ್ರಾಥಮಿಕ ಮಟ್ಟದ ಶಿಕ್ಷಣವು ಅಕ್ಷರ, ಲೆಕ್ಕಗಳ ತಿಳುವಳಿಕೆ, ಕಾವ್ಯ, ಇಷ್ಟಕ್ಕೆ ಮಾತ್ರ ಸೀಮಿತವಾಗಿತ್ತು. ಶಿಕ್ಷಕರಿಗೆ ಮೂಲಭೂತ ತರಬೇತಿಯಾಗಲೀ, ಮಕ್ಕಳಿಗೆ ಕಲಿಯಲು ನಿರ್ದಿಷ್ಟ ಪಠ್ಯಪುಸ್ತಕಗಳಾಗಲೀ ಇರಲಿಲ್ಲ. ಇವುಗಳನ್ನು ಸುಧಾರಿಸುವ ನೆಪದಿಂದ ಹಲವಾರು ಶೈಕ್ಷಣಿಕ ಯೋಜನೆಗಳನ್ನು ಜಾರಿಗೆ ತಂದರು. ಚಾರ್ಟರ್ ಕಾಯ್ದೆ, ಚಾರ್ಲ್ಸ್‌ವುಡ್ ವರದಿ, ಹಂಟರ್ ಆಯೋಗ ಮೊದಲಾದ ಯೋಜನೆಗಳ ಮುಖಾಂತರ ಶೈಕ್ಷಣಿಕ ನೀತಿಗಳನ್ನು ಜಾರಿಗೆ ತಂದರು. ತಮ್ಮ ಆಡಳಿತದ ಅನುಕೂಲಕ್ಕೆ ತಕ್ಕಂತೆ ಶಿಕ್ಷಣದ ನಿಯಮಗಳನ್ನು ರೂಪಿಸಿ ಜಾರಿಗೆ ತಂದರು. ಬ್ರಿಟಿಷ್ ಆಡಳಿತ ವ್ಯವಹಾರ, ಮುದ್ರಣ ಯಂತ್ರಗಳ ಜೊತೆಗೆ ಕ್ರೈಸ್ತಮತ ಪ್ರಚಾರವೂ ಭಾರತಕ್ಕೆ ಆಗಮಿಸಿತು. ಕ್ರೈಸ್ತ ಮಿಶನರಿಗಳು ತಮ್ಮ ಧರ್ಮವನ್ನು ಪ್ರಸಾರ ಮಾಡಲು ಹಲವಾರು ಆಂಗ್ಲ ಶಾಲೆಗಳನ್ನು ಸ್ಥಾಪನೆ ಮಾಡಿದವು. ಈ ಶಾಲೆಗಳು ಸಂಪೂರ್ಣವಾಗಿ ಕ್ರೈಸ್ತಧರ್ಮದ ಆಧಾರದ ಮೇಲೆ ನಡೆಸುತ್ತಿದ್ದರಿಂದ ಶಿಕ್ಷಣದ ಮುಖಾಂತರ ಮತಾಂತರವನ್ನು ಮಾಡಲು ಪ್ರಯತ್ನಿಸುತ್ತಿದ್ದರು. ಬಾಸೆಲ್ ಮಿಷನ್, ವೆಸ್ಲಿಯನ್ ಮಿಷನ್, ಜೀಸಸ್ ಮಿಷನ್, ಸ್ಕ್ಯಾಟ್‌ಲ್ಯಾಂಡ್ ಮಿಷನ್ ಮೊದಲಾದ ಸಂಸ್ಥೆಗಳು ಶಾಲೆಗಳನ್ನು ತೆರೆದವು. ಇಪ್ಪತ್ತನೇ ಶತಮಾನದಲ್ಲಿ ಜೀವಿಸಿದ ಕಾರಂತರು ಅಂದಿನ ಶಿಕ್ಷಣ ಪಡೆದು ಅದರಲ್ಲಿರುವ ಲೋಪದೋಷಗಳನ್ನು ಗಮನಿಸಿ ಶಿಕ್ಷಣ

ಕುರಿತು ವ್ಯಾಪಕವಾಗಿ ಚಿಂತನೆಯನ್ನು ಮಾಡಿದರು. ಪಾಶ್ಚಾತ್ಯ ಶಿಕ್ಷಣತಜ್ಞರು ಮಕ್ಕಳ ಮನಸ್ಸನ್ನು ಅರಿಯದೆ ತಮ್ಮ ಉದ್ದೇಶಕ್ಕನುಗುಣವಾಗಿ ಪಠ್ಯಪುಸ್ತಕಗಳನ್ನು ತಯಾರಿಸುತ್ತಿದ್ದರು. ಇಲ್ಲಿನ ಭಾಷೆ, ಸಂಸ್ಕೃತಿ, ನಾಡಿನ ವಿಷಯಗಳನ್ನು ಬಿಟ್ಟು ಬೇರೆ ದೇಶಗಳ ವಿವರಗಳನ್ನು, ಘಟನೆಗಳನ್ನು ಮಕ್ಕಳು ಎಂದೂ ಕಂಡು ಕೇಳಿರದ ವಿಷಯಗಳನ್ನು ಆಂಗ್ಲ ಭಾಷೆಯಲ್ಲಿ ಕಲಿಸಲಾಗುತ್ತಿತ್ತು. ಶಿವರಾಮ ಕಾರಂತರು ಇಂತಹ ಶಿಕ್ಷಣವನ್ನು ತೀವ್ರವಾಗಿ ವಿರೋಧಿಸುತ್ತಾರೆ. ಎಳೆಯ ಮಕ್ಕಳ ಮನಸ್ಸು ಹಾಗೂ ಭಾವನೆಗಳ ಮೇಲೆ ಇಂತಹ ಶಿಕ್ಷಣ ಹೇಗೆ ಪ್ರಭಾವ ಬೀರುತ್ತದೆ ಕೇವಲ ನಾಲ್ಕು ಗೋಡೆಗಳ ನಡುವಿನ ತರಗತಿಗಳು ಮಕ್ಕಳ ಪಾಲಿಗೆ ಹೇಗೆ ಸೆರೆಮನೆಗಳಾಗುತ್ತಿವೆ ಎಂಬುದನ್ನು ಹಲವಾರು ಶೈಕ್ಷಣಿಕ ಲೇಖನಗಳಲ್ಲಿ ವಿವರಿಸಿದ್ದಾರೆ.

ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳಿಗೆ ವಿವಿಧ ವಿಷಯಗಳನ್ನು ಕಲಿಯುವ ಸಂದರ್ಭದಲ್ಲಿ ಪಠ್ಯಪುಸ್ತಕವು ಮಹತ್ವದ ಪಾತ್ರ ವಹಿಸುತ್ತದೆ. ಕಾರಂತರು ತಮ್ಮ ಸಮಕಾಲೀನ ಪಠ್ಯಪುಸ್ತಕಗಳನ್ನು ಕಂಡು ಕಟುವಾಗಿ ವಿರೋಧಿಸುತ್ತಾರೆ. ಏಕೆಂದರೆ ಪ್ರಾಥಮಿಕ ಮತ್ತು ಪ್ರೌಢಶಾಲೆಯಲ್ಲಿರುವ ಮಕ್ಕಳ ಪಠ್ಯಗಳು ನಿರಾಕರ್ಷಕವಾಗಿ, ಹಲವಾರು ತಪ್ಪುಗಳಿಂದ ತುಂಬಿದ್ದವು. "ಇವತ್ತಿನ ಪ್ರಾಥಮಿಕ ಶಾಲೆಯ ಪಠ್ಯಪುಸ್ತಕಗಳನ್ನು ನೋಡಿದರೆ ದಿಗಿಲು ಬರುತ್ತದೆ" ಎನ್ನುತ್ತಾರೆ. ಮಕ್ಕಳು ಕಲಿಯುವ ಪಠ್ಯಪುಸ್ತಕಗಳು ಹೇಗಿರಬೇಕೆಂದು ಕಾರಂತರೇ ಸಲಹೆಗಳನ್ನು ನೀಡುವುದರ ಜೊತೆಗೆ ಪ್ರಾಥಮಿಕ ಮಕ್ಕಳಿಗೆ ಪಠ್ಯಪುಸ್ತಕಗಳನ್ನೂ ರಚನೆ ಮಾಡಿದರು. ನಮ್ಮ ಸುತ್ತಮುತ್ತಲಿನ ಪ್ರಾಣಿ ಪಕ್ಷಿ ಮತ್ತು ದಿನನಿತ್ಯದ ವ್ಯವಹಾರದ ವಸ್ತು ವಿಷಯಗಳನ್ನಿಟ್ಟುಕೊಂಡು ಪಠ್ಯಗಳನ್ನು ಸರಳವಾಗಿ ನಿರೂಪಿಸಿದ್ದಾರೆ. ಭೂಗೋಳ, ಗಣಿತ, ವಿಜ್ಞಾನ, ಭಾಷೆ ಮೊದಲಾದ ಪಠ್ಯವಿಷಯಗಳನ್ನು ಹೊಸ ಮಾದರಿಯಲ್ಲಿ ಹೇಳುವುದರ ಜೊತೆಗೆ ಶಿಕ್ಷಣದಲ್ಲಿ ಭಾಷೆ, ವಾಕ್ಯರಚನೆ, ಕ್ಲಿಷ್ಟ ಪದಗಳನ್ನು ಕಡಿಮೆ ಮಾಡುವುದರೊಂದಿಗೆ, ಮಕ್ಕಳಲ್ಲಿ ಅಪಾರವಾದ ಜ್ಞಾನದ ಕುತೂಹಲ ಹೆಚ್ಚಿಸಲು ವಿಶ್ವಕೋಶಗಳನ್ನು ಬರೆದರು. ಮಕ್ಕಳ ಶಿಕ್ಷಣ ಕುರಿತು ರಚನೆ ಮಾಡಿದ ಇಂತಹ ಆಳವಾದ ಚಿಂತನೆ, ಬರಹಗಳು, ಪ್ರಯೋಗಗಳು ಇಂದಿಗೂ ಮುಖ್ಯವೆನಿಸುತ್ತವೆ.

### ಅಧ್ಯಯನದ ಉದ್ದೇಶ

ಶಿವರಾಮ ಕಾರಂತರ ಬರವಣಿಗೆಯ ವ್ಯಾಪ್ತಿ ವಿಶಾಲವಾದುದು. ಇಷ್ಟು ವಿಶಾಲವಾದ ವ್ಯಾಪ್ತಿಯಲ್ಲಿ ಅವರ ಶೈಕ್ಷಣಿಕ ಬರವಣಿಗೆಗಳು ಅತ್ಯಂತ ಪ್ರಮುಖವಾದವು. ಈ ಕುರಿತು ನಡೆದಿರುವ ಅಧ್ಯಯನಗಳು ತುಂಬಾ ಕಡಿಮೆ. ಶಿಕ್ಷಣವನ್ನು ಕುರಿತಾಗಿ ಕಾರಂತರು ಕೈಗೊಂಡಿರುವ ಪ್ರಯೋಗಗಳು ಅಪಾರ. ಕಾರಂತರು ವಸಾಹತುಶಾಹಿ ಶಿಕ್ಷಣವನ್ನು ಕುರಿತು ನೀಡಿದ ಪ್ರತಿಕ್ರಿಯೆ ಮತ್ತು ಪ್ರಯೋಗಗಳನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡುವುದು ಮುಖ್ಯ ಉದ್ದೇಶವಾಗಿದೆ.

ಕಾರಂತರ ಶೈಕ್ಷಣಿಕ ಲೇಖನಗಳಲ್ಲಿ ಶಿಕ್ಷಣವನ್ನು ಕುರಿತು ಅಭಿವ್ಯಕ್ತಿಸಿರುವ ಚಿಂತನೆಗಳನ್ನು ಶೋಧಿಸಿಕೊಳ್ಳುವುದು.

ಕಾರಂತರು ಮಕ್ಕಳಿಗಾಗಿ ರಚಿಸಲಾದ ಪಠ್ಯಪುಸ್ತಕಗಳನ್ನು ಬಾಲವನದ ಶೈಕ್ಷಣಿಕ ಪ್ರಯೋಗ ಗಳನ್ನು ಮತ್ತು ಶಿಕ್ಷಣದ ವಿಚಾರಧಾರೆಯನ್ನು ಶೋಧಿಸಿಕೊಂಡು ಅವರ ಚಿಂತನೆಗಳನ್ನು ಸ್ವಾತಂತ್ರ್ಯಾನಂತರದ ಶಿಕ್ಷಣದ ಪ್ರಯೋಗಗಳಿಗೆ ಮುಖಾಮುಖಿ ಮಾಡುವುದು.

ಸಾಹಿತ್ಯ, ಸಂಸ್ಕೃತಿ, ಜಾಗತಿಕ ಹಾಗೂ ಸ್ಥಳೀಯ ಇತಿಹಾಸ, ವಿಜ್ಞಾನ, ರಾಜಕೀಯ ಮತ್ತು ಸಾಮಾಜಿಕ ವಿಚಾರಗಳನ್ನು ಮಕ್ಕಳ ಕಲಿಕೆಯ ಭಾಗವಾಗಿಸಬೇಕೆಂಬ ತುಡಿತವನ್ನು ಶೈಕ್ಷಣಿಕ ಬರಹಗಳಲ್ಲಿ ಹೇಗೆ ವ್ಯಕ್ತಪಡಿಸಿದ್ದಾರೆ ಎಂಬುದನ್ನು ಪರಿಶೀಲಿಸುವುದು.

ಶಿವರಾಮ ಕಾರಂತರು ಶೈಕ್ಷಣಿಕ ಚಿಂತನೆ, ಪಠ್ಯಗಳು, ಮತ್ತು ಪ್ರಯೋಗಗಳ ಮೂಲಕ ಮಕ್ಕಳಲ್ಲಿ ಬೌದ್ಧಿಕವಾಗಿ ಯಾವ ಬಗೆಯ ವಿಚಾರ, ಸಂದೇಶಗಳನ್ನು ಹೇಳಲು ಪ್ರಯತ್ನಿಸಿದರು ಎಂಬುದನ್ನು ಪರಿಶೀಲಿಸುವುದು.

ಭಾರತೀಯ ವಸಾಹತು ಕಾಲದ ಶಿಕ್ಷಣಪದ್ಧತಿಯನ್ನು ಚಾರಿತ್ರಿಕವಾಗಿ ವಿಶ್ಲೇಷಿಸುತ್ತಾ ಕಾರಂತರ ಚಿಂತನೆಗಳನ್ನು ಅದಕ್ಕೆ ಮುಖಾಮುಖಿ ಮಾಡುವ ಉದ್ದೇಶವನ್ನು ಈ ಅಧ್ಯಯನ ಒಳಗೊಂಡಿದೆ. ನಂತರ ವಸಾಹತು ಕಾಲದ ಮತ್ತು ಕಾರಂತರ ಶೈಕ್ಷಣಿಕ ಚಿಂತನೆಗಳನ್ನು ಒಟ್ಟಿಗೆ ಗ್ರಹಿಸುತ್ತಾ ಎರಡೂ ಚಿಂತನೆಗಳನ್ನು ಸ್ವಾತಂತ್ರ್ಯೋತ್ತರ ಕಾಲಘಟ್ಟದ ಶೈಕ್ಷಣಿಕ ಬೆಳವಣಿಗೆಯ ಜೊತೆಗೆ ಮುಖಾಮುಖಿ ಮಾಡುತ್ತಾ ಅದನ್ನು ಸಮಕಾಲೀನಗೊಳಿಸುವ ವಿಧಾನವೂ ಪ್ರಸ್ತುತ ಅಧ್ಯಯನದ ಉದ್ದೇಶಗಳಲ್ಲೊಂದಾಗಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಶಿವರಾಮ ಕಾರಂತರ ಶೈಕ್ಷಣಿಕ ಬರಹಗಳನ್ನು ಆಧರಿಸಿದೆ. ಜೊತೆಗೆ ಅವರ ಆತ್ಮಕಥೆಗಳಾದ 'ಹುಚ್ಚುಮನಸ್ಸಿನ ಹತ್ತು ಮುಖಗಳು', 'ಸ್ಮೃತಿ ಪಟಲ'ದಿಂದ ಸಂಪುಟಗಳು ಹಾಗೂ ಕಾರಂತರ ಶೈಕ್ಷಣಿಕ ಲೇಖನಗಳ ಸಂಪುಟಗಳು, ಬಾಲಪ್ರಪಂಚದ ಮೂರು ಸಂಪುಟಗಳು, ವಿಜ್ಞಾನಪ್ರಪಂಚದ ನಾಲ್ಕು ಸಂಪುಟಗಳು, ಪ್ರಾಣಿಪ್ರಪಂಚ, ಮಕ್ಕಳ ಪಠ್ಯಪುಸ್ತಕಗಳು ಸಿರಿಗನ್ನಡ ಪಾಠಮಾಲೆ, ಹೊಸಗನ್ನಡ ಪಾಠಮಾಲೆ, ಮಕ್ಕಳ ನಾಟಕಗಳು, ವಯಸ್ಕರ ಶಿಕ್ಷಣ ಪಠ್ಯಗಳು, ಕಾರಂತರ ಮಕ್ಕಳ ಸಾಹಿತ್ಯ ಎಂದು ಗುರುತಿಸಲಾಗುವ ಕಥೆ, ಶಿಶುಗೀತೆಗಳು, ಪ್ರವಾಸ ಕೃತಿಗಳಾದ 'ಅಬುವಿನಿಂದ ಬರಾಮಕ್ಕೆ', 'ಪಾತಾಳಕ್ಕೆ ಪಯಣ', 'ಅಪೂರ್ವ ಪಶ್ಚಿಮ' ಕೃತಿಗಳು ಈ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿವೆ. ಇವು ಮೂಲ ಆಕರಗಳು.

ಜೊತೆಗೆ ಇವುಗಳನ್ನು ಕುರಿತು ಬರೆದಿರುವ ಬಿಡಿ ಲೇಖನಗಳು, ಕಾರಂತರ ಶೈಕ್ಷಣಿಕ ಬರಹಗಳ ವಿಮರ್ಶಾ ಕೃತಿಗಳನ್ನು ಆನುಷಂಗಿಕ ಆಕರಗಳನ್ನಾಗಿ ತೆಗೆದುಕೊಳ್ಳಲಾಗಿದೆ.

**ಅಧ್ಯಯನದ ವಿಧಾನ**

"ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಮತ್ತು ಪ್ರಯೋಗ" ಎಂಬುದು ಪ್ರಸ್ತುತ ಅಧ್ಯಯನದ ಶೀರ್ಷಿಕೆ. ಭಾರತದ ವಸಾಹತು ಕಾಲದ ಶಿಕ್ಷಣಕ್ಕಿಂತ ಭಿನ್ನವಾಗಿ ಅವರು ಮಾಡಿದ ಚಿಂತನೆ ಮತ್ತು ಪ್ರಯೋಗಗಳನ್ನು ವಿಶ್ಲೇಷಿಸುತ್ತ ಸ್ವಾತಂತ್ರ್ಯೋತ್ತರ ಶಿಕ್ಷಣಪದ್ಧತಿಗೆ ಮುಖಾಮುಖಿ ಮಾಡುವುದರಿಂದ ಅಧ್ಯಯನದ ಉದ್ದೇಶಕ್ಕೆ ಅನುಗುಣವಾಗಿ 'ಚಾರಿತ್ರಿಕ ಮತ್ತು ವಿಶ್ಲೇಷಣಾತ್ಮಕ' ಅಧ್ಯಯನ ವಿಧಾನವನ್ನು ಈ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ**

ಪ್ರಸ್ತುತ ಈ ಅಧ್ಯಯನವು ಶಿವರಾಮ ಕಾರಂತರ ಶೈಕ್ಷಣಿಕ ಚಿಂತನೆಗಳನ್ನು ಮತ್ತು ಪ್ರಯೋಗಗಳನ್ನು ತಾತ್ವಿಕವಾಗಿ ವಿಶ್ಲೇಷಣೆಗೆ ಒಳಪಡಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ಅಧ್ಯಯನದ ಸ್ವರೂಪವನ್ನು ಮುಂದಿನಂತೆ ರೂಪಿಸಿಕೊಳ್ಳಲಾಗಿದೆ

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ ಮತ್ತು ಇದುವರೆಗಿನ ಅಧ್ಯಯನಗಳ ಸಮೀಕ್ಷೆಯನ್ನು ನೀಡಲಾಗಿದೆ.

ಅಧ್ಯಾಯ ಎರಡರಲ್ಲಿ ವಸಾಹತು ಕಾಲದ ಶಿಕ್ಷಣ ಸ್ವರೂಪ, ಅದರ ಹಿನ್ನೆಲೆ ಮತ್ತು ಆ ಕಾಲದ ಪಠ್ಯಗಳ ಬೆಳವಣಿಗೆ, ಕ್ರೈಸ್ತ ಮಿಷನರಿಗಳ ಇಂಗ್ಲಿಷ್ ಶಿಕ್ಷಣಪದ್ಧತಿಯ ವಿವಿಧ ಆಯಾಮಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಮುಖ್ಯವಾಗಿ ಹತ್ತೊಂಬತ್ತನೇ ಶತಮಾನದ ಆರಂಭದಲ್ಲಿ ಭಾಷಾಂತರ ಪ್ರಕ್ರಿಯೆಗಳ ಮೂಲಕ ಭಾರತೀಯ ಶಿಕ್ಷಣಕ್ರಮದಲ್ಲಿ ತಂದ ಹೊಸ ಪ್ರಯೋಗಗಳನ್ನು ಇಲ್ಲಿ ತಿಳಿಸಲಾಗಿದೆ. ಲಂಡನ್ ಮಿಷನ್, ವೆಸ್ಲಿಯನ್ ಮಿಷನ್, ಬಾಸೆಲ್ ಮಿಷನ್‌ಗಳ ಮೂಲಕ ಅನೇಕ ವಿದ್ಯಾಸಂಸ್ಥೆಗಳನ್ನು ಆರಂಭ ಮಾಡಿದ ಮಿಷನರಿಗಳು ಶಾಲಾ ಪಠ್ಯಗಳಲ್ಲಿ ಇಂಗ್ಲಿಷ್ ಸಾಹಿತ್ಯ, ಭಾಷೆ, ಸಂಸ್ಕೃತಿಯನ್ನು ಪ್ರಸಾರ ಮಾಡುವ ಮೂಲಕ ದೇಶಿ ಶಿಕ್ಷಣವನ್ನು ಮೂಲೆಗುಂಪಾಗಿ ಮಾಡಿ ಇಂಗ್ಲಿಷ್ ಭಾಷೆಯ ಶಿಕ್ಷಣವನ್ನು ಹೇರಿದರು. ಇದರಿಂದ ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನಗಳಲ್ಲಿ ಭಾರತೀಯ ಶಿಕ್ಷಣ ಕ್ರಮಗಳಲ್ಲಾದ ಬದಲಾವಣೆಗಳನ್ನು ಮತ್ತು ಪರಿಣಾಮಗಳನ್ನು ಮುಂತಾದ ಅಂಶಗಳನ್ನು ಚರ್ಚಿಸಲಾಗಿದೆ. ಹಾಗೆ ಚರ್ಚಿಸುತ್ತಾ ವಸಾಹತು ಕಾಲದ ಶೈಕ್ಷಣಿಕ ವ್ಯವಸ್ಥೆಗೆ ಇದ್ದ ಚಾರಿತ್ರಿಕ ಮತ್ತು ರಾಜಕೀಯ ಕಾರಣಗಳು ಯಾವುವು ಎಂಬುದನ್ನು ವಿವರಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಶಿವರಾಮ ಕಾರಂತರ ಪ್ರಾಥಮಿಕ ಶಿಕ್ಷಣ, ಅಂದಿನ ಕಾಲದ ಶೈಕ್ಷಣಿಕ ಚಿಂತನೆಗೆ ಪ್ರಭಾವ ಬೀರಿದ ಅಂಶಗಳು ಯಾವುವು? ಮತ್ತು ಕಾರಂತರು ವಸಾಹತುಶಾಹಿ ಶಿಕ್ಷಣಕ್ಕೆ ನೀಡಿದ ಪ್ರತಿಕ್ರಿಯೆ ಹಾಗೂ ಚಿಂತನೆಗಳನ್ನು ವಿಶ್ಲೇಶಿಸಲಾಗಿದೆ. ಮುಖ್ಯವಾಗಿ ವಸಾಹತು ಶಾಹಿ ಶೈಕ್ಷಣಿಕ ವ್ಯವಸ್ಥೆಗಿಂತ ಕಾರಂತರ ಭಿನ್ನವಾದ ಚಿಂತನೆ, ಆ ಮೂಲಕ ನೀಡಿದ ಸಲಹೆ ಗಳು, ಪ್ರಾಥಮಿಕ ಪಠ್ಯಗಳ ಸ್ವರೂಪ, ಭಾಷೆ, ಮಕ್ಕಳ ಶಿಕ್ಷಣ ಕುರಿತು ನೀಡಿದ ಪ್ರತಿಕ್ರಿಯೆಯ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕಾರಂತರು ವಸಾಹತು ಕಾಲದ ಶಿಕ್ಷಣಕ್ಕಿಂತ ಭಿನ್ನವಾಗಿ ಮಾಡಿದ ಹಲವಾರು ಶೈಕ್ಷಣಿಕ ಪ್ರಯೋಗಗಳನ್ನು ವಿಶ್ಲೇಷಿಸಲಾಗಿದೆ. ಮಕ್ಕಳ ಕೂಟಗಳು, ಬಾಲವನದ ವಿಭಿನ್ನವಾದ ಪ್ರಯೋಗಗಳು ಮಕ್ಕಳ ಪುಸ್ತಕಗಳ ರಚನೆ, ವಿಜ್ಞಾನದ ಬರವಣಿಗೆ, ವಯಸ್ಕರ ಶಿಕ್ಷಣ ಚಿಂತನೆ ಮತ್ತು ಪಠ್ಯಪುಸ್ತಕಗಳ ರಚನೆ, ಶಿಶುಗೀತೆಗಳು, ಗದ್ಯ ಕೃತಿಗಳನ್ನು ವಿವರಿಸಲಾಗಿದೆ.

ಅಧ್ಯಾಯ ಐದರಲ್ಲಿ ಸ್ವಾತಂತ್ರ್ಯ ನಂತರದ ಶಿಕ್ಷಣವ್ಯವಸ್ಥೆ, ಸ್ವಾತಂತ್ರ್ಯೋತ್ತರ ಶೈಕ್ಷಣಿಕ ಆಯೋಗಗಳ ವಿಶ್ಲೇಷಣೆ, ರಾಷ್ಟ್ರೀಯ ಶಿಕ್ಷಣನೀತಿ, ಪ್ರಾಥಮಿಕ ಮಕ್ಕಳ ಶಿಕ್ಷಣ, ಬೋಧನಾ ಕ್ರಮಗಳಿಗೆ ಶಿವರಾಮ ಕಾರಂತರ ಶಿಕ್ಷಣ ವಿಚಾರಗಳನ್ನು ಮುಖಾಮುಖಿ ಮಾಡಲಾಗಿದೆ.

ಅಧ್ಯಾಯ ಆರು ಸಮಾರೋಪ ಮತ್ತು ಈ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಒಳಗೊಂಡಿದೆ.

### ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಶಿವರಾಮ ಕಾರಂತರ ಕಾದಂಬರಿ, ನಾಟಕ, ಹೀಗೆ ವಿವಿಧ ಸಾಹಿತ್ಯ ಪ್ರಕಾರಗಳನ್ನು ಕುರಿತು ಈಗಾಗಲೇ ಬೇರೆ ಬೇರೆ ನೆಲೆಗಳಲ್ಲಿ ಹಲವಾರು ಅಧ್ಯಯನಗಳು ನಡೆದಿವೆ. ಆದರೆ ಅವರ ವಿವಿಧ ಸೃಜನಶೀಲ ಬಿಡಿ ಬರಹಗಳಲ್ಲಿ ಶಿಕ್ಷಣವನ್ನು ಕುರಿತ ವಿಚಾರಗಳನ್ನು ಮತ್ತು ಪ್ರಯೋಗಗಳನ್ನು ಕುರಿತು ಸಮಗ್ರವಾದ ಅಧ್ಯಯನಗಳು ನಡೆದಿಲ್ಲ. ಕಾರಂತರ ಶೈಕ್ಷಣಿಕ ವಿಚಾರ ಗಳನ್ನು ಕುರಿತು ಕೆಲವರು ವಿಮರ್ಶೆ ಮತ್ತು ಲೇಖನಗಳನ್ನು ಬರೆದಿದ್ದಾರೆ. ಅವರಲ್ಲಿ ಪ್ರಮುಖವಾಗಿ ಕಾರಂತರ ಶಿಕ್ಷಣ ವಿಚಾರಗಳನ್ನು ಮತ್ತು ಪ್ರಯೋಗಗಳನ್ನು ಕುರಿತು ಮಹಾಬಲೇಶ್ವರರಾವ್ ಅವರು “ಶಿಕ್ಷಣ : ಕಾರಂತರ ದೃಷ್ಟಿ ಸೃಷ್ಟಿ” ಎಂಬ ಕೃತಿಯಲ್ಲಿ ಚರ್ಚಿಸಿದ್ದಾರೆ. ಇದರಲ್ಲಿ ಅವರ ಚಿಂತನೆ ಮತ್ತು ಪ್ರಯೋಗಗಳನ್ನು ದೃಷ್ಟಿ ಮತ್ತು ಸೃಷ್ಟಿ ಎಂದು ಎರಡು ಭಾಗಗಳನ್ನಾಗಿ ಮಾಡಿದ್ದಾರೆ. ಮೊದಲನೆಯ ಭಾಗದಲ್ಲಿ ಶಿಕ್ಷಣದ ಗುರಿ, ಗುಣ ಪರಿಮಾಣ, ಭಾಷಾ ಶಿಕ್ಷಣ, ಪಠ್ಯಪುಸ್ತಕಗಳನ್ನು ಕುರಿತು ಚರ್ಚಿಸಲಾಗಿದೆ. ಮುಖ್ಯವಾಗಿ ಈ ಭಾಗದಲ್ಲಿ ಕಾರಂತರು ಶಿಕ್ಷಣದ ವಿವಿಧ ಮುಖಗಳ ಬಗೆಗೆ ಕಾಲದಿಂದ ಕಾಲಕ್ಕೆ ವ್ಯಕ್ತಪಡಿಸುತ್ತಾ ಬಂದಿರುವ ವಿಚಾರಗಳನ್ನು ಮತ್ತು ದೃಷ್ಟಿಕೋನಗಳನ್ನು ಸಮೀಕ್ಷಿಸಲಾಗಿದೆ.

ಎರಡನೆಯ ಭಾಗದಲ್ಲಿ ಕಾರಂತರ ಶೈಕ್ಷಣಿಕ ಪ್ರಯೋಗಗಳ ಕುರಿತು ಚರ್ಚಿಸಲಾಗಿದೆ. ಶಿಕ್ಷಣಕ್ಷೇತ್ರದಲ್ಲಿ ಅವರು ಕೈಗೊಂಡ ಪ್ರಯೋಗಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಪ್ರಯೋಗ ಶೀಲತೆ, ವಿಶ್ವಕೋಶಗಳ ರಚನೆ, ಇತರೆ ವಿಶಿಷ್ಟ ಪ್ರಯೋಗಗಳು, ಪಾಠಮಾಲೆಗಳು ಮುಂತಾದ ಪ್ರಯೋಗಗಳ ಕುರಿತು ತಿಳಿಸಲಾಗಿದೆ. ಆದರೆ ಕಾರಂತರ ಸೃಜನಶೀಲ ಬಿಡಿಬರಹಗಳಲ್ಲಿ, ಪ್ರವಾಸ ಸಾಹಿತ್ಯ, ಆತ್ಮಕಥೆ, ವಿಚಾರ ಸಾಹಿತ್ಯದಲ್ಲಿ ವ್ಯಕ್ತಪಡಿಸಿರುವ, ಸಮಗ್ರ ಶೈಕ್ಷಣಿಕ ಚಿಂತನೆ ಗಳನ್ನು ಮತ್ತು ವಸಾಹತು ಕಾಲದ ಶಿಕ್ಷಣವ್ಯವಸ್ಥೆಗೆ ಅವರು ನೀಡಿದ ಪ್ರತಿಕ್ರಿಯೆ, ಮುಂತಾದ ವಿಚಾರಗಳನ್ನು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸಿಲ್ಲ.

'ಡಾ. ಶಿವರಾಮ ಕಾರಂತರ ಶೈಕ್ಷಣಿಕ ಚಿಂತನೆಗಳು ಮತ್ತು ಪ್ರಯೋಗಗಳು ಒಂದು ಮರುಚಿಂತನೆ' ಎಂಬ ಎಂ.ಫಿಲ್. ಪ್ರಬಂಧವನ್ನು ತುಳಸಿ ಕುಮಾರಿಯವರು ರಚಿಸಿದ್ದಾರೆ. ಈ ಪ್ರಬಂಧವು ಶಿವರಾಮ ಕಾರಂತರ ಬದುಕು, ಬರವಣಿಗೆ, ಚಿಂತನೆ, ಪ್ರಯೋಗಗಳ ಸಂಕ್ಷಿಪ್ತ ಪರಿಚಯಾತ್ಮಕ ಬರವಣಿಗೆಯಾಗಿದೆ. ಆದರೆ ಅವರ ಶೈಕ್ಷಣಿಕ ಚಿಂತನೆಗಳ ಪ್ರಯೋಗಶೀಲತೆಗೆ ಸಂಬಂಧಿಸಿದಂತೆ ಸಮಗ್ರವಾಗಿ ಅಧ್ಯಯನ ನಡೆದಿಲ್ಲ. ಈ ಪ್ರಬಂಧದಲ್ಲಿ ಮೊದಲನೆಯ ಅಧ್ಯಾಯವು ಅಧ್ಯಯನ ಉದ್ದೇಶ ವ್ಯಾಪ್ತಿ ಮತ್ತು ಸ್ವರೂಪವನ್ನೊಳಗೊಂಡಿದೆ. ಎರಡನೆಯ ಅಧ್ಯಾಯವು ಕಾರಂತರ ಬದುಕು ಬರಹವನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಕಾರಂತರ ಜೀವನ ಬಾಲ್ಯದಿಂದ ಆರಂಭವಾಗಿ ವಿದ್ಯಾಭ್ಯಾಸ, ಕೌಟುಂಬಿಕ ಹಿನ್ನೆಲೆ ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸುವಿಕೆ ಮುಂತಾದ ವಿವರಗಳನ್ನು ಒಳಗೊಂಡಿದೆ. ಮೂರನೆಯ ಅಧ್ಯಾಯವು ಕಾರಂತರ ಶೈಕ್ಷಣಿಕ ಚಿಂತನೆಗಳು ಮತ್ತು ಪ್ರಯೋಗಗಳ ವಿಷಯವನ್ನು ಕುರಿತದ್ದಾಗಿದೆ. ಈ ಅಧ್ಯಾಯವು ಕಾರಂತರ ಶಿಕ್ಷಣದ ವಿವಿಧ ರೀತಿಯ ಪ್ರಯೋಗಗಳನ್ನು ತಿಳಿಸುತ್ತದೆ. ಮಕ್ಕಳ ನಾಟಕಗಳು, ಗದ್ಯಕೃತಿಗಳು, ಪದ್ಯಗಳು, ಮಕ್ಕಳ ಶಿಬಿರಗಳು ವಿವಿಧ ರೀತಿಯ ಕ್ರಿಯಾಶೀಲ ಚಟುವಟಿಕೆಗಳನ್ನು ಕುರಿತ ಸಂಕ್ಷಿಪ್ತ ಬರವಣಿಗೆಯಾಗಿದೆ. ನಾಲ್ಕನೆಯ ಅಧ್ಯಾಯವು ಕಾರಂತರ ಇತ್ಯಾತ್ಮಕ ಹಾಗೂ ನೇತ್ಯಾತ್ಮಕ ಅಂಶಗಳನ್ನು ಒಳಗೊಂಡಿದೆ. ಅವರ ಒಟ್ಟು ಶೈಕ್ಷಣಿಕ ಬರಹಗಳ ಇತಿಮಿತಿಗಳನ್ನು ಈ ಅಧ್ಯಾಯ ಒಳಗೊಂಡಿದೆ. ಒಟ್ಟಿನಲ್ಲಿ ಈ ಎಂ.ಫಿಲ್. ಪ್ರಬಂಧವು ಶಿವರಾಮ ಕಾರಂತರ ಶೈಕ್ಷಣಿಕ ವಿಚಾರ ಮತ್ತು ಪ್ರಯೋಗಗಳನ್ನು ಕುರಿತು ಸಂಕ್ಷಿಪ್ತವಾಗಿ ಪರಿಚಯಿಸುವ ಬರವಣಿಗೆಯಾಗಿದೆ.

ಕು.ಶಿ.ಹರಿದಾಸ ಭಟ್ಟ ಸಂಪಾದನೆಯ ನೇತೃತ್ವದಲ್ಲಿ 'ಕಾರಂತ ಪ್ರಪಂಚ' ಎಂಬ ಅಭಿನಂದನ ಗ್ರಂಥವನ್ನು ಹೊರತರಲಾಗಿದೆ. ೧೯೬೮ರಲ್ಲಿ ಕಾರಂತರ ಅಭಿನಂದನ ಸಮಿತಿ ಪರವಾಗಿ ಗೀತಾ ಬುಕ್ ಹೌಸ್, ಮೈಸೂರು ಇವರು ಪ್ರಕಟಪಡಿಸಿದ್ದಾರೆ. ಶಿವರಾಮ ಕಾರಂತರಿಗೆ ಅರವತ್ತು ವರ್ಷ ತುಂಬಿದಾಗ ಉಡುಪಿಯಲ್ಲಿ ಹುಟ್ಟುಹಬ್ಬದ ಸಂಭ್ರಮದ ಪ್ರಯುಕ್ತ ನಾಡಿನ

ಪ್ರಸಿದ್ಧ ಸಾಹಿತಿಗಳು ಕಾರಂತರ ಬಗ್ಗೆ ಅಭಿನಂದನ ಪರವಾದ ಕಿರುಪ್ರಬಂಧಗಳನ್ನು ರಚಿಸಿದರು. ಕನ್ನಡ ನಾಡಿನ ಸಾಹಿತ್ಯ, ಸಂಸ್ಕೃತಿ, ಶಿಕ್ಷಣ ಮುಂತಾದ ನಾನಾ ಕ್ಷೇತ್ರಗಳಲ್ಲಿ ದುಡಿದು ಅಪಾರ ಸಾಧನೆಯನ್ನು ಮಾಡಿದ ಕಾರಂತರಿಗೆ ಅಭಿನಂದನೆ ರೂಪದಲ್ಲಿ ಹಲವಾರು ಸಾಹಿತಿಗಳು ಈ ಕೃತಿಯ ಮೂಲಕ ಗೌರವ ಕಾಣಿಕೆಯನ್ನು ಸಲ್ಲಿಸಿದ್ದಾರೆ.

'ಕಾರಂತ ಪ್ರಪಂಚ' ಎಂಬ ಅಭಿನಂದನ ಕೃತಿಯಲ್ಲಿ ಮುಖ್ಯವಾಗಿ ವ್ಯಕ್ತಿ ಪ್ರಪಂಚ, ಕಲಾಪ್ರಪಂಚ, ಸಾಹಿತ್ಯಪ್ರಪಂಚ, ಕಾದಂಬರಿ ಪ್ರಪಂಚ, ಕೃತಿ ಮತ್ತು ಲೇಖನ ದರ್ಶಿಕೆ ಎಂಬ ಐದು ವಿಭಾಗಗಳಿವೆ. ಕಾರಂತರ ಕೃತಿ ಪ್ರಪಂಚದ ವಿಸ್ತಾರ ವೈವಿಧ್ಯತೆ ಮಹತ್ವ ಮುಂತಾದ ವಿಚಾರಗಳನ್ನು ಸುಮಾರು ಅರವತ್ತು ಮಂದಿ ಲೇಖಕರು ಇಲ್ಲಿ ವಿಶ್ಲೇಷಿಸಿದ್ದಾರೆ.

ಇದರಲ್ಲಿ ಮೂರನೆಯ ಭಾಗವಾದ ಸಾಹಿತ್ಯ ಪ್ರಪಂಚದಲ್ಲಿ ಯು.ಎಲ್. ಆಚಾರ್ಯ ಅವರು ಬಾಲಪ್ರಪಂಚ ಮತ್ತು ಅದ್ಭುತ ಜಗತ್ತು ಎಂಬ ಎರಡು ವಿಜ್ಞಾನ ಬರಹಗಳ ಕುರಿತು ಲೇಖನ ಬರೆದಿದ್ದಾರೆ. ಬಾಲಪ್ರಪಂಚ ಮತ್ತು ಅದ್ಭುತ ಜಗತ್ತಿನ ಈ ಗ್ರಂಥಗಳಲ್ಲಿನ ವೈಶಿಷ್ಟ್ಯಗಳೇನು? ಮತ್ತು ಇವೆಷ್ಟು ವ್ಯಾಪಕವಾಗಿವೆ? ಹಾಗೂ ಬಾಲಪ್ರಪಂಚದ ವಿಷಯದ ನಿರೂಪಣೆ ಮುಂತಾದ ಮುಖ್ಯ ವಿಚಾರಗಳನ್ನು ತಿಳಿಸಿದ್ದಾರೆ. ಅದ್ಭುತ ಜಗತ್ತು ಕೃತಿಯ ಕುರಿತು ಹಲವು ವಿಷಯಗಳನ್ನು ತಿಳಿಸಿದ್ದಾರೆ. ಮೊದಲನೆಯ ಭಾಗ ಹಾಗೂ ಎರಡನೆಯ ಭಾಗದಲ್ಲಿ ಯಾವ ಯಾವ ವಿವರಗಳು ಒಳಗೊಂಡಿವೆ ಎಂಬುದನ್ನು ತಿಳಿಸಿದ್ದಾರೆ. ಈ ಕೃತಿಗಳ ಹಿನ್ನೆಲೆ ಹಾಗೂ ಅವು ಸಮಾಜದ ಮೇಲೆ ಹೇಗೆ ಪರಿಣಾಮ ಬೀರಿದವು ಹಾಗೂ ಇವುಗಳ ಸಾಮಾಜಿಕ ಪ್ರತಿಕ್ರಿಯೆ ಏನು? ಎಂಬಂತಹ ಮುಂತಾದ ವಿಚಾರಗಳನ್ನು ಕುರಿತು ಚರ್ಚಿಸಿಲ್ಲ. ಹಾಗಾಗಿ ಪ್ರಸ್ತುತ ಪ್ರಬಂಧದಲ್ಲಿ ಈ ಎಲ್ಲಾ ವಿಚಾರಗಳ ಮೇಲೆ ಗಮನ ಹರಿಸಲಾಗಿದೆ.

ಜೆ.ಆರ್. ಲಕ್ಷ್ಮಣರಾವ್ ಅವರು 'ವಿಜ್ಞಾನ ಪ್ರಪಂಚ' ಎಂಬ ಗ್ರಂಥದ ಮೇಲೆ ಲೇಖನ ವನ್ನು ಬರೆದಿದ್ದಾರೆ. ಇದರಲ್ಲಿ ಕಾರಂತರು ವಿಜ್ಞಾನದ ಬರಹಗಳನ್ನು ಬರೆಯಲು ಕಾರಣಗಳೇನು ಎಂಬ ವಿವರಣೆಯನ್ನು ನೀಡಿದ್ದಾರೆ. ಪ್ರತಿಯೊಂದು ಸಂಪುಟದ ವಿವರಣೆಯನ್ನು ಒದಗಿಸಿದ್ದಾರೆ. ಕಾರಂತರು ರಚಿಸಿರುವ ವಿಜ್ಞಾನ ಸಾಹಿತ್ಯದ ಉದ್ದೇಶವೇನು? ಈ ಉದ್ದೇಶ ಎಷ್ಟರ ಮಟ್ಟಿಗೆ ಸಫಲವಾಗಿದೆ ಎಂಬ ವಿವರಗಳನ್ನೊಳಗೊಂಡಿದೆ.

'ಕನ್ನಡ ಸಾಹಿತ್ಯ ಈ ಶತಮಾನದ ನೋಟ' ಟಿ.ಪಿ. ಅಶೋಕ (ಸಂ) ಅವರ ಈ ಕೃತಿ ಯಲ್ಲಿ ಶಂ. ಬಾ. ಜೋಶಿ, ಬೆಟಗೇರಿ ಕೃಷ್ಣಶರ್ಮ, ಹಾ.ಮಾ. ನಾಯಕ, ಜಿ. ರಾಜಶೇಖರ, ಹ.ಪಿ. ಜೋಷಿ, ಮಹಾಬಲೇಶ್ವರರಾವ್, ವಿ.ಎಂ. ಇನಾಂದಾರ್, ಡಿ.ಎಸ್. ನಾಗಭೂಷಣ, ಕು.ಶಿ. ಹರಿದಾಸ ಭಟ್ಟ ಮೊದಲಾದವರು ಕಾರಂತರ ಶಿಕ್ಷಣಕ್ಷೇತ್ರಕ್ಕೆ ಸಂಬಂಧಿಸಿದಂತೆ ತಮ್ಮದೇ

ಆದ ವಾಖ್ಯಾನಗಳನ್ನು, ಹೇಳಿಕೆಗಳನ್ನು ನೀಡಿದ್ದಾರೆ. ಕಾರಂತರು ಶಿಕ್ಷಣಕ್ಷೇತ್ರದಲ್ಲಿ ಮಾಡಿರುವ ಸಾಧನೆ ಬಾಲವನ, ಮಕ್ಕಳ ಪಠ್ಯಪುಸ್ತಕಗಳ ರಚನೆ, ವಿಜ್ಞಾನದ ಬರಹಗಳು ವೈಚಾರಿಕ ಚಿಂತನೆಗಳನ್ನು ಮತ್ತು ಭಿನ್ನ ಭಿನ್ನ ಪ್ರಯೋಗಗಳ ಮಹತ್ವವನ್ನು ಕುರಿತು ವಿವಿಧ ಕಡೆಗಳಲ್ಲಿ ಪ್ರಕಟವಾಗಿರುವ ವಿಮರ್ಶಾತ್ಮಕ ಬರಹಗಳನ್ನು ಸಂಗ್ರಹಿಸಿ ಅವುಗಳಿಂದ ಕೆಲ ಸಾಲುಗಳನ್ನು ಮತ್ತು ಕಂಡಿಕೆಗಳನ್ನು ಆಯ್ದು ಜೋಡಿಸಿ ಈ ಪುಸ್ತಕವನ್ನು ಸಿದ್ಧಪಡಿಸಿದ್ದಾರೆ. ಆದರೂ ಅವರನ್ನು ಮುಖ್ಯವಾಗಿ ಕಾದಂಬರಿಕಾರರಾಗಿಯೇ ಗುರುತಿಸುವುದರಿಂದ ಈ ಕೃತಿಯಲ್ಲಿ ಬಹಳಷ್ಟು ಚರ್ಚೆಗಳ ವ್ಯಾಖ್ಯಾಗಳು ಕಾದಂಬರಿಗಳ ಮೇಲೆಯೇ ಸಿಗುತ್ತವೆ.

ಬಿ. ಮಾಲಿನಿ ಮಲ್ಯ ಅವರು ಬರೆದಿರುವ 'ಶಿವರಾಮ ಕಾರಂತ' ಎಂಬ ಪುಸ್ತಕವು ಕಾರಂತರ ಬದುಕು ಬರಹ, ಯಕ್ಷಗಾನ ಬಯಲಾಟ ಹಾಗೂ ಅವರ ಸಾಹಿತ್ಯ ಸಮೀಕ್ಷೆಯನ್ನು ಒಳಗೊಂಡಿದೆ. ಇದರಲ್ಲಿ ಮುಖ್ಯವಾಗಿ ಬಾಲ್ಯಜೀವನ, ವಿದ್ಯಾಭ್ಯಾಸ ಅಲ್ಲಿನ ಪರಿಸರದ ಪ್ರಭಾವ, ಸಾಹಿತ್ಯದ ರಚನೆ, ರಂಗಭೂಮಿ, ಯಕ್ಷಗಾನ, ಬಾಲಸಾಹಿತ್ಯ, ಸಣ್ಣಕಥೆಗಳು, ವಿಚಾರ ಸಾಹಿತ್ಯ, ವಿಜ್ಞಾನಸಾಹಿತ್ಯ, ವಯಸ್ಕರ ಶಿಕ್ಷಣ, ಕಲಾಪ್ರಪಂಚ ಪ್ರವಾಸಸಾಹಿತ್ಯ ಹೀಗೆ ಕಾರಂತರು ವಿವಿಧ ಕ್ಷೇತ್ರಗಳಲ್ಲಿ ಕೃಷಿ ಮಾಡಿರುವುದನ್ನು ಈ ಕೃತಿಯಲ್ಲಿ ಸಂಕ್ಷಿಪ್ತ ರೂಪದಲ್ಲಿ ತಿಳಿಸಲಾಗಿದೆ.

ತಾಳ್ತಜೆ ವಸಂತ ಕುಮಾರ ಅವರ 'ಶಿವರಾಮ ಕಾರಂತ' ಈ ಕೃತಿಯು ಕಾರಂತರ ಬದುಕು, ಬರಹ, ಪ್ರಯೋಗಶೀಲತೆ, ಸಣ್ಣಕಥೆ, ಕಾದಂಬರಿ, ಲಲಿತ ಪ್ರಬಂಧ, ಪ್ರವಾಸ, ಶಿಶು ಸಾಹಿತ್ಯ, ಆತ್ಮಚರಿತ್ರೆ ಮುಂತಾದ ವಿವರಗಳನ್ನು ಒಳಗೊಂಡ ಒಂದು ಪರಿಚಯಾತ್ಮಕ ಕೃತಿಯಾಗಿದೆ. ಇದರಲ್ಲಿ ಗದ್ಯಶಿಲ್ಪ ಎನ್ನುವ ಭಾಗದಲ್ಲಿ ಶಿಶುಸಾಹಿತ್ಯವನ್ನು ಕುರಿತು ತಿಳಿಸಲಾಗಿದೆ. ಮಕ್ಕಳ ಕುರಿತ ಬರಹಗಳ ಬಾಲಪ್ರಪಂಚ, ವಿಜ್ಞಾನಪ್ರಪಂಚ, ಮಕ್ಕಳಸಾಹಿತ್ಯ ಮುಂತಾದ ಪುಸ್ತಕಗಳ ಕುರಿತು ಈ ಕೃತಿಯಲ್ಲಿ ಪರಿಚಯಾತ್ಮಕ ಬರಹವಿದೆ.

ಬಿ. ಮಾಲಿನಿ ಮಲ್ಯ ಅವರ ಸಂಪಾದನೆಯ 'ಕಾರಂತ ಉವಾಚ' ಎಂಬ ಕೃತಿಯಲ್ಲಿ ಕಾರಂತರ ವಿವಿಧ ಗ್ರಂಥಗಳಲ್ಲಿ ವ್ಯಕ್ತವಾಗಿರುವ ಮಾತುಗಳನ್ನು ಸಂಗ್ರಹಿಸಿ ಈ ಪುಸ್ತಕವನ್ನು ಸಿದ್ಧಪಡಿಸಲಾಗಿದೆ. ಕಾರಂತರ ಶೈಕ್ಷಣಿಕ ಬರಹಗಳನ್ನು ಕುರಿತು ಮಾಲಿನಿ ಮಲ್ಯ ಅವರು ಹೇಳುವಂತೆ "ಉಪದೇಶಕನ ದೊಡ್ಡಸ್ತಿಕೆಯಿಲ್ಲ. ಸುಂದರವಾದ ಶಬ್ದಗಳಿಂದ ಮೋಡಿ ಮಾಡುವ ವಾಕ್ಯಗಳಿಂದ ಓದುಗರನ್ನು ಮರಳುಗೊಳಿಸುವ ಉದ್ದೇಶ ಅವಕ್ಕಿಲ್ಲ. ಅವರ ಮಾತಿನಲ್ಲಿ ಅಪಾರ ಅನುಭವವಿದೆ. ಅಧ್ಯಯನದ ಹೊಳಹಿದೆ. ಆಳವಾದ ಚಿಂತನೆಯಿದೆ. ವಿಶೇಷವಾದ ಸಾಮಾಜಿಕ ಕಳಕಳಿಯಿದೆ. ಅದರಲ್ಲಿ ಯಾವುದೇ ಸೋಗು ಕೃತ್ರಿಮಗಳ ಸೋಂಕು ಸಹ ಇಲ್ಲ." ಎಂದು ಈ ಪುಸ್ತಕದ ಮುನ್ನುಡಿಯಲ್ಲಿ ಹೇಳಿದ್ದಾರೆ. ಕಾರಂತರು ತಮ್ಮ ಜೀವನದ ಅನುಭವದಿಂದ ಹೇಳಿರುವ ಮಾತುಗಳನ್ನು ಸಂಗ್ರಹಿಸಲಾಗಿದೆ. ವ್ಯಕ್ತಿ ಮತ್ತು ಸಮಾಜ,

ಧರ್ಮ, ಸಂಸ್ಕೃತಿ, ಸಂಪ್ರದಾಯ, ಪ್ರಜಾಪ್ರಭುತ್ವ, ಭಾಷೆ, ಶಿಕ್ಷಣ, ಸಾಹಿತ್ಯ ಚಿಂತನ, ನಿಸರ್ಗ ಮುಂತಾದ ವಿಷಯಗಳ ಮೇಲೆ ಹೇಳಿರುವ ಹಲವಾರು ವ್ಯಾಖ್ಯಾಗಳಿವೆ. ಇದರಲ್ಲಿ ಭಾಷಾ ಶಿಕ್ಷಣ ಕುರಿತು ಕಾರಂತರು ನೀಡಿರುವ ವ್ಯಾಖ್ಯೆಗಳಲ್ಲಿ ಆಳವಾದ ಚಿಂತನೆ ಅನುಭವದ ಮಾತುಗಳನ್ನು ಈ ಕೃತಿಯಲ್ಲಿ ಕಾಣಬಹುದು.

ಎಸ್.ಕೆ. ಹೊಳೆಯಣ್ಣ ಅವರ 'ಡಾ. ಶಿವರಾಮ ಕಾರಂತ' ಎಂಬ ಪುಸ್ತಕವು ಕಾರಂತರ ಜೀವನ–ಸಾಧನೆ, ಕೃತಿಗಳ ಕಿರುಪರಿಚಯವನ್ನು ತಿಳಿಸುವ ಕೃತಿಯಿದು. ಅವರ ಜೀವನ–ಸಾಧನೆಗಳ ಜೊತೆಗೆ ಮಕ್ಕಳಿಗಾಗಿ ಕಾರಂತರು ಬರೆದ ಬರಹಗಳ ಮಹತ್ವವನ್ನು ತಿಳಿಸಿದ್ದಾರೆ.

ಕುರಾಡಿ ಸೀತಾರಾಮ ಅಡಿಗ ಅವರ 'ಕಾರಂತರ ಬದ್ಧತೆಯ ಬದುಕು' ಪುಸ್ತಕವು ಕಾರಂತರ ಜೀವನದ ರೀತಿ ಹಾಗೂ ಅವರ ಜೀವನದಲ್ಲಿ ನಡೆದ ಪ್ರಮುಖ ಘಟನೆಗಳನ್ನು ಒಳಗೊಂಡಿದೆ. ಇದರಲ್ಲಿ ಮುಖ್ಯವಾಗಿ ಕಾರಂತರು ಶೈಕ್ಷಣಿಕ ಪ್ರಯೋಗಗಳಾದ ಮಕ್ಕಳ ಕೂಟ, ಬಾಲವನ ಪ್ರಯೋಗಗಳನ್ನು ಕ್ವಚಿತ್ತಾಗಿ ತಿಳಿಸಿಕೊಟ್ಟಿದ್ದಾರೆ.

ಮಾಲಿನಿ ಮಲ್ಯ ಸಂಪಾದಿಸಿರುವ 'ಶಿವರಾಮ ಕಾರಂತರ ಲೇಖನಗಳು' ಎಂಬ ಕಾರಂತರ ಬಿಡಿ ಬರಹಗಳು, ವೈಚಾರಿಕ ಬರಹಗಳು, ವ್ಯಕ್ತಿಚಿತ್ರಗಳು, ವಿಮರ್ಶೆಗಳು, ಐತಿಹಾಸಿಕ, ರಾಜಕೀಯ, ಆರ್ಥಿಕ ವಿಚಾರಗಳು, ಕಲಾಜಗತ್ತು, ಸೃಜನಶೀಲ ಬಿಡಿ ಬರಹಗಳು, ನಾಡು ನಿಸರ್ಗ ಪರಿಸರ, ಅನುಭವಗಳು ಮತ್ತು ಸಾಹಿತ್ಯ ಚಿಂತನ ಭಾಷೆ, ಶಿಕ್ಷಣ ಸಂಶೋಧನೆ ಎಂಬ ಎಂಟು ಸಂಪುಟಗಳನ್ನು ಹೊರ ತಂದಿದ್ದಾರೆ. ಇದರಲ್ಲಿ ಕಾರಂತರ ಭಾಷೆ ಶಿಕ್ಷಣ ಸಂಶೋಧನೆಗೆ ಸಂಬಂಧಪಟ್ಟಂತೆ ಹಲವಾರು ಬಿಡಿ ಲೇಖನಗಳ ಮಾಹಿತಿ ಇದೆ.

ಕಾರಂತರ ಈ ಎಲ್ಲಾ ಬಿಡಿ ಲೇಖನಗಳನ್ನು, ವೈಚಾರಿಕ ಬರಹಗಳನ್ನು, ಸೃಜನಶೀಲ ಬಿಡಿ ಬರಹಗಳನ್ನು ಕುರಿತು ಬಂದಿರುವ ಎಲ್ಲ ಮಿಮರ್ಶಾ ಬರಹಗಳನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮುಖ್ಯವಾಗಿ ಕಾರಂತರು ತಮ್ಮ ಸಮಕಾಲೀನ ಶಿಕ್ಷಣಪದ್ಧತಿಯ ಕುರಿತು ನೀಡಿದ ಪ್ರತಿಕ್ರಿಯೆ, ಪ್ರಯೋಗಗಳು ಹಾಗೂ ಸ್ವಾತಂತ್ರ್ಯೋತ್ತರ ಶಿಕ್ಷಣವ್ಯವಸ್ಥೆಗೆ ಕಾರಂತರ ವಿಚಾರಗಳ ಮುಖಾಮುಖಿ ಮಾಡುವುದರ ಜೊತೆಗೆ ಅವರ ಎಲ್ಲಾ ಶೈಕ್ಷಣಿಕ ಬರಹಗಳು, ವ್ಯಕ್ತಪಡಿಸುವ ಮನೋಧರ್ಮ ಜೊತೆಗೆ ಶೈಕ್ಷಣಿಕ ವಿಚಾರಗಳು ಮತ್ತು ಪ್ರಯೋಗಗಳನ್ನು ಭಿನ್ನ ಆಯಾಮಗಳಿಂದ ಶೋಧಿಸುತ್ತಾ ಅವುಗಳ ಒಳನೋಟಗಳನ್ನು, ಸೂಕ್ಷ್ಮತೆಗಳನ್ನು ತಾತ್ವಿಕವಾಗಿ ಹುಡುಕುವ ಮಾದರಿಯಲ್ಲಿ ಈ ಅಧ್ಯಯನ ನಡೆದಿದೆ.

ಅಧ್ಯಾಯ ಎರಡು

# ವಸಾಹತುಶಾಹಿ ಶಿಕ್ಷಣ ಪದ್ಧತಿಯ ಸ್ವರೂಪ

೨.೧. ಭಾರತಕ್ಕೆ ಪಾಶ್ಚಾತ್ಯರ ಆಗಮನ

೨.೨. ಇಂಗ್ಲಿಷ್ ಶಿಕ್ಷಣ ಪ್ರಾರಂಭ

೨.೩. ಇಂಗ್ಲಿಷ್ ಶಿಕ್ಷಣದ ಉದ್ದೇಶಗಳು

೨.೪. ವಸಾಹತುಶಾಹಿ ಕಾಲದ ಪಠ್ಯಪುಸ್ತಕಗಳು

೨.೫. ಇಂಗ್ಲಿಷ್ ಶಿಕ್ಷಣದ ಬೆಳವಣಿಗೆ

೨.೬. ಶಿಕ್ಷಣದ ಮೇಲೆ ಮಿಶನರಿಗಳ ಪ್ರಭಾವ

೨.೭. ವಸಾಹತುಶಾಹಿ ಕಾಲಘಟ್ಟದಲ್ಲಿ ಶೈಕ್ಷಣಿಕ ಸುಧಾರಣೆಗಳು

೨.೮. ಆಂಗ್ಲ ವಿದ್ಯಾಭ್ಯಾಸದಿಂದ ಭಾರತೀಯ ಸಮಾಜದ ಮೇಲೆ ಉಂಟಾದ ಪ್ರಭಾವ

ಅಧ್ಯಾಯ ಎರಡು

## ವಸಾಹತುಶಾಹಿ ಶಿಕ್ಷಣ ಪದ್ಧತಿಯ ಸ್ವರೂಪ

೧೮ನೇ ಶತಮಾನದವರೆಗೆ ಈ ದೇಶದಲ್ಲಿ ರಾಜರು, ನವಾಬರು ಸುಲ್ತಾನರು ಮೊದಲಾದವರು ಆಳ್ವಿಕೆ ಮಾಡುತ್ತಿದ್ದರು. ರಾಜ್ಯದ ವಿಸ್ತರಣೆಗಾಗಿ ದ್ವೇಷ, ವೈರತ್ವಗಳಿಂದ ಕಾದಾಡುತ್ತಿದ್ದರು. ಇವರ ಅಧಿಕಾರವು ಆಯಾ ಕ್ಷೇತ್ರಗಳಿಗೆ ಮಾತ್ರ ಸಿಮೀತವಾಗಿರುತಿತ್ತು. ಒಂದೊಂದು ರಾಜವಂಶಗಳು ನೂರು, ನೂರೈವತ್ತು ವರ್ಷಗಳ ಕಾಲ ರಾಜ್ಯಭಾರ ನಡೆಸಿದವು. ರಾಜರ ಆಡಳಿತವು ಮುಖ್ಯವಾಗಿ ಜನರಿಂದ ತೆರಿಗೆ ವಸೂಲಿ ಮಾಡುವುದು ಮತ್ತು ನೆರೆ ರಾಜ್ಯಗಳೊಡನೆ ಯುದ್ಧ ಸಾರುವುದು, ರಾಜ್ಯದ ಗಡಿಗಳನ್ನು ವಿಸ್ತಾರ ಮಾಡುವುದಾಗಿತ್ತು. ಇದು ಅವರ ಗುರಿಯೂ ಆಗಿತ್ತು. ದೇಶದ ಜನರ ವಿದ್ಯೆ, ಆರೋಗ್ಯ, ವ್ಯವಸಾಯ, ವ್ಯಾಪಾರಾಭಿವೃದ್ಧಿ ಇತ್ಯಾದಿಗಳ ಬಗ್ಗೆ ಹೆಚ್ಚು ಗಮನವನ್ನು ಕೊಡುತ್ತಿರಲಿಲ್ಲ. ಆಳುವ ವರ್ಗದ ಈ ರೀತಿಯ ಪ್ರತಿಗಾಮಿತನದಿಂದಾಗಿ ಆ ಕಾಲದ ಶಿಕ್ಷಣ ಎಂಬುದು ಕೆಲವೇ ಜನರ ಸ್ವತ್ತಾಗಿತ್ತು. ಮುಖ್ಯವಾಗಿ ಅಂದಿನ ಶಿಕ್ಷಣವು ವರ್ಗ ಪ್ರಧಾನವಾಗಿತ್ತು. ಸಮಾಜದಲ್ಲಿರುವ ಪ್ರತಿಷ್ಠಿತ ವರ್ಗಗಳಿಗೆ ಮತ್ತು ಮೇಲಿನ ಜಾತಿಯವರಿಗೆ ಮಾತ್ರ ಶಿಕ್ಷಣ ದೊರೆಯುತ್ತಿತ್ತು. ಸಮಾಜದಲ್ಲಿದ್ದ ಜಾತಿ ಪದ್ಧತಿಯಿಂದ ಕೆಳಜಾತಿಯವರು ಶಿಕ್ಷಣದ ಅವಕಾಶದಿಂದ ವಂಚಿತರಾಗಿದ್ದರು. ಆದರೂ ತಮ್ಮ ಕುಲಕಸುಬನ್ನು ಪರಂಪರಾಗತವಾಗಿ ಕಲಿಯುತ್ತಿದ್ದರು. ೧೯ನೇ ಶತಮಾನದಲ್ಲಿ ಬ್ರಿಟಿಷರು ಭಾರತದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದಕ್ಕೂ ಮುಂಚೆಯೇ ಭಾರತದಲ್ಲಿ ಹಲವಾರು ದೇಶೀಯ ಶಾಲೆಗಳು ಅಸ್ತಿತ್ವದಲ್ಲಿದ್ದವು. ಐಗಳ ಮಠಗಳು, ದೇವಾಲಯ

ಗಳು ಪಾಠಶಾಲೆಗಳಾಗಿದ್ದವು. ಇವು ಸಾಂಪ್ರದಾಯಿಕ, ಧಾರ್ಮಿಕ ಮತ್ತು ಆಧ್ಯಾತ್ಮಿಕ ಶಿಕ್ಷಣವನ್ನು ನೀಡುತ್ತಿದ್ದವು. ಪ್ರಾಥಮಿಕ ಶಿಕ್ಷಣವನ್ನು ದೇವಾಲಯಗಳಲ್ಲಿ ಕಲಿಸುತ್ತಿದ್ದರು. ಹೀಗೆ ದೇವಾಲಯಗಳೇ ಶಾಲೆಗಳಾದ ಪರಿಣಾಮವಾಗಿ ಕೆಳಜಾತಿಯ ಜನರು ಶಿಕ್ಷಣದಿಂದ ವಂಚಿತರಾದರು. ರಾಜರು ಈ ಶಾಲೆಗಳಿಗೆ ದಾನ ದತ್ತಿಗಳನ್ನು ನೀಡುತ್ತಿದ್ದರು. ಆಯಾ ಊರಿನ ಜಮೀನ್ದಾರರು ಮತ್ತು ಶ್ರೀಮಂತರು ಶಿಕ್ಷಕರನ್ನು ತಮ್ಮ ಮನೆಯಲ್ಲೇ ನೇಮಕಗೊಳಿಸಿ ಮಕ್ಕಳಿಗೆ ಶಿಕ್ಷಣವನ್ನು ಕಲಿಸುತ್ತಿದ್ದರು. ಕಲಿಯಲು ಬಯಸುವವರು ವರ್ಷದ ಯಾವುದೇ ಕಾಲದಲ್ಲಾದರೂ ಮತ್ತು ಯಾವುದೇ ಸಮಯದಲ್ಲಿ ಶಾಲೆಗೆ ಸೇರಬಹುದಿತ್ತು.

**ವಸಾಹತುಶಾಹಿ ಪೂರ್ವ ಶಿಕ್ಷಣ**

ಪ್ರಾಚೀನ ಕಾಲದಿಂದಲೂ ಶಿಕ್ಷಣವು ಭಾರತೀಯರ ಜೀವನದ ಅವಿಭಾಜ್ಯ ಅಂಗವಾಗಿತ್ತು. ಜೀವನದ ಪ್ರಥಮ ಹಂತದ ಬ್ರಹ್ಮಚರ್ಯ ಆಶ್ರಮದಲ್ಲಿ ಉಪನಯನ ದೀಕ್ಷೆಯ ನಂತರ ಪ್ರಾರಂಭಿಕ ೨೫ ವರ್ಷಗಳು ವಿದ್ಯಾಭ್ಯಾಸಕ್ಕೆ ಮೀಸಲಾಗಿತ್ತು. ಮುಂದಿನ ಹಂತಗಳು ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸವನ್ನು ಹೊಂದಿ ತಪಸ್ಸಿಗೆ ಹೊಗುತ್ತಿದ್ದರು. ಘಟಿಕಾಸ್ಥಾನ ಮತ್ತು ಪಾಠಶಾಲೆಗಳು ವಿದ್ಯಾಭ್ಯಾಸವನ್ನು ನೀಡುತ್ತಿದ್ದವು. ಹತ್ತೊಂಬತ್ತನೆ ಶತಮಾನದಲ್ಲಿನ ಪ್ರಾಥಮಿಕ ಶಿಕ್ಷಣ ಪದ್ಧತಿಯ ತರಗತಿಗಳು ಖಾಸಗಿ ಗೃಹಗಳ ಕೊಠಡಿಗಳಲ್ಲಿ ಅಥವಾ ಮರಗಳ ಕೆಳಗಿನ ಬಯಲಿನಲ್ಲಿ ನಡೆಯುತ್ತಿದ್ದವು. ಶಿಕ್ಷಣಕ್ಕಾಗಿ ಕಟ್ಟಲಾದ ಶಾಲೆಯ ಕಟ್ಟಡಗಳು ತೀರಾ ಅಪರೂಪವಾಗಿದ್ದವು.

ಶಿಕ್ಷಕರ ಸಂಬಳ ಸಾಮಾನ್ಯವಾಗಿ ಅತ್ಯಲ್ಪವಾಗಿರುತ್ತಿತ್ತು. ಅವರು ತಮ್ಮ ಜೀವನೋಪಾಯಕ್ಕಾಗಿ ಬೇರೆ ಆದಾಯ ಮಾರ್ಗಗಳನ್ನು ಹೊಂದಿದ್ದರು. ಹಾಗೂ ಕೆಲ ಶಿಕ್ಷಕರು ಉಚಿತವಾಗಿ ಬೋಧಿಸುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ ಸಾಮಾನ್ಯವಾಗಿ ಅಧ್ಯಾಪಕರು ಸರಿಯಾದ ವಿಷಯ ಜ್ಞಾನವಿಲ್ಲದೆ ಅಧ್ಯಾಪಕ ವೃತ್ತಿಯನ್ನು ಮಾಡುತ್ತಿದ್ದರು.

ಮುಖ್ಯವಾಗಿ ಅಂದಿನ ಪ್ರಾಥಮಿಕ ಶಿಕ್ಷಣವು ಓದುವುದು, ಬರೆಯುವುದು ಮತ್ತು ಅಲ್ಪ-ಸ್ವಲ್ಪ ಗಣಿತದ ಪರಿಚಯ ಮಾಡಿಕೊಡುವುದಾಗಿತ್ತು. ಇಷ್ಟೇ ವಿಷಯಗಳನ್ನು ಕಲಿಯಲು ವಿದ್ಯಾರ್ಥಿಗಳಿಗೆ ಆರೇಳು ವರ್ಷಗಳು ಹಿಡಿಯುತ್ತಿತ್ತು. ಇದರ ನಂತರ ಅಧ್ಯಯನವನ್ನು ಮುಂದುವರೆಸಬೇಕಾದರೆ ಇವೇ ವಿಷಯಗಳನ್ನು ವಿಸ್ತಾರವಾಗಿ ಕಲಿಯುತ್ತಿದ್ದರು.

ಮುದ್ರಿತ ಪುಸ್ತಕಗಳನ್ನಾಗಲಿ ಅಥವಾ ಹಸ್ತಪ್ರತಿ ಗ್ರಂಥಗಳನ್ನಾಗಲಿ ಅವರು ಕಂಡಿರಲಿಲ್ಲ. ಕೇವಲ ಗುರುಗಳು ಬಾಯಿಪಾಠದ ಮುಖಾಂತರ ಬೋಧಿಸುತ್ತಿದ್ದರು. ರಾಮಾಯಣ, ಮಹಾಭಾರತ ಮುಂತಾದ ಕಾವ್ಯ ಕಥೆಗಳನ್ನು ಪಾಠ ಮಾಡುತ್ತಿದ್ದರು. ಜೊತೆಗೆ ಶಾಲೆಗಳಲ್ಲಿ ಶಿಸ್ತು ಸಹ

ಕಟ್ಟುನಿಟ್ಟಾಗಿತ್ತು. ಇಂತಹ ಕ್ರಮಬದ್ಧವಾದ ಶಾಲೆಗಳ ಜೊತೆಗೆ ವಂಶೀಯವಾಗಿ ಬೆಳೆದು ಬಂದ ಮತ್ತು ತಂದೆಯಿಂದ ಮಗನಿಗೆ ಕಲಿಸಲ್ಪಡುತ್ತಿದ್ದ ಸಾಮಾಜಿಕ ವ್ಯವಹಾರಕ್ಕೆ ಸಂಬಂಧಿಸಿದ ಬರವಣಿಗೆ, ಭಾಷೆ ಮತ್ತು ಲೆಕ್ಕ ಪದ್ಧತಿಗಳು ರೂಢಿಯಲ್ಲಿದ್ದವು. ವಿದ್ಯಾರ್ಥಿಗಳ ಪಾಲಿಗೆ ಶಾಲೆಗಳೆಂದರೆ ಭಯಾನಕ ಮತ್ತು ಹಿಂಸಾತ್ಮಕ ಸೆರೆಮನೆಗಳಾಗಿದ್ದವು. ಕಂಠಪಾಠವನ್ನು ಸರಿಯಾಗಿ ಒಪ್ಪಿಸದಿದ್ದರೆ ಬಲವಾಗಿ ಬೆನ್ನಿನ ಮೇಲೆ ಗುದ್ದುವುದು, ಕೆನ್ನೆಯನ್ನು ಜಿಗುಟುವುದು, ಕಿವಿ ಹಿಂಡುವುದು, ಬೆತ್ತದೇಟುಗಳು ಸಾಮಾನ್ಯವಾಗಿ ವಿಧಿಸುತ್ತಿದ್ದ ಶಿಕ್ಷೆಗಳಾಗಿದ್ದವು.

ಉನ್ನತ ಶಿಕ್ಷಣದಲ್ಲಿ ಸಾಹಿತ್ಯ, ಧರ್ಮಶಾಸ್ತ್ರ ಮತ್ತು ತರ್ಕಶಾಸ್ತ್ರಗಳನ್ನು ಅಧ್ಯಯನ ಮಾಡುತ್ತಿದ್ದರು. ಸಾಹಿತ್ಯ ಭಾಗದಲ್ಲಿ ವ್ಯಾಕರಣ ಕೋಶ, ಕಾವ್ಯ, ನಾಟಕ ಮತ್ತು ಅಲಂಕಾರ ಶಾಸ್ತ್ರಗಳು ಸೇರಿದ್ದವು. ವ್ಯಾಕರಣವು ಅಧ್ಯಯನದ ಅಚ್ಚುಮೆಚ್ಚಿನ ವಿಷಯವಾಗಿತ್ತು. ನಾಟಕಗಳಲ್ಲಿ ಕಾಳಿದಾಸನ ಅಭಿಜ್ಞಾನ ಶಾಕುಂತಲ, ಧರ್ಮಶಾಸ್ತ್ರ ಮತ್ತು ನೀತಿಶಾಸ್ತ್ರಗಳಲ್ಲಿ ಮನುಧರ್ಮಶಾಸ್ತ್ರ ಮಿತಾಕ್ಷರ, ಮತ್ತು ದತ್ತಕ ಮೀಮಾಂಸೆ ಇತ್ಯಾದಿಗಳಿದ್ದವು. ಪುರಾಣಗಳಲ್ಲಿ ಭಾಗವತ ಪುರಾಣ ಬಹುವ್ಯಾಪಕ ಜನಪ್ರಿಯತೆಯನ್ನು ಪಡೆದಿತ್ತು.

ಬ್ರಿಟಿಷರು ಭಾರತಕ್ಕೆ ಬರುವ ಪೂರ್ವದಲ್ಲಿ ನಮ್ಮ ದೇಶದಲ್ಲಿ ಪ್ರಾಥಮಿಕ ಶಿಕ್ಷಣವನ್ನು ನೀಡುವ ಮಠಗಳು ಇದ್ದವು. ಅಲ್ಲಿ ಕಡತ, ಹಸ್ತಪ್ರತಿಗಳ ಮೂಲಕ ಮಕ್ಕಳಿಗೆ ಓದು–ಬರಹ ಗಳನ್ನು ಕಲಿಸಿಕೊಡಲಾಗುತ್ತಿತ್ತು. ಬಾಯಿಲೆಕ್ಕದ ಮೂಲಕ ಗಣಿತವನ್ನು ಕಲಿಯುತ್ತಿದ್ದರು. ಹಿರಿಯ ವಿದ್ಯಾರ್ಥಿಗಳು ಕಿರಿಯ ವಿದ್ಯಾರ್ಥಿಗಳಿಗೆ ಪಾಠವನ್ನು ಹೇಳಿಕೊಡುವುದು ಈ ಮಠಗಳ ವೈಶಿಷ್ಟ್ಯವಾಗಿತ್ತು. ಹಲವಾರು ಜನ ತಮ್ಮ ಮಕ್ಕಳಿಗೆ ಮನೆಯಲ್ಲಿಯೇ ಪ್ರಾಥಮಿಕ ಮಟ್ಟದ ವಿದ್ಯೆಯನ್ನು ಕಲಿಸುತ್ತಿದ್ದರು. ಸಮಾಜದ ವ್ಯವಹಾರಕ್ಕೆ ಅಗತ್ಯವಿರುವ ಶಿಕ್ಷಣವನ್ನು ಹೆಚ್ಚಿನ ವೆಚ್ಚವಿಲ್ಲದೆ ಕಲಿಸಿಕೊಡಲಾಗುತ್ತಿತ್ತು. ರಾಮಾಯಣ, ಮಹಾಭಾರತ, ಕುಮಾರವ್ಯಾಸ ಭಾರತ, ಜೈಮಿನಿ ಭಾರತ, ರಾಜಶೇಖರ ವಿಳಾಸ, ಹರಿಭಕ್ತಸಾರ, ದಾಸರ ಹಾಡುಗಳು ಸರ್ವಜ್ಞನ ತ್ರಿಪದಿಗಳು ಮುಂತಾದ ಕಾವ್ಯಗಳನ್ನು ಶಾಲೆಗಳಲ್ಲಿ ಕಲಿಸಿಕೊಡಲಾಗುತ್ತಿತ್ತು. ಅನಕ್ಷರಸ್ಥರು ಈ ಬಗೆಯ ಕಾವ್ಯಗಳನ್ನು ಕಂಠಪಾಠಮಾಡಿ ಹಾಡುತ್ತಿದ್ದರು.

ಮೈಸೂರು ಸಂಸ್ಥಾನದ ಮುಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಕಾಲದ ಪಾಠಶಾಲೆಗಳಲ್ಲಿ ಓದು–ಬರಹ, ಲೆಕ್ಕಚಾರ, ಕಾಗದ ಪತ್ರಗಳನ್ನು ಓದುವುದು, ಕನ್ನಡ ಜೈಮಿನಿ ಭಾರತ, ರಾಮಾಯಣ, ಮಹಾಭಾರತ, ಭಾಗವತ ಪುರಾಣ, ಇತಿಹಾಸ ಗ್ರಂಥಗಳ ಪಠಣ ಇವುಗಳಲ್ಲದೆ ಕನ್ನಡಿಗರಿಗೆ ಕಬ್ಬಿಗರ ಕೈಪಿಡಿ, ತೆಲುಗಿನವರೆಗೆ ಆಂಧ್ರನಾಮ ಸಂಗ್ರಹ ಮುಂತಾದ ಕೋಶಗಳು, ನೀತಿಪಾಠ ಪಂಚಾಗ ನಕ್ಷತ್ರಗಳ ಸಾಮಾನ್ಯ ಲಕ್ಷಣಗಳನ್ನು ಕಲಿಸುತ್ತಿದ್ದರು.

ಉಚ್ಚ ಶಿಕ್ಷಣವು ಪ್ರಾಚೀನ ಕಾವ್ಯ ಹಾಗೂ ಧಾರ್ಮಿಕ ಶಾಸ್ತ್ರ ಗ್ರಂಥಗಳ ಅಧ್ಯಯನವು ವಿವಿಧ ಮತಗಳ ಮಠಗಳಲ್ಲಿಯೂ ಮತ್ತು ಪಂಡಿತರ ಮಠಗಳಲ್ಲಿಯೂ ನಡೆಯುತ್ತಿತ್ತು. ಶಾಸ್ತ್ರ ಶಿಕ್ಷಣ ವಿಷಯದಲ್ಲಿ ಮೈಸೂರು ನಗರವು ಭಾರತದ ಇತರ ಪಟ್ಟಣಗಳಿಗಿಂತ ಮುಂದಿತ್ತು. ಹೊರಗಿನ ವಿದ್ವಾಂಸರು ರಾಜರಿಂದ ಪ್ರೋತ್ಸಾಹವನ್ನು ಪಡೆದುಕೊಳ್ಳುತ್ತಿದ್ದರು. ಪ್ರೌಢಶಾಸ್ತ್ರ ಅಭ್ಯಾಸ ಮಾಡುವವರು ವಿದ್ವಾಂಸರ ಬಳಿಗೆ ಹೋಗಿ ವಿದ್ಯೆಯನ್ನು ಪಡೆದುಕೊಳ್ಳುತ್ತಿದ್ದರು. ಪ್ರತಿಯೊಬ್ಬ ಗುರುಗಳು ವಿದ್ಯಾರ್ಥಿಗಳಿಗೆ ವಿದ್ಯೆಯೊಂದಿಗೆ ಅನ್ನದಾನವನ್ನು ಮಾಡುತ್ತಿದ್ದರು.

**ಭಾರತಕ್ಕೆ ಪಾಶ್ಚಾತ್ಯರ ಆಗಮನ**

ಪಾಶ್ಚಾತ್ಯ ದೇಶಗಳಿಂದ ಕ್ರೈಸ್ತ ಗುರುಗಳು ಇತರ ಪ್ರವಾಸಿಗರು ಸುಮಾರು ೨೦೦೦ ವರ್ಷಗಳಿಂದಲೇ ಈ ದೇಶಕ್ಕೆ ಬರುತ್ತಿದ್ದರೂ ಕ್ರಿ.ಶ. ೧೬ನೇ ಶತಮಾನದಿಂದ ಇವರ ಸಂಖ್ಯೆ ಹೆಚ್ಚಾಯಿತು. ತಮ್ಮ ತಮ್ಮ ದೇಶಗಳಲ್ಲಿದ್ದ ವ್ಯಾಪಾರಿ ಸಂಸ್ಥೆಗಳ ಮೂಲಕ ಪೋರ್ಚುಗೀಸರು, ಡಚ್ಚರು ಪ್ರಾರಂಭದಲ್ಲಿ ಈ ದೇಶಕ್ಕೆ ಬಂದು ಕರಾವಳಿ ಸೀಮೆಯಲ್ಲೆಲ್ಲಾ ವ್ಯಾಪಾರ ವಸತಿಗಳನ್ನು ನಿರ್ಮಿಸಿದರು. ಕ್ರಿ.ಶ. ೧೭ನೇ ಶತಮಾನದ ಆರಂಭದಿಂದ ಬ್ರಿಟಿಷರು, ಫ್ರೆಂಚರು ಬಂದು ಅದೇ ರೀತಿಯಲ್ಲಿ ಈ ದೇಶದ ರಾಜರ ಮತ್ತು ಸ್ಥಳೀಯ ಪ್ರಮುಖರ ಅನುಮತಿಯನ್ನು ಪಡೆದು ವ್ಯಾಪಾರಕ್ಕೆ ತೊಡಗಿದರು. ೧೭ನೇ ಶತಮಾನದಲ್ಲಿ ಡಚ್ಚರು ಮತ್ತು ಪೋರ್ಚುಗೀಸರು ದೇಶದ ತುಂಬಾ ಸುತ್ತಾಡಿ ಹಲವಾರು ವ್ಯಾಪಾರ ಕೇಂದ್ರಗಳನ್ನು ಸ್ಥಾಪನೆ ಮಾಡಿ ಪೂರ್ವಾಭಿ ಮುಖವಾಗಿ ಇತರ ದೇಶಗಳತ್ತ ಹೊರಟುಹೋದರು. ಕೆಲವರು ಮಾತ್ರ ಇಲ್ಲೇ ಉಳಿದರು. ಪೋರ್ಚುಗೀಸರು ವಶಪಡಿಸಿಕೊಂಡಿದ್ದ ಗೋವಾ ಪ್ರದೇಶವು ನಾಲ್ಕು ನೂರು ವರ್ಷಗಳಷ್ಟು ಕಾಲ ವಸಾಹತು ಕೇಂದ್ರವಾಗಿತ್ತು. ಭಾರತಕ್ಕೆ ಕ್ರಿ.ಶ. ೧೫ನೇ ಶತಮಾನದಿಂದ ಪಾಶ್ಚಾತ್ಯರ ಸಂಪರ್ಕವಿದ್ದರೂ ಭಾರತೀಯರ ಜನಜೀವನದ ಮೇಲೆ ಅವರ ಪ್ರಭಾವ ಅಷ್ಟೇನು ಪರಿಣಾಮ ಕಾರಿಯಾಗಿರಲಿಲ್ಲ. ಕ್ರಿ.ಶ. ೧೭೫೭ರಲ್ಲಿ ಬಂಗಾಳದ ಸಿರಾಜುದ್ದೌಲನು ಪ್ಲಾಸಿ ಕದನದಲ್ಲಿ ಸೋತಂದಿನಿಂದ ಪಾಶ್ಚಾತ್ಯರ ಪ್ರಭಾವದ ನಾಂದಿ ಆರಂಭವಾಯಿತು. ಮುಂಬಾಯಿ, ಮದ್ರಾಸ್, ಮುಂತಾದ ಪ್ರಮುಖ ಸ್ಥಳಗಳು ಬ್ರಿಟಿಷರ ವ್ಯಾಪಾರ, ವ್ಯವಹಾರ ಕೇಂದ್ರಗಳಾದವು. ಕ್ರಿ.ಶ. ೧೮೦೮ರಲ್ಲಿ ಲಾರ್ಡ್ ವೆಲ್ಲೆಸ್ಲಿ ಜಾರಿಗೆ ತಂದ ಸಹಾಯಕ ಸೈನ್ಯಪದ್ಧತಿಯು ಆಚರಣೆಯಲ್ಲಿ ಬಂದಾಗ ಬ್ರಿಟಿಷರ ವ್ಯಾಪಾರದ ಉದ್ದೇಶವು ಸಂಪೂರ್ಣವಾಗಿ ಮರೆಯಾಗಿ ರಾಜಕೀಯಕ್ಕೆ ಅವಕಾಶ ಮಾಡಿಕೊಟ್ಟಿತು. ಸಹಾಯಕ ಸೈನ್ಯಪದ್ಧತಿಯಿಂದ ಬ್ರಿಟಿಷರು ಉತ್ತರ ಭಾರತದ ಹಲವಾರು ಪ್ರದೇಶಗಳನ್ನು ಗೆದ್ದರು. ಕರ್ನಾಟಕದ ಹೈದರ್ ಮತ್ತು ಟಿಪ್ಪುಸುಲ್ತಾನರು ಬ್ರಿಟಿಷರ ವಿರುದ್ಧ ತಿರುಗಿಬಿದ್ದರು. ಆದರೆ ಕ್ರಿ.ಶ. ೧೮೯೯ರಲ್ಲಿ ಶ್ರೀರಂಗಪಟ್ಟಣದ ಯುದ್ಧದಲ್ಲಿ ಟಿಪ್ಪುಸುಲ್ತಾನನು ಮಡಿದಾಗ ಬ್ರಿಟಿಷರಿಗೆ ಅನೇಕ ಪ್ರದೇಶಗಳು ಕೈವಶವಾದವು.

## ಇಂಗ್ಲಿಷ್ ಶಿಕ್ಷಣ ಪ್ರಾರಂಭ

೧೯ನೇ ಶತಮಾನದಲ್ಲಿ ಭಾರತಕ್ಕೆ ಪಾಶ್ಚಾತ್ಯ ಸಂಪರ್ಕವು ಮುಖ್ಯವಾಗಿ ಆಡಳಿತ ವ್ಯವಹಾರ, ಮುದ್ರಣಯಂತ್ರ, ಕ್ರಿಸ್ತಮತ ಪ್ರಚಾರ ಮತ್ತು ಶಿಕ್ಷಣ ಪದ್ಧತಿ ಈ ನಾಲ್ಕು ಬಗೆಯಲ್ಲಿ ಒದಗಿಬಂದಿತು. ಬ್ರಿಟಿಷರ ಆಡಳಿತ ವ್ಯವಹಾರವು ಸಾಮಾನ್ಯ ಭಾರತೀಯರಿಗೆ ಆಶ್ಚರ್ಯವನ್ನುಂಟು ಮಾಡಿತು. ಕೆಲವೇ ಬ್ರಿಟಿಷ್ ಅಧಿಕಾರಿಗಳು ಭಾರತವನ್ನು ಸಮರ್ಥವಾಗಿ ನಿಯಂತ್ರಿಸುತ್ತಿರುವುದನ್ನು ನೋಡಿ ಭಾರತೀಯರು ಬೆರಗಾದರು. ಯುರೋಪಿನ ಔದ್ಯೋಗಿಕ ಸುಧಾರಣೆಗಳಾದ ಉದ್ಯಮ, ಕೈಗಾರಿಕೆಗಳು ಅದಕ್ಕೆ ಸಂಬಂಧಿಸಿದ ಯಂತ್ರ ಸಾಮಗ್ರಿಗಳು ಆಧುನಿಕ ಸಂಚಾರ, ಸಾಧನಗಳು, ಭಿನ್ನವಾದ ಪಾಶ್ಚಾತ್ಯ ನಾಗರಿಕತೆಯು ಇಲ್ಲಿನ ಜನಕ್ಕೆ ಆಕರ್ಷಕವಾಗಿ ತೋರಿತು. ಅವರ ಆಡಳಿತದ ವ್ಯವಹಾರಿಕ ದೃಷ್ಟಿ, ಜಾತಿ, ಮೇಲುಕೀಳೆನ್ನದ ವ್ಯವಹಾರ ಇದು ಭಾರತೀಯರ ವ್ಯವಹಾರಿಕ ದೃಷ್ಟಿಯನ್ನು ಬದಲಿಸತೊಡಗಿತು.

ಭಾರತದಲ್ಲಿ ಮುದ್ರಣ ಯಂತ್ರ ಆರಂಭದಿಂದ ಶೈಕ್ಷಣಿಕ ಹಾಗೂ ಸಾಹಿತ್ಯಿಕ ರಂಗದಲ್ಲಿ ಕ್ರಾಂತಿಯನ್ನುಂಟು ಮಾಡಿತು. ಮುದ್ರಣ ಯಂತ್ರದ ಜೊತೆಗೆಬಂದ ಮಿಶನರಿಗಳು ಕ್ರೈಸ್ತಮತ ಪ್ರಚಾರದ ಕಾರ್ಯದಲ್ಲಿ ತೊಡಗಿದವು. ಧರ್ಮವನ್ನು ಭಾರತದಲ್ಲಿ ಹೆಚ್ಚು ಪ್ರಸಾರ ಮಾಡಬೇಕೆಂದರೆ ದೇಶ ಭಾಷೆಗಳಲ್ಲಿಯೇ ಗ್ರಂಥಗಳನ್ನು ಬರೆದು ಮುದ್ರಿಸಬೇಕು ಎನ್ನುವ ವಿಚಾರದಿಂದ ಪಾದ್ರಿಗಳು ಸ್ಥಳೀಯ ಭಾಷೆಗಳಲ್ಲಿ ಕೃತಿಗಳನ್ನು ಮುದ್ರಿಸಲು ಮುಂದಾದರು.

> ಬಂಗಾಳದ ಶ್ರೀರಾಂಪುರ ಪ್ರೆಸ್ಸಿನಲ್ಲಿ ಕ್ರಿ.ಶ. ೧೮೧೭ರಂದು ಕನ್ನಡದ ಮೊದಲ ಕೃತಿ ವಿಲಿಯಂ ಕೇರಿ ಅವರ **ಎ ಗ್ರಾಮರ್ ಆಫ್ ಕರ್ನಾಟಕ ಲಾಂಗ್ವೇಜ್** ಪ್ರಕಟವಾಯಿತು. ಮಂಗಳೂರು ಬಾಸೆಲ್ ಮಿಷನ್ ಮುದ್ರಣ ಕಾರ್ಯದಲ್ಲಿ ಅತ್ಯಂತ ಪ್ರಮುಖವಾದ ಪಾತ್ರವನ್ನು ವಹಿಸಿತು.[೧]

ಬ್ರಿಟಿಷ್ ಆಡಳಿತಕ್ಕೆ ಸೇರಲು ಮತ್ತು ವ್ಯಾಪಾರ ವಹಿವಾಟು ನಡೆಸುವ ಸಲುವಾಗಿ ಕಲ್ಕತ್ತಾ, ಬೊಂಬಾಯಿ, ಮದ್ರಾಸಿನ ಜನರು ಇಂಗ್ಲಿಷ್ ಭಾಷೆಯ ಜ್ಞಾನವನ್ನು ಪಡೆದು ಕೊಳ್ಳಲೇಬೇಕಾಯಿತು. ಆದರೆ ಆ ಕಾಲದಲ್ಲಿ ಇಂಗ್ಲಿಷ್ ಭಾಷೆಯನ್ನು ಕಲಿಸುವ ಯಾವ ಕ್ರಮಬದ್ಧ ವ್ಯವಸ್ಥೆಯು ಇರಲಿಲ್ಲ.

## ಲಾರ್ಡ್ ಮೆಕಾಲೆ

೧೮೩೪ರಲ್ಲಿ ಭಾರತಕ್ಕೆ ಬಂದ ಥಾಮಸ್ ಮೆಕಾಲೆಯವರು ಕಾನೂನು ಸಮಿತಿಯ ಸದಸ್ಯರಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ಮೆಕಾಲೆಯವರು ಭಾರತಕ್ಕೆ ಬರುವ ಮುಂಚೆ ದೇಶಿಯ ಶಿಕ್ಷಣ ನೀತಿಯ ಬಗ್ಗೆ ಯಾವ

ರೀತಿಯ ಶಿಕ್ಷಣವನ್ನು ಜಾರಿಗೆ ತರಬೇಕೆಂಬ ವಿಷಯದಲ್ಲಿ ಭಿನ್ನಭಿಪ್ರಾಯಗಳಿದ್ದವು. ಪೌರಾತ್ಯವಾದಿಗಳು ಸಂಸ್ಕೃತ, ಅರೇಬಿಕ್, ಪರ್ಶಿಯನ್ ಭಾಷೆಗಳಲ್ಲಿರುವ ರಾಮಾಯಣ, ಮಹಾಭಾರತ, ಉಪನಿಷತ್ ಇವುಗಳನ್ನೆಲ್ಲಾ ಕಲಿಸಬೇಕೆಂಬ ವಾದವಾದರೆ, ಪಾಶ್ಚಾತ್ಯವಾದಿಗಳು ಇಂಗ್ಲಿಷ್ ಭಾಷೆ ಸಂಪದ್ಭರಿತ ಭಾಷೆ; ಆಧುನಿಕ ವಿಜ್ಞಾನ, ತಂತ್ರಜ್ಞಾನವನ್ನು ಒಳಗೊಂಡಿರುವ ಆಂಗ್ಲ ಶಿಕ್ಷಣವನ್ನು ನೀಡಬೇಕೆಂಬುದಾಗಿತ್ತು. ಇಂತಹ ಸಂದರ್ಭದಲ್ಲಿ ಭಾರತಕ್ಕೆ ಬಂದ ಮೆಕಾಲೆಯು ಭಾರತೀಯರಿಗೆ ಎಂಥಹ ಶಿಕ್ಷಣವನ್ನು ನೀಡಬೇಕೆಂದು ವರದಿಯನ್ನು ತಯಾರಿಸಿ ತನ್ನ ಶಿಫಾರಸ್ಸನ್ನು ೧೮೩೫ರಲ್ಲಿ ಬೆಂಟಿಕ್‌ಗೆ ನೀಡಿದ. ಭಾರತೀಯರಿಗೆ ಅತ್ಯಗತ್ಯವಾಗಿದ್ದ ವಿಜ್ಞಾನದ ಪರಿಕಲ್ಪನೆ ಮೂಡಿಸಲು ಆಂಗ್ಲ ಮಾಧ್ಯಮ ಶಿಕ್ಷಣವೇ ಸೂಕ್ತವಾದುದೆಂದು ಪ್ರತಿಪಾದಿಸಿದ. ದೇಶಿಯ ಭಾಷೆಗಳನ್ನು ತಿರಸ್ಕರಿಸಿದ. ಭಾರತವನ್ನು ಆಳುವ ವರ್ಗವು ಆಂಗ್ಲಭಾಷೆಯಲ್ಲಿಯೇ ಮಾತನಾಡುತ್ತಿದ್ದರಿಂದ ಮುಂದೆ ಆ ಭಾಷೆಯು ವ್ಯವಹಾರ ಭಾಷೆಯಾಗಿ ಬೆಳೆಯುವುದಕ್ಕೆ ಅವಕಾಶವನ್ನು ಮಾಡಿದ. ಆಂಗ್ಲ ಶಿಕ್ಷಣವನ್ನು ಪಡೆದವರಿಗೆ ಉದ್ಯೋಗವಕಾಶವನ್ನು ಸೃಷ್ಟಿಸಿದ. ಇದರಿಂದ ಸರಕಾರ ಹಾಗೂ ಜನರ ಮಧ್ಯೆ ಸಂಪರ್ಕ ಸುಲಭವಾಗುತ್ತದೆ ಎಂದು ವಾದಿಸಿದ.

> ಗವರ್ನರ್ ಜನರಲ್ ಲಾರ್ಡ್ ವಿಲಿಯಂ ಬೆಂಟಿಕ್ ಅವರು ಮೆಕಾಲೆಯ ಶಿಫಾರಸ್ಸು ಪರಿಗಣಿಸಿ ೧೮೩೫ರಲ್ಲಿ ಜಾರಿಗೆ ತಂದ ಇದರಿಂದ ಭಾರತದಲ್ಲಿ ಇಂಗ್ಲಿಷ್ ಶಿಕ್ಷಣಕ್ಕೆ ಅಧಿಕೃತ ಮನ್ನಣೆ ಸಿಕ್ಕಿತು.[೨]

ಮೆಕಾಲೆಯ ಸಲಹೆಯ ಮೇರೆಗೆ ಇಂಗ್ಲಿಷ್ ವಿದ್ಯಾಪ್ರಚಾರಕ್ಕಾಗಿ ಸಾರ್ವಜನಿಕ ಶಾಲೆಗಳನ್ನು ತೆರೆಯಲಾಯಿತು. ಆಯಾ ಪ್ರಾಂತ್ಯಗಳು ಮತ್ತು ಸಂಸ್ಥಾನಗಳಲ್ಲಿ ಆಯಾ ಪ್ರಾಂತ್ಯ ಭಾಷೆಗಳಲ್ಲೇ ಪ್ರಾಥಮಿಕ ಶಿಕ್ಷಣ ಆರಂಭವಾದರೂ ಈ ದೇಶದಲ್ಲಿ ಆಡಳಿತ ನಡೆಸುತ್ತಿದ್ದ ಬ್ರಿಟಿಷ್ ಅಧಿಕಾರಿಗಳ ಮಕ್ಕಳ ಶಿಕ್ಷಣಕ್ಕಾಗಿ ಇಂಗ್ಲಿಷ್ ಶಾಲೆಗಳನ್ನು ತೆರೆಯಲಾಯಿತು. ಇಂತಹ ಶಾಲೆಗಳನ್ನು ಸಾರ್ವಜನಿಕ ಶಾಲೆಗಳೆಂದು ಕರೆಯ ಲಾಯಿತು.

ಇಂಗ್ಲೆಂಡಿನ ಕ್ರೈಸ್ತ ಮಿನಶನರಿಗಳು ಧರ್ಮ ಪ್ರಚಾರವನ್ನೇ ಮುಖ್ಯ ಉದ್ದೇಶವಾಗಿ ಹೊಂದಿದ್ದರೂ ಶಿಕ್ಷಣ ಪ್ರಸಾರಕ್ಕಾಗಿ ಶಾಲೆಗಳನ್ನು ಪ್ರಾರಂಭಿಸಿದರು. ಇವೇ ಕಾನ್ವೆಂಟ್ ಶಾಲೆಗಳಾದವು. ಅತ್ಯಂತ ಸಮರ್ಪಣ ಮನೋಭಾವದಿಂದ ದುಡಿಯುವಂತಹ ಫಾದರ್‌ಗಳು ಮತ್ತು ಸಿಸ್ಟರ್‌ಗಳು ಈ ಶಿಕ್ಷಣ ಸಂಸ್ಥೆಗಳಲ್ಲಿ ಬೋಧಕರಾದರು. ಇವುಗಳೆಲ್ಲವು ಇಂಗ್ಲಿಷ್ ಮಾಧ್ಯಮ ಶಾಲೆಗಳೇ ಆಗಿದ್ದವು. ಬ್ರಿಟಿಷ್ ಅಧಿಕಾರಿಗಳ ಮಿತ್ರತ್ವವನ್ನು ಗಳಿಸಿದ್ದ ಹಲವು ದೇಶಿಯ ಶ್ರೀಮಂತರು ಮತ್ತು ಜಮೀನ್ದಾರರು ಆಡಳಿತ ವರ್ಗದವರ ಸಾಮೀಪ್ಯವನ್ನು ಸಾಧಿಸುವುದಕ್ಕಾಗಿ ತಮ್ಮ ಮಕ್ಕಳನ್ನು ಇಂಗ್ಲಿಷ್ ಶಾಲೆಗಳಲ್ಲಿ ಕಲಿಸುವ ಪ್ರಯತ್ನ ಮಾಡಿದರು.

ಕ್ರಮೇಣ ಇಂಗ್ಲಿಷ್ ಶಾಲೆಗಳಲ್ಲಿ ಅಭ್ಯಾಸ ಮಾಡುವುದು ಒಂದು ಪ್ರತಿಷ್ಠೆಯ ಸಂಕೇತವಾಯಿತು. ಮುಂದೆ ಇಂಗ್ಲಿಷ್ ಶಾಲೆಗಳು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿಯೂ ಪ್ರಾರಂಭವಾದವು. ಸಾಮಾನ್ಯವಾಗಿ ಪ್ರೌಢಶಿಕ್ಷಣವೆಲ್ಲಾ ಇಂಗ್ಲಿಷ್ ಮಾಧ್ಯಮದಲ್ಲೇ ನಡೆಯುತ್ತಿತ್ತು. ಪ್ರಾಥಮಿಕ ಶಾಲೆಗಳು ದೇಶೀಯ ಭಾಷಾ ಮಾಧ್ಯಮದಲ್ಲೇ ನಡೆಯುತ್ತಿದ್ದವು. ಅವುಗಳನ್ನು ಮಾತೃಭಾಷಾ ಶಾಲೆಗಳಂದೇ ಕರೆಯುತ್ತಿದ್ದರು. ಮಧ್ಯಮ ವರ್ಗ ಮತ್ತು ಸಾಮಾನ್ಯ ವರ್ಗದವರು ಜನರ ಮಕ್ಕಳು ಇಂಥಹ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿದ್ದರು. ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗೆ ಈ ಇಂಗ್ಲಿಷ್ ಮಾಧ್ಯಮ ಪ್ರೌಢಶಾಲೆಗಳಲ್ಲಿ ವ್ಯಾಸಂಗ ಮಾಡುವುದು ಕಷ್ಟವಾಗುತ್ತಿತ್ತು. ವಿಷಯ ಗ್ರಹಿಕೆಗೆ ಭಾಷೆ ತೊಡಕಾಗುತ್ತಿದ್ದರಿಂದ ಎಷ್ಟೋ ವಿದ್ಯಾರ್ಥಿಗಳು ಅಂತಿಮ ಪರೀಕ್ಷೆಯಲ್ಲಿ ತೇರ್ಗಡೆಯಾಗುವುದೆ ಕಷ್ಟವಾಗುತ್ತಿತ್ತು. ಈ ಪರೀಕ್ಷೆಯಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಅನುತ್ತೀರ್ಣ ರಾದವರು ಕಾಲೇಜು ವಿದ್ಯಾಭ್ಯಾಸಕ್ಕೆ ಅನರ್ಹರಾಗುತ್ತಿದ್ದರು. ಸಾರ್ವಜನಿಕ ಸೇವಾ ಕಾರ್ಯಗಳಿಗೆ ಅರ್ಹರಾಗುತ್ತಿದ್ದರು. ಇಂಥವರು ಕಾಲೇಜು ಶಿಕ್ಷಣಕ್ಕೆ ಪ್ರವೇಶ ಪಡೆಯಬೇಕಾದರೆ ಎಸ್.ಎಸ್. ಎಲ್.ಸಿ. ಇಂಗ್ಲಿಷ್ ಭಾಷೆಯಲ್ಲಿ ತೇರ್ಗಡೆಯಾಗುವುದು ಕಡ್ಡಾಯವಾಗಿತ್ತು. ಹೀಗೆ ಆಯ್ಕೆಯಾದವರು ಕಾಲೇಜು ಶಿಕ್ಷಣಕ್ಕೂ ಸಾರ್ವಜನಿಕ ಸೇವೆಗೂ ಅರ್ಹರಾಗಿದ್ದು ಯಾವುದನ್ನು ಬೇಕಾದರೂ ಆಯ್ಕೆ ಮಾಡಿಕೊಳ್ಳಬಹುದಾಗಿತ್ತು. ಪ್ರೌಢಶಾಲೆಗಳಲ್ಲಿ ದೇಶಭಾಷಾ ಕನ್ನಡ ಮಾಧ್ಯಮಕ್ಕೆ ಅವಕಾಶವಿರಲಿಲ್ಲ. ಆದುದರಿಂದ ಎಷ್ಟೋಮಂದಿ ಗ್ರಾಮೀಣ ವಿದ್ಯಾರ್ಥಿಗಳು ಕೇವಲ ಲೊಯರ್ ಸೆಕಂಡರಿಗೆ ತೃಪ್ತಿಪಟ್ಟುಕೊಳ್ಳಬೇಕಾಗಿತ್ತು.

೧೯ನೇ ಶತಮಾನದ ನಂತರ ಬಂಗಾಳದ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಭಾಷೆಯ ಮಹತ್ವ ಅರಿವಾಗತೊಡಗಿತು. ವಿದ್ಯಾವಂತ ಇಂಗ್ಲಿಷ್ ಜನರೊಡನೆ ಅವರ ಸಂಪರ್ಕ ಹೆಚ್ಚಿದಂತೆಲ್ಲ ಇಂಗ್ಲಿಷ್ ಭಾಷೆಯ ಅಗತ್ಯವನ್ನು ಮನಗಂಡರು. ಅದರಂತೆ ಕಲ್ಕತ್ತಾ ಮತ್ತು ಅದರ ಸುತ್ತಮುತ್ತಲಿನ ಕೆಲ ಪ್ರದೇಶಗಳಲ್ಲಿ ಇಂಗ್ಲಿಷ್ ಭಾಷೆಯನ್ನು ಕಲಿಸುವುದಕ್ಕೋಸ್ಕರ ಶಾಲೆಗಳು ಸ್ಥಾಪಿಸಲ್ಪಟ್ಟವು. ಆದರೆ ಕ್ರಿ.ಶ. ೧೮೧೭ರವರೆಗೆ ಇಂಗ್ಲಿಷ್ ಶಿಕ್ಷಣದ ಕುರಿತು ಸರಿಯಾದ ಪ್ರಯತ್ನಗಳು ನಡೆದಿರಲಿಲ್ಲ. ಕ್ರಿ.ಶ. ೧೮೧೭ರಲ್ಲಿ ಕಲ್ಕತ್ತಾ ಬುಕ್ ಸ್ಕೂಲ್ ಸೊಸೈಟಿಯು ಶಾಲೆಗಳಿಗೆ ಸೂಕ್ತವಾದ ಇಂಗ್ಲಿಷ್ ಮತ್ತು ದೇಶಿಯ ಭಾಷೆಗಳ ಪುಸ್ತಕಗಳನ್ನು ಒದಗಿಸುವುದಾಗಿತ್ತು. ಈ ಸಂಸ್ಥೆಯು ಪಠ್ಯಪುಸ್ತಕಗಳನ್ನು ತಯಾರಿಸಿ ಅಚ್ಚುಮಾಡಿ ಪ್ರಕಟಿಸುವ ಕಾರ್ಯವನ್ನು ಕೈಗೊಂಡಿತ್ತು. ಇಂತಹ ಪುಸ್ತಕಗಳನ್ನು ಸುಲಭ ಬೆಲೆಗೆ ಮಾರಾಟ ಮಾಡುವುದು ಇಲ್ಲವೇ ಉಚಿತವಾಗಿ ವಿತರಿಸಲಾಗುತ್ತಿತ್ತು.

ಈ ಸಂಸ್ಥೆಯ ಸ್ಥಾಪನೆಯ ನಂತರ ಇಂಗ್ಲಿಷ್ ಭಾಷೆಯನ್ನು ಕಲಿಸಲು ಶಾಲೆಗಳ ಅಗತ್ಯವಾಯಿತು. ಈ ಉದ್ದೇಶಕ್ಕಾಗಿ ೧೮೧೮ ಸೆಪ್ಟೆಂಬರ್ ೧ರಂದು ಕಲ್ಕತ್ತಾದಲ್ಲಿ ಒಂದು

ಸಭೆಯನ್ನು ನಡೆಸಲಾಯಿತು. ಈ ಸಭೆಯಲ್ಲಿ ಕಲ್ಕತ್ತಾ ಸ್ಕೂಲ್ ಸೊಸೈಟಿ ಎಂಬ ಪ್ರತ್ಯೇಕ ಸಂಸ್ಥೆಯನ್ನು ಸ್ಥಾಪಿಸಲು ತೀರ್ಮಾನಿಸಲಾಯಿತು. ಕಲ್ಕತ್ತಾದಲ್ಲಿ ಈಗಾಗಲೇ ಇರುವ ಶಾಲೆಗಳಿಗೆ ನೆರವನ್ನು ಕೊಟ್ಟು ಅವುಗಳನ್ನು ಸುಧಾರಿಸುವುದು ಮತ್ತು ಅಗತ್ಯಕ್ಕೆ ತಕ್ಕಂತೆ ಹೊಸ ಶಾಲೆಗಳನ್ನು ಸ್ಥಾಪಿಸುವುದು ಆ ಸಂಸ್ಥೆಯ ಉದ್ದೇಶವಾಗಿತ್ತು. ವಿದ್ಯಾರ್ಥಿಗಳ ಉನ್ನತ ವ್ಯಾಸಂಗಕ್ಕೆ ಪ್ರೌಢ ವಿದ್ಯಾಶಾಲೆಗಳನ್ನು ಸ್ಥಾಪಿಸುವುದು ಪ್ರಮುಖ ಉದ್ದೇಶವಾಗಿತ್ತು. ಉನ್ನತ ವ್ಯಾಸಂಗ ಮಾಡಿದವ ರನ್ನು ಸಮರ್ಥ ಶಿಕ್ಷಕರಾಗಲು ಅನುವು ಮಾಡಿಕೊಡುವುದು, ೧೮೧೭ ಜನವರಿ ೧೨ರಂದು ಕಲ್ಕತ್ತಾದಲ್ಲಿ ಸ್ಥಾಪಿತವಾದ ಹಿಂದೂ ಕಾಲೇಜು ಬಂಗಾಳದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ಹರಡಲು ನೆರವಾಗುವಲ್ಲಿ ಅತಿಮುಖ್ಯ ಸಂಸ್ಥೆಯಾಗಿತ್ತು. ಇಂಗ್ಲಿಷ್ ಭಾಷೆಯನ್ನು ಕಲಿಸುವುದೇ ಇದರ ಮುಖ್ಯ ಉದ್ದೇಶವಾಗಿತ್ತು. ಅನಂತರ ಅಗತ್ಯವಾದರೆ ಪರ್ಷಿಯನ್, ಲೆಕ್ಕ, ಇತಿಹಾಸ, ಭೂಗೋಳ, ಖಗೋಳ ಶಾಸ್ತ್ರ, ಗಣಿತವನ್ನು ಕಲಿಸುವುದು ಹಾಗೂ ಹಣ ಹೆಚ್ಚು ಹೆಚ್ಚು ಶೇಖರವಾದಂತೆ ಸೂಕ್ತ ಕಾಲದಲ್ಲಿ ಇಂಗ್ಲಿಷ್, ಲಲಿತ ಸಾಹಿತ್ಯ ಮುಂತಾದವುಗಳನ್ನು ಕಲಿಸಲು ಪ್ರಾರಂಭಿಸಿದರು.

**ಇಂಗ್ಲಿಷ್ ಶಿಕ್ಷಣದ ಉದ್ದೇಶಗಳು**

ಬ್ರಿಟಿಷರು ಭಾರತಕ್ಕೆ ಬಂದು ಭದ್ರವಾಗಿ ನೆಲೆಯೂರಿದ ಮೇಲೆ ಆಡಳಿತವನ್ನು ನಡೆಸಲು ನಿರ್ದಿಷ್ಟ ರಾಜಕೀಯ ನೀತಿ, ಆಡಳಿತಾತ್ಮಕ ಕ್ರಮ, ನಾಗರಿಕ ಸಮಾಜದ ಪರಿಕಲ್ಪನೆಯನ್ನು ಜಾರಿಗೆ ತರುವ ಪ್ರಯತ್ನ ಮಾಡಿದರು. ಮುಖ್ಯವಾಗಿ ಅವರಿಗೆ ಬೇಕಾದ ಆಡಳಿತ ನೀತಿಯನ್ನು ವಿಸ್ತರಿಸುವ ಉದ್ದೇಶವಿತ್ತು. ಅವರ ಆಡಳಿತಕ್ಕೆ ಬೇಕಾದ ಎಲ್ಲಾ ಜನರನ್ನು ಇಂಗ್ಲೆಂಡಿನಿಂದಲೇ ಕಳುಹಿಸುವುದು ತುಂಬಾ ಕಷ್ಟಕರವಾಗಿತ್ತು. ಭಾರತದಲ್ಲಿದ್ದ ಹಲವಾರು ಭಾಷೆಗಳು ಮತ್ತು ಸಂಸ್ಕೃತಿಯು ಬ್ರಿಟಿಷರಿಗೆ ಸಂಪೂರ್ಣವಾಗಿ ಅರ್ಥವಾಗುತ್ತಿರಲಿಲ್ಲ. ಆದ್ದರಿಂದ ಏಕಭಾಷೆಯಲ್ಲಿ ಇಂಗ್ಲಿಷ್ ಶಿಕ್ಷಣ ನೀಡಲು ಪ್ರಾರಂಭಿಸಿದರು. ಅವರಿಗೆ ಏಕಭಾಷಾ ಸೂತ್ರತೆಯನ್ನು ತಂದಷ್ಟು ಆಡಳಿತ ನಡೆಸಲು ಅನುಕೂಲವಾಗುತ್ತಿತ್ತು. ಒಮ್ಮೆ ಒಂದು ಭಾಷೆಯನ್ನು ಸಮಾಜದಲ್ಲಿ ನೆಲೆ ಗೊಳಿಸಿದರೆ ಉಳಿದಂತೆ ವ್ಯವಹಾರಿಕವಾಗಿ ಅವರಿಗೆ ತೊಂದರೆಯಾಗಲಾರದು ಎಂಬುದು ಅವರ ದೃಢವಾದ ನಂಬಿಕೆಯಾಗಿತ್ತು. ಭಾರತದಲ್ಲಿರುವ ಪಾರಂಪರಿಕ ಶಿಕ್ಷಣವನ್ನು ತಿರಸ್ಕಾರ ಮಾಡಿ ಪಾಶ್ಚಿಮಾತ್ಯ ಶಿಕ್ಷಣವನ್ನು ಎತ್ತಿಹಿಡಿಯುವುದು ಅವರ ಮುಖ್ಯ ಉದ್ದೇಶವಾಗಿತ್ತು. ಶಿಕ್ಷಣಕ್ಕಾಗಿ ಮೀಸಲಿಟ್ಟ ಹಣವನ್ನು ಇಂಗ್ಲಿಷ್ ಶಿಕ್ಷಣಕ್ಕೆ ಮಾತ್ರ ಖರ್ಚುಮಾಡಬೇಕೆಂದು ತೀರ್ಮಾನಿಸಿದರು. ಆಡಳಿತ ಕಾಲದಲ್ಲಿ ವಸಾಹತು ಕೇಂದ್ರದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇಂಗ್ಲಿಷ್ ಭಾಷೆಯನ್ನು ಕಲಿಯಲು ಭಾರತೀಯರನ್ನು ಪ್ರೋತ್ಸಾಹಿಸುತ್ತಿದ್ದರು. ಭಾರತೀಯರು ಇಂಗ್ಲೀಷನ್ನು ಕಲಿಯು ವುದರಿಂದ ಅವರಿಗೆ ಆಗುವ ಪ್ರಯೋಜನೆಗಳ ಬಗ್ಗೆ ಅರಿವು ಮೂಡಿಸುತ್ತಿದ್ದರು. ಜೊತೆಗೆ ಹಲವಾರು ಆಮಿಷಗಳನ್ನು ಒಡ್ಡುತ್ತಿದ್ದರು. ಸಾರ್ವಜನಿಕ ಸೇವೆಯಲ್ಲಿ ಯುರೋಪಿಯನ್ನರ

ಸಂಖ್ಯೆಯನ್ನು ಕಡಿಮೆಮಾಡಿ ಅವರ ಸ್ಥಾನದಲ್ಲಿ ಭಾರತೀಯರ ನೇಮಕದಿಂದ ಆರ್ಥಿಕವಾಗಿ ತುಂಬಾ ಲಾಭವಿತ್ತು. ಇದರಿಂದ ಆಂಗ್ಲ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ದೊರೆಯಿತು.

ಭಾರತದ ಪಾರಂಪರಿಕ ಶಿಕ್ಷಣವನ್ನು ಟೀಕಿಸುತ್ತಿದ್ದ ಬ್ರಿಟಿಷರು ಇಲ್ಲಿನ ಶಿಕ್ಷಕರು ಸೂಕ್ತ ಅರ್ಹತೆಯನ್ನು ಪಡೆದಿರಲಿಲ್ಲವೆಂಬುದು ಹಾಗೂ ಅವರು ಆರ್ಥಿಕ ವರಮಾನಕ್ಕಾಗಿ ಬೇರೆ ವೃತ್ತಿಗಳನ್ನು ಕೈಗೊಳ್ಳುತ್ತಿದ್ದರೆಂಬ ವಿವಿಧ ಕಾರಣಗಳಿಂದಾಗಿ ಟೀಕಿಸುತ್ತಿದ್ದರು. ಅಂದಿನ ಅನೇಕ ಶಿಕ್ಷಕರು ಅಚ್ಚಾಗಿದ್ದ ಪುಸ್ತಕವನ್ನೇ ಕಂಡಿರಲಿಲ್ಲ. ಹಾಗೆಯೇ ಹಸ್ತಪ್ರತಿಗಳು ಕೂಡ ಅವರಿಗೆ ಗೊತ್ತಿರಲಿಲ್ಲ. ಬ್ರಿಟಿಷ್ ಜ್ಞಾನವು ಮೇಲ್ಪದರದ್ದಾಗಿತ್ತು. ಕೃಷಿ ಮತ್ತು ವಾಣಿಜ್ಯಕ್ಕೆ ಸಂಬಂಧಿಸಿದ ಲೆಕ್ಕಪತ್ರಗಳನ್ನು ಮಾತ್ರ ಹೇಳಿಕೊಡುತ್ತಿದ್ದರು. ಇದರಿಂದ ವಿದ್ಯಾರ್ಥಿಗಳ ಮನಸ್ಸು ವಿಶಾಲಗೊಳಿಸುವ ಬದಲು ಸೀಮಿತವಾಗಿತ್ತು. ದೇಶಭಾಷೆಯ ಕಾಗುಣಿತವನ್ನು ಕಲಿಯಲು ಅಥವಾ ದೇಶದ ಭೂಗೋಳ ಅಥವಾ ಇತಿಹಾಸದ ಜ್ಞಾನವನ್ನು ಪಡೆದುಕೊಳ್ಳಲು ಯಾವುದೇ ಪ್ರಯತ್ನಗಳು ನಡೆದಿರಲಿಲ್ಲ. ಬ್ರಿಟಿಷ್ ಶಿಕ್ಷಣ ಪದ್ಧತಿಯು ಅತ್ಯಂತ ವೈಚಾರಿಕತೆಯಿಂದ ಕೂಡಿದೆಯೆಂದು ತಮ್ಮ ಪದ್ಧತಿಯ ಎಲ್ಲಾ ಉದ್ದೇಶಗಳಿಗೂ ಸೂಕ್ತವಾಗಿದೆಯೆಂದು ತಿಳಿಸುತ್ತಿದ್ದರು.

ದೇಶಿಯ ಪದ್ಧತಿಯ ಶಿಕ್ಷಣದ ಅತೀ ಮುಖ್ಯ ಲಕ್ಷಣವೆಂದರೆ ಅದು ಬಾಯಿಪಾಠ ಮಾಡುವ ಕಸರತ್ತಾಗಿತ್ತು. ದೇಶೀಯ ಶಿಕ್ಷಣ ಪದ್ಧತಿಯು ಶ್ರೀಮಂತ ಹಿಂದೂ ಮತ್ತು ಮುಸ್ಲಿಂ ಕುಟುಂಬಗಳು ಸ್ವ-ಇಚ್ಛೆಯಿಂದ ಕೊಡುವ ವಂತಿಗೆ ಮತ್ತು ಬೆಂಬಲ, ದಾನವಾಗಿ ಕೊಟ್ಟ ಭೂಮಿ ಅಥವಾ ಹಣ, ವಸತಿ ಸೌಕರ್ಯ ಇವುಗಳ ರೂಪದಲ್ಲಿ ವಿದ್ವಾಂಸರಿಗೆ ಕೊಡುವ ಪ್ರೋತ್ಸಾಹವನ್ನು ಅವಲಂಬಿಸಿತ್ತು. ಶಿಕ್ಷಕರು ದತ್ತಿಯನ್ನು ಮತ್ತು ಇತರ ಆಶ್ರಯದಾರರನ್ನು ಅವಲಂಬಿಸಿದ್ದರು. ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಮುಂದುವರಿಸಲು ಗುರುಗಳ ಆಶ್ರಮಗಳಿಗೆ ತೆರಳುತ್ತಿದ್ದರು. ವಿದ್ಯಾರ್ಥಿಗಳಿಂದ ಶಿಕ್ಷಕರಿಗೆ ಯಾವುದೇ ಸಂಭಾವನೆ ಸಲ್ಲುತ್ತಿರಲಿಲ್ಲ.

**ವಸಾಹತುಕಾಲದ ಶಿಕ್ಷಣ ಪದ್ಧತಿಯ ಸ್ವರೂಪ**

ವ್ಯಾಪಾರ ಉದ್ದೇಶದಿಂದ ಆಗಮಿಸಿದ ಬ್ರಿಟಿಷರು ಕಾಲಾನಂತರದಲ್ಲಿ ರಾಜಕೀಯ ಉದ್ದೇಶದಿಂದ ಸ್ಥಾನವನ್ನು ಭದ್ರಪಡಿಸಿಕೊಂಡರು. ಭಾರತದ ಪ್ರಮುಖ ನಗರಗಳನ್ನು ವ್ಯಾಪಾರ ಕೇಂದ್ರಗಳನ್ನಾಗಿ ಮಾಡಿಕೊಂಡರು. ಭಾರತವನ್ನು ಸಂಪೂರ್ಣವಾಗಿ ಸ್ವಾಧೀನ ಪಡಿಸಿಕೊಂಡ ನಂತರ ಈ ವಿಶಾಲ ದೇಶವನ್ನು ಆಳಲು ಮತ್ತು ಭಾರತೀಯರನ್ನು ಅಧೀನದಲ್ಲಿಟ್ಟುಕೊಳ್ಳಲು ಹಾಗೂ ತಮ್ಮ ಅನುಕೂಲಕ್ಕೆ ತಕ್ಕಂತೆ ಶಿಕ್ಷಣವನ್ನು ರೂಪಿಸಿದರು. ೧೮೩೫ರಲ್ಲಿ ಮೆಕಾಲೆ ಶಿಕ್ಷಣ ಪದ್ಧತಿಯಂತೆ ಭಾರತದಲ್ಲಿ ಹಲವಾರು ಶಾಲಾ ಕಾಲೇಜುಗಳು ಹುಟ್ಟಿಕೊಂಡವು. ಈ ಶಾಲೆಗಳಲ್ಲಿ ಇಂಗ್ಲಿಷ್ ಶಿಕ್ಷಣವನ್ನೇ ಪ್ರಧಾನವಾಗಿ ಜಾರಿಗೆ ತರಲಾಯಿತು. ಇದರಿಂದ ಭಾರತದಲ್ಲಿ

ಹೆಚ್ಚಾಗಿ ಇಂಗ್ಲಿಷ್ ಶಿಕ್ಷಣವನ್ನೇ ಪ್ರಚಾರ ಮಾಡಲಾಯಿತು. ಭಾರತೀಯ ಶಿಕ್ಷಣವು ವಸಾಹತು ಕಾಲದಲ್ಲಿ ಹಿಮ್ಮುಖವಾಯಿತು. ಇಂಗ್ಲಿಷ್ ಜೀವನವು ಭಾರತೀಯರಿಗೆ ಆಕರ್ಷಕವಾಗಿ ಕಂಡಿತು. ಅಂದಿನ ರಾಜಾರಾಮ ಮೋಹನ್‌ರಾಯರಂಥಹ ಪ್ರಭಾವಿ ವ್ಯಕ್ತಿಗಳು ಇಂಗ್ಲಿಷ್ ವಿದ್ಯಾಭ್ಯಾಸವನ್ನು ಕುರಿತು ಪ್ರಚಾರವನ್ನು ಕೈಗೊಂಡರು. ಆಂಗ್ಲ ಶಿಕ್ಷಣವನ್ನು ಪಡೆದ ಭಾರತೀಯ ತರುಣರಿಗೆ ಬ್ರಿಟಿಷರ ರಾಜಾಶ್ರಯದಲ್ಲಿ ಜೀವನ ನಡೆಸುವುದು ಆಕರ್ಷವಾಗಿಯೂ ಮತ್ತು ಸುಲಭವಾಗಿಯೂ ಕಂಡಿತು. ಇದರಿಂದ ಮೆಕಾಲೆಯ ಕನಸು ನನಸಾಯಿತು. ಭಾರತದಲ್ಲಿ ಬ್ರಿಟಿಷ್ ಶಿಕ್ಷಣ ಪ್ರಭಾವದಿಂದ ಮೂಲ ಶಿಕ್ಷಣವು ಬದಲಾವಣೆ ಆಗಿರುವುದನ್ನು ಈ ಕಾಲದಲ್ಲಿ ಕಾಣಬಹುದು. ಹೀಗಾಗಿ ಬ್ರಿಟಿಷರು ಕೈಗೊಂಡ ಹಲವಾರು ಶೈಕ್ಷಣಿಕ ಪ್ರಯೋಗಗಳು ಯಶಸ್ವಿಯಾದವು. ಭಾರತೀಯರನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳಲು ಪ್ರಾರಂಭ ಮಾಡಿದರು. ಅದಕ್ಕಾಗಿ ಶಿಕ್ಷಣದ ನಿಯಮಗಳನ್ನು ತಮ್ಮ ಇಚ್ಛೆಗನುಸಾರವಾಗಿ ರೂಪಿಸಿದರು.

ಬ್ರಿಟಿಷರ ಶಿಕ್ಷಣ ಶಾಸನಬದ್ಧವಾಗಿ ಸುಮಾರು ೧೮೫೭ರಿಂದ ಪ್ರಾರಂಭವಾಯಿತು. ಮುಂಬಯಿ, ಮದ್ರಾಸ್, ಕಲ್ಕತ್ತಗಳಲ್ಲಿ ಏಕಕಾಲಕ್ಕೆ ವಿಶ್ವವಿದ್ಯಾಲಯಗಳು ಸ್ಥಾಪಿತವಾದವು. ಅವುಗಳ ಮುಖ್ಯ ಗುರಿ ಬ್ರಿಟಿಷರ ಆಡಳಿತಕ್ಕೆ ಬೇಕಾದ ಹಾಗೂ ಅವರಿಗೆ ಅನುಕೂಲವಾಗಿ ಕೆಲಸ ಮಾಡುವ ಕೆಲಸಗಾರರನ್ನು ನಿರ್ಮಿಸುವುದಾಗಿತ್ತು. ಆದ್ದರಿಂದ ಬ್ರಿಟಿಷರು ಅದಕ್ಕನುಗುಣವಾಗಿ ಬೋಧನಾ ಕ್ರಮಗಳನ್ನು ಅನುಸರಿಸಿದರು. ಇಂಗ್ಲಿಷ್ ಭಾಷಾಧ್ಯಯನ, ಇಂಗ್ಲಿಷ್ ಸಾಹಿತ್ಯ ಸಂಸ್ಕೃತಿಗಳ ಅಭ್ಯಾಸ ಮುಖ್ಯವಾಗಿತ್ತು. ಭಾರತೀಯ ಭಾಷೆ, ಸಂಸ್ಕೃತಿ, ಸಾಹಿತ್ಯಗಳು ಇದರಿಂದ ನಿರ್ಲಕ್ಷಿಸಲ್ಪಟ್ಟವು. ಇಂಗ್ಲಿಷ್ ಶಿಕ್ಷಣವನ್ನು ಪಡೆದ ಕೆಲ ಭಾರತೀಯ ತರುಣರು ಅನಕ್ಷರಸ್ಥ ಭಾರತೀಯರನ್ನು ಬ್ರಿಟಿಷ್ ಸಾಮ್ರಾಜ್ಯಕ್ಕೆ ಗುಲಾಮರನ್ನಾಗಿ ಜೋಡಿಸುವ ಕೊಂಡಿಯಾದರು.

ವಸಾಹತುಶಾಹಿ ಕಾಲದಲ್ಲಿ ಬ್ರಿಟಿಷರು ಗ್ರಾಮೀಣ ಪ್ರದೇಶದಲ್ಲಿ ನಿಜವಾದ ಅಧಿಕಾರದ ಮೂಲಗಳನ್ನು ಗುರುತಿಸಿ, ಗ್ರಾಮದ ಮುಖಂಡರಿಗೂ ಹಾಗೂ ಶಾನುಭೋಗರಿಗೂ ಅವರ ಸ್ಥಾನಮಾನವನ್ನು ಸದೃಢಗೊಳಿಸಿ ತಮ್ಮ ಅನುಕೂಲಕ್ಕೆ ತಕ್ಕಂತೆ ಪರಿಸ್ಥಿತಿಯನ್ನು ಬದಲಿಸಿಕೊಂಡರು. ಗ್ರಾಮದ ಮುಖಂಡರಿಗೆ ಉನ್ನತವಾದ ಸ್ಥಾನಮಾನವನ್ನು ಕಲ್ಪಿಸುವುದರ ಮೂಲಕ ಅಧಿಕಾರವನ್ನು ಒಪ್ಪುವ ಮನಸ್ಥಿತಿಯನ್ನು ಉಂಟುಮಾಡುತ್ತಿದ್ದರು. ಸಾಮಾನ್ಯ ಜನರಿಂದ ಆದಷ್ಟು ತೆರಿಗೆಯನ್ನು ವಸೂಲು ಮಾಡಿ ಬ್ರಿಟಿಷ್ ಸರಕಾರಕ್ಕೆ ಸಲ್ಲಿಸುತ್ತಿದ್ದರು. ಇದರಿಂದ ಬ್ರಿಟಿಷ್ ಅಧಿಕಾರಗಳಿಗೆ ಆಡಳಿತವನ್ನು ಸುಲಭವಾಗಿ ನಡೆಸಲು ಅನುಕೂಲವಾಯಿತು. ಬ್ರಿಟಿಷರು ಜಾರಿ ಮಾಡಿದ ಉನ್ನತ ಹುದ್ದೆಗಳನ್ನು ಪಡೆಯಲು ಪಾಶ್ಚಾತ್ಯ ಜ್ಞಾನ ಅವಶ್ಯವೆಂದು ಇಂಗ್ಲಿಷ್ ಶಿಕ್ಷಣವನ್ನು ಜಾರಿ ಮಾಡಿದರು. ಅಲ್ಲದೆ ದೇಶಿಯ ಶಿಕ್ಷಣ ಪದ್ಧತಿಯಲ್ಲಿ ಕೆಲವಾರು ದೋಷಗಳನ್ನು

ಗುರುತಿಸಿದರು. ಅಂದಿನ ಕಾಲದಲ್ಲಿ ಈ ದೇಶಿ ಶಿಕ್ಷಣವು ಹೆಚ್ಚು ವ್ಯಾಪಕವಾಗಿರದೆ ಕೇವಲ ಕೆಲವೇ ಜನರು ಅದರ ಪ್ರಯೋಜನ ಪಡೆದುಕೊಳ್ಳುತ್ತಿದ್ದರು. ಇದರಿಂದ ದೇಶಿ ಶಿಕ್ಷಣವು ಹೆಚ್ಚು ವ್ಯಾಪಕತೆಯನ್ನು ಪಡೆದಿರಲಿಲ್ಲ. ಇದು ಕೇವಲ ವ್ಯವಹಾರ ಜ್ಞಾನಕ್ಕಾಗಿ ಮಾತ್ರ ಸೀಮಿತಗೊಂಡಿತ್ತು.

ಪ್ರಾಥಮಿಕ ಶಿಕ್ಷಣವು ಅಕ್ಷರ ಲೆಕ್ಕಗಳ ತಿಳುವಳಿಕೆ, ಕಾವ್ಯಶಾಸ್ತ್ರ ಗ್ರಂಥಗಳನ್ನು ಬಾಯಿಪಾಠ ಮಾಡುವುದು ಬಿಟ್ಟರೆ ಪ್ರಪಂಚದ ಅನೇಕ ವಿಷಯಗಳ ಪರಿಜ್ಞಾನ ಇಲ್ಲದಿರುವುದು ಹಾಗೂ ಮಕ್ಕಳಿಗೆ ಆಸಕ್ತಿಕರವಾದ ಪಠ್ಯಪುಸ್ತಕಗಳು ರಚನೆಯಾಗಿಲ್ಲದಿರುವುದನ್ನು ಮನಗಂಡ ಬ್ರಿಟಿಷರು ಇವುಗಳನ್ನು ಸುಧಾರಿಸುವ ನೆಪದಿಂದ ಪಾಶ್ಚಾತ್ಯ ಶಿಕ್ಷಣವನ್ನು ಜಾರಿಯಲ್ಲಿ ತರಲು ಮುಂದಾದರು. ಭಾರತದಲ್ಲಿ ಹಲವಾರು ಶಾಲಾ ಕಾಲೇಜುಗಳನ್ನು ಪ್ರಾರಂಭಿಸಿದರು.

**ವಸಾಹತುಶಾಹಿ ಕಾಲದ ಪಠ್ಯ ಪುಸ್ತಕಗಳು**

ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಅನುಗುಣವಾಗಿ ೧೯ನೆ ಶತಮಾನದಲ್ಲಿ ಶಾಲೆಗಳಿಗೆ ಬೇಕಾದ ಪಠ್ಯಪುಸ್ತಕಗಳನ್ನು ರಚಿಸಲು ಪ್ರಾರಂಭಿಸಿದಾಗ ದೇಶಿಯ ವಿದ್ವಾಂಸರು ಪಾಶ್ಚಾತ್ಯರನ್ನು ಅನುಸರಿಸಿ ಪಠ್ಯಪುಸ್ತಕಗಳ ರಚನೆಗೆ ತೊಡಗಿದರು. ಕ್ರಿ.ಶ. ೧೮೪೦ರಲ್ಲಿ ಎ. ಶ್ರೀನಿವಾಸರಾಯರು ಕನ್ನಡ ಕತೆಗಳು ಮತ್ತು ನಾಡಿನ ಭೂವಿವರಗಳನ್ನು ಒಳಗೊಂಡ ಪಠ್ಯಪುಸ್ತಕವೊಂದರಲ್ಲಿ ವ್ಯಾಕರಣವನ್ನು ಸವಿಸ್ತಾರವಾಗಿ ಬರೆದರು. ಕ್ರಿ.ಶ. ೧೮೭೦ರಲ್ಲಿ ಶ್ರೀನಿವಾಸ ಅವರು 'ಹೊಸಗನ್ನಡ ನುಡಿ ಚಂದ್ರಿಕೆ' ವ್ಯಾಕರಣವನ್ನು ಬರೆದರು. ೧೮೯೦ರಲ್ಲಿ ಹೊನ್ನಪ್ಪ ಎಂಬುವವರು ೧೧೪ ಪುಟಗಳ ಕನ್ನಡ ವ್ಯಾಕರಣವನ್ನು ರಚಿಸಿದರು. ಕಾರವಾರದ ಅಧ್ಯಾಪಕ ನರಸಿಂಹ ಮಾಧವ ಮಹಿಷಿ ಅವರು ೧೮೯೩ರಲ್ಲಿ ೮೨ ಪುಟಗಳ ಕನ್ನಡ ಛಂದೋಶಾಸ್ತ್ರವನ್ನು ಬರೆದರು. ಈ ರೀತಿಯ ಕೆಲವು ಕೃತಿಗಳು ರಚನೆಯಾದರೂ ಅವುಗಳ ಸ್ವರೂಪವು ವಸಾಹತು ಶಿಕ್ಷಣ ಪದ್ಧತಿಗೆ ಅನುಗುಣವಾಗಿದ್ದವು.

ಕ್ರಿ.ಶ.೧೮೬೦ರಿಂದ ಮಾಧ್ಯಮಿಕ ಮತ್ತು ವಿಶ್ವವಿದ್ಯಾಲಯಗಳ ತರಗತಿಗಳಿಗೆ ಕನ್ನಡ ಪಠ್ಯಪುಸ್ತಕಗಳನ್ನು ಕೆಲವು ದೇಶೀಯ ವಿದ್ವಾಂಸರು ಬರೆಯುತ್ತಿದ್ದರು. ಬೊಂಬಾಯಿ ಸರಕಾರದ ವಿದ್ಯಾ ಇಲಾಖೆಯಲ್ಲಿದ್ದ ವೆಂಕಟರಂಗೋಕಟ್ಟೆ ಅವರು ಗಣಿತ, ವಿಜ್ಞಾನ, ಚರಿತ್ರೆ, ಭೂಗೋಳ, ಪಠ್ಯಪುಸ್ತಕಗಳನ್ನು ಬರೆದರು. ಗಣಿತ, ಸಂಕ್ಷೇಪ ಗಣಿತ, ಅಂಕಗಣಿತ, ಎಂಬ ಬಗೆಯ ಚಿಕ್ಕ ಪಠ್ಯಪುಸ್ತಕಗಳನ್ನು ಕ್ರಿ.ಶ. ೧೮೫೨ರಿಂದ  ಕೆಲವು ದೇಶೀಯ ಅಧ್ಯಾಪಕರು ಬರೆಯುತ್ತಿದ್ದರು. ಎಸ್.ಜಿ. ನರಸಿಂಹಚಾರ್ಯರ ಪದ್ಯಸಾರದಂತ ಕಿರುಹೊತ್ತಿಗೆಗಳನ್ನು ಕನ್ನಡ ಭಾಷಾ ಬೋಧನೆಗೆ ಉಪಯೋಗಿಸುತ್ತಿದ್ದರು.

ಕ್ರೈಸ್ತಮತ ಪ್ರಚಾರಕರ ಪ್ರಭಾವದಿಂದ ಕೆಲವು ಜನರು ಕಳೆದ ಶತಮಾನದಲ್ಲಿ ಕ್ರೈಸ್ತ ಮತಾವಲಂಬಿಗಳಾದರು. ಆದರೆ ಅವರ ಪೈಕಿ ವಿದ್ಯಾವಂತರಾದವರ ಸಂಖ್ಯೆಯು ಬಹಳ ಕಡಿಮೆಯಿತ್ತು. ಕೆಲವರು ಇಂಗ್ಲಿಷ್ ಭಾಷೆಯನ್ನು ಕಲಿತರು. ಅಲ್ಲಲ್ಲಿ ಕ್ರೈಸ್ತ ಮಿಶನರಿ ಶಾಲೆಗಳು ಸ್ಥಾಪಿತವಾದಾಗ ಅವರಿಗೆ ಆಧುನಿಕ ರೀತಿಯಲ್ಲಿ ವಿದ್ಯಾಭ್ಯಾಸವನ್ನು ಪಡೆಯುವ ಅವಕಾಶಗಳುಂಟಾದವು.

ವಸಾಹತು ಪೂರ್ವ ಕಾಲದಲ್ಲಿ ಮಹಮ್ಮದೀಯರ ಕಾಲದಲ್ಲಿ ಈ ದೇಶದ ಶೇ.೯೫ರಷ್ಟು ಜನಕ್ಕೆ ಅಕ್ಷರ ಜ್ಞಾನವಾಗಲಿ, ಸ್ವತಂತ್ರವಾಗಿ ವಿಚಾರ ಮಾಡುವ ಜ್ಞಾನವಾಗಲಿ ಇರಲಿಲ್ಲ. ಅಥವಾ ಹಾಗೆ ಇರದಂತೆ ಮಾಡಲಾಗಿತ್ತು. ಉಳಿದ ಶೇ.೫ರಷ್ಟು ಜನರಲ್ಲಿ ಅಕ್ಷರಸ್ಥರು ನಿರಕ್ಷರಸ್ಥ ರಾಜಕಾರಣಿಗಳೂ, ಗುಮಾಸ್ತ ವರ್ಗದ ಮಂತ್ರಿಗಳೂ ಹಲ ಕೆಲವು ಬ್ರಾಹ್ಮಣ ಪಂಡಿತರು ಸೇರಿದ್ದರು. ಶೇ.೫ರಷ್ಟು ಜನರು ಉಳಿದ ಶೇ. ೯೫ರಷ್ಟು ಜನರನ್ನು ನಿಯಂತ್ರಿಸಿ ಅಧಿಕಾರವನ್ನು ನಡೆಸುತ್ತಿದ್ದರು. ಕ್ರಿ.ಶ. ೧೮ನೇ ಶತಮಾನದ ಅಂತ್ಯದಲ್ಲಿ ಪಾಶ್ಚಾತ್ಯರು ಶೇ. ೫ರಷ್ಟು ಜನರಿಂದ ಈ ದೇಶದ ರಾಜಕೀಯ ಅಧಿಕಾರ, ಶಿಕ್ಷಣ, ಪ್ರಚಾರ ಇತ್ಯಾದಿಗಳ ಹೊಣೆಯನ್ನು ಹೊತ್ತರು. ಆದರೆ ಭಾರತದ ಈ ವಿಶಾಲ ದೇಶವನ್ನು ಆಳಲು ಮತ್ತು ಅದರ ವಿವಿಧ ಕಾರ್ಯಕಲಾಪಗಳನ್ನು ನಡೆಸಲು ವಿದ್ಯಾವಂತರಾದ ಜನರು ಬೇಕಾಗಿದ್ದರು. ದೇಶೀಯ ಭಾಷೆಗಳಲ್ಲಿ ನುರಿತ ಕೆಲ ಬ್ರಾಹ್ಮಣರನ್ನು ಕಚೇರಿಗಳಲ್ಲಿ ಗುಮಾಸ್ತರನ್ನಾಗಿ ನೇಮಿಸಿದರು. ಉಳಿದ ಶೇ.೯೫ರಷ್ಟು ಜನರ ಪೈಕಿ ಯೋಗ್ಯರಾಗಿ ಕಂಡುಬಂದವರನ್ನು ಕಂಪನಿ ಸರಕಾರ ಸೈನ್ಯದಲ್ಲಿ ಸಿಪಾಯಿಗಳಾಗಿ ಸೇರಿಸಿ ಕೊಂಡರು. ಇಂತಹ ಸಮಯದಲ್ಲಿ ಕ್ರಿ.ಶ. ೧೮೦೦ರ ನಂತರ ಬ್ರಿಟಿಷರು ಆಂಗ್ಲ ಪಾಠಶಾಲೆ ಗಳನ್ನು ಪಾಶ್ಚಾತ್ಯ ಕ್ರೈಸ್ತಮತ ಪ್ರಚಾರಕರ ಮೂಲಕವಾಗಿ ಅಲ್ಲಲ್ಲಿ ಸ್ಥಾಪಿಸಿದರು. ಅಂತಹ ಶಾಲೆಗಳ ಸ್ಥಾಪನೆಗಾಗಿ ಈ ದೇಶದ ಜನರ ಬೇಡಿಕೆಗಳು ಹೆಚ್ಚಾದವು. ಕೆಲ ಭಾರತೀಯರು ಆಂಗ್ಲ ಶಾಲೆಗಳಿಗೆ ಹೋಗಿ ಅಲ್ಪಸ್ವಲ್ಪ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಕಲಿತರು. ಅಂಥವರನ್ನು ಸರ್ವಸಂಪನ್ನರೆಂದು ಕರೆಯುತ್ತಿದ್ದರು. ತಮ್ಮ ಮಕ್ಕಳಿಗೂ ಅದೇ ರೀತಿ ಇಂಗ್ಲಿಷ್ ವಿದ್ಯಾಭ್ಯಾಸ ವನ್ನು ಕಲಿಸಿದರೆ ಸರಕಾರದಲ್ಲಿ ಗುಮಾಸ್ತ ಪದವಿಯನ್ನಾದರೂ ನಿರಾಯಾಸವಾಗಿ ಪಡೆಯ ಬಹುದೆಂದು ತಿಳಿದು ಆರ್ಥಿಕವಾಗಿ ಸಬಲರಾಗಿದ್ದ ಜನರು ತಮ್ಮ ಮಕ್ಕಳನ್ನು ಇಂಗ್ಲಿಷ್ ಶಾಲೆಗೆ ಕಳುಹಿಸಿದರು. ಸ್ವಭಾಷೆ ಮತ್ತು ಸಂಸ್ಕೃತ ವಿದ್ಯೆಯೆಲ್ಲವೂ ನಿಷ್ಪ್ರಯೋಜನೆ ಎಂದೂ ಇಂಗ್ಲಿಷ್‌ನಿಂದಲೇ ತಮಗೆ ಮುಕ್ತಿಯೆಂದು ತಿಳಿಯಲಾಗುತ್ತಿತ್ತು. ಇದರಿಂದ ದೇಶೀಯ ಭಾಷೆಗಳ ವರ್ಚಸ್ಸು ಇಳಿಮುಖವಾಯಿತು. ಕೇವಲ ನಾಲ್ಕೈದು ವರ್ಷಗಳ ಕಾಲ ಇಂಗ್ಲಿಷ್ ಭಾಷೆಯನ್ನು ಕಲಿತವರೂ ಕೂಡ ನಮ್ಮ ಭಾಷೆಗಳಲ್ಲಿ ಮತ್ತು ಸಾಹಿತ್ಯದಲ್ಲಿ ಏನೂ ಇಲ್ಲವೆಂದೂ ಹೇಳತೊಡ ಗಿದರು. ಕ್ರಿ.ಶ. ೧೮ನೇ ಶತಮಾನದಲ್ಲಿ ದೇಶದಲ್ಲಿದ್ದ ಪರಿಸ್ಥಿತಿಗೂ ಅನಂತರ ಬದಲಾವಣೆಗಳಿಂದ

ಈ ೨೦ನೇ ಶತಮಾನದ ವೇಳಗೆ ಬಹಳಷ್ಟು ಬದಲಾವಣೆಯಾಯಿತು. ಹೊಸ ಬಗೆಯ ಜನರು, ಹೊಸ ಆಡಳಿತ ನೀತಿ, ಹೊಸ ಕಾನೂನು ವ್ಯವಸ್ಥೆ, ಹೊಸ ವಿದ್ಯಾಕ್ರಮ ಇತ್ಯಾದಿಗಳಿಂದ ನಮ್ಮ ದೇಶದ ಜನರಲ್ಲಿ ಹೊಸ ಬಗೆಯ ವಿಚಾರ ಜ್ಞಾನವೂ ಹರಿಯತೊಡಗಿತು.

ಬ್ರಿಟಿಷರು ಈ ದೇಶದಲ್ಲಿ ತಮ್ಮ ಸುಧಾರಣಾ ಕಾರ್ಯಗಳನ್ನು ಪ್ರಮುಖ ದೇಶೀಯರ ಬೆಂಬಲವನ್ನು ಪಡೆದು ವಿಶ್ವಾಸವನ್ನು ಗಳಿಸಿ ಜಾರಿಗೆ ತಂದರು. ಲಾರ್ಡ್‌ಕ್ಲೈವ್ ಬಂಗಾಳದಲ್ಲೂ, ವಾರನ್ ಹೆಸ್ಟಿಂಗ್ಸ್ ಉತ್ತರ ಪ್ರದೇಶದಲ್ಲೂ, ಲಾರ್ಡ್ ಕಾರ್ನ್‌ವಾಲೀಸ್ ಮಹಾರಾಷ್ಟ್ರ ಭಾಗದಲ್ಲೂ ಇದ್ದ ಪ್ರಮುಖರ ಬಲವನ್ನು ಅಡಗಿಸಿ ದೇಶದ ಬಹುಭಾಗವನ್ನು ಸ್ವಾಧೀನ ಪಡಿಸಿಕೊಂಡರು. ಕೊನೆಗೆ ದಕ್ಷಿಣ ಹಿಂದೂಸ್ಥಾನದಲ್ಲಿ ಟಿಪ್ಪುವನ್ನು ಕೊನೆಗೊಳಿಸಿದರೆ ಎಲ್ಲವೂ ಸರಿಹೋಗುವುದೆಂದು ಭಾವಿಸಿದ್ದ ಅವರು ಲಾರ್ಡ್‌ವೆಲ್ಲೆಸ್ಲಿಯ ನೇತೃತ್ವದಲ್ಲಿ ಯುದ್ಧಮಾಡಿ ಜಯವನ್ನು ಪಡೆದರು. ಈ ಎಲ್ಲಾ ಕಾರ್ಯಗಳಲ್ಲಿ ಅವರಿಗೆ ಇತರ ದೇಶಿಯ ಪ್ರಮುಖರ ಸಹಾಯವು ಧಾರಳವಾಗಿ ದೊರೆಯಿತು. ಹಾಗೆ ಸಹಕರಿಸಿದವರಿಗೆ ಅವರು ಯಥೇಚ್ಛವಾಗಿ ಸಹಾಯವನ್ನು ನೀಡಿದರು.

**ಭಾರತದಲ್ಲಿ ಆಂಗ್ಲ ಶಿಕ್ಷಣದ ಬೆಳವಣಿಗೆ**

ಭಾರತದಲ್ಲಿ ಪಶ್ಚಿಮ ಬಂಗಾಳ ಪ್ರದೇಶವು ಸಂಪತ್ಭರಿತವಾದ ಮತ್ತು ಸಮೃದ್ಧವಾದ ಭಾಗವಾಗಿತ್ತು. ಆದ್ದರಿಂದ ಬ್ರಿಟಿಷರು ಕ್ರಿ.ಶ. ೧೭೬೧ ಬಂಗಾಳದ ಹೂಗ್ಲಿಯಲ್ಲಿ ಪ್ರಪ್ರಥಮವಾಗಿ ತಮ್ಮ ಕೋಟೆಯನ್ನು ನಿರ್ಮಿಸಿದರು. ಅನಂತರ ಕಾಸಿಂಬಜಾರ, ಪಾಟ್ನಾ ಮುಂತಾದ ಭಾಗಗಳಲ್ಲಿ ತಮ್ಮ ವಸಾಹತು ಕೇಂದ್ರಗಳನ್ನು ಸ್ಥಾಪಿಸಿದರು. ನಂತರ ವೈದ್ಯಕೀಯ ಮತ್ತು ಇಂಗ್ಲಿಷ್ ಶಾಲೆಗಳನ್ನು ಕಲ್ಕತ್ತಾ, ಮದ್ರಾಸ್‌ಗಳಲ್ಲಿ ೧೭೮೧ರಲ್ಲಿ ಸ್ಥಾಪಿಸಲಾಯಿತು. ೧೮೨೬ ಮತ್ತು ೧೮೨೮ರ ನಡುವೆ ಕಲ್ಕತ್ತಾದ ಸಂಸ್ಕೃತ ಕಾಲೇಜುಗಳಿಗೆ ಈ ತರಗತಿಗಳನ್ನು ಸೇರಿಸಲಾಯಿತು. ಈ ಸಂಸ್ಕೃತ ಕಾಲೇಜು ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯ ಹಾಗೂ ಪ್ರಾಚೀನ ಆಧುನಿಕ ಇತಿಹಾಸವನ್ನು ಕಲಿಸುವಲ್ಲಿ ಉಳಿದ ಎಲ್ಲಾ ಸಂಸ್ಥೆಗಳಿಗಿಂತ ಶ್ರೇಷ್ಠತೆಯನ್ನು ಗಳಿಸಿತು. ಕಲ್ಕತ್ತಾದ ಅತ್ಯಂತ ಗೌರವಾನ್ವಿತ ವರ್ಗಗಳ ಮಕ್ಕಳು ಈ ಸಂಸ್ಥೆಯಲ್ಲಿ ಹೆಚ್ಚಿನ ಹಣವನ್ನು ನೀಡಿ ಕಲಿಯುತ್ತಿದ್ದರು. ಲಾರ್ಡ್ ವಿಲಿಯಂ ಬೆಂಟಿಕ್ ಮತ್ತು ಮೆಕಾಲೆಯವರ ವರದಿಗಳು ಇಂಗ್ಲಿಷ್ ಶಿಕ್ಷಣಕ್ಕೆ ಬಲವಾದ ಪ್ರೋತ್ಸಾಹವನ್ನು ಕೊಟ್ಟವು. ಇದರ ಪರಿಣಾಮ ಬಂಗಾಳ ಮತ್ತು ಅದರ ಸುತ್ತಮುತ್ತ ಪ್ರದೇಶಗಳಲ್ಲಿ ಇಂಗ್ಲಿಷ್ ಶಿಕ್ಷಣವು ವ್ಯಾಪಕವಾಗಿ ಕಂಡುಬಂದಿತು. ೧೮೩೫ರಿಂದ ೧೮೩೮ರ ನಡುವೆ ಸುಮಾರು ಮೂರು ವರ್ಷಗಳಲ್ಲಿ ಸಾರ್ವಜನಿಕ ಶಿಕ್ಷಣ ಶಾಲೆಗಳ ಸಂಖ್ಯೆ ನಲವತ್ತಕ್ಕೆ ಏರಿತು. ವಿದ್ಯಾರ್ಥಿಗಳ ಸಂಖ್ಯೆಯು ಮೂರು ಸಾವಿರದಿಂದ ಆರು ಸಾವಿರಕ್ಕೆ

ಏರಿತ್ತು. ಬ್ರಿಟಿಷರ ಆಡಳಿತದಲ್ಲಿ ನೌಕರಿಯನ್ನು ಪಡೆಯಬೇಕಾದರೆ ಕಡ್ಡಾಯವಾಗಿ ಇಂಗ್ಲಿಷ್ ಜ್ಞಾನವನ್ನು ಸಂಪಾದಿಸಬೇಕಾಯಿತು. ಇದರಿಂದ ಭಾರತದಲ್ಲಿ ಇಂಗ್ಲಿಷ್ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ದೊರೆಯಿತು. ಲಾರ್ಡ್ ಹಾರ್ಡಿಂಜ ಎನ್ನುವವನು ೧೮೪೪ ಆಕ್ಟೋಬರ್ ೧೦ರಂದು ಶಿಕ್ಷಣಕ್ಕೆ ಸಂಬಂಧಿಸಿದಂತೆ ಒಂದು ಪತ್ರವನ್ನು ಕಳುಹಿಸುತ್ತಾನೆ. ಸಾಧ್ಯವಾದ ಮಟ್ಟಿಗೆ ಪ್ರತಿಯೊಂದು ಸಂದರ್ಭದಲ್ಲಿಯೂ ಸಾರ್ವಜನಿಕ ಉದ್ಯೋಗಕ್ಕೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ಈ ರೀತಿ ಸ್ಥಾಪಿಸಲಾದ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸ ಮಾಡಿದವರಿಗೆ, ಅದರಲ್ಲಿಯೂ ಆ ಸಂಸ್ಥೆಗಳಲ್ಲಿ ಸಾಧಾರಣ ಆರ್ಹತೆ ಮತ್ತು ಸಾಧನೆಗಿಂತ ಮೀರಿದ ವಿಶೇಷ ಹೆಗ್ಗಳಿಕೆ ಗಳಿಸಿಕೊಂಡವರಿಗೆ ಮೊದಲ ಆದ್ಯತೆ ನೀಡಲಾಗುವುದು ಎಂಬ ಘೋಷಣೆಯನ್ನು ಹೊರಡಿಸಿದರು. ಬಂಗಾಳದಲ್ಲಿ ಇದರಿಂದ ಆಂಗ್ಲ ಶಿಕ್ಷಣವನ್ನು ಪಡೆಯುವ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಯಿತು.

ಇಂಗ್ಲಿಷ್ ಶಿಕ್ಷಣಕ್ಕೆ ಸಂಬಂಧಿಸಿದ ೧೮೪೪ರ ಪತ್ರವು ಆಧುನಿಕ ಭಾರತದ ಶಿಕ್ಷಣದ ಇತಿಹಾಸದಲ್ಲಿ ಒಂದು ಮೈಲುಗಲ್ಲಾಗಿತ್ತು. ಇದು ಇಂಗ್ಲಿಷ್ ಹಾಗೂ ದೇಶ ಭಾಷೆಗಳಲ್ಲಿನ ಶಿಕ್ಷಣವನ್ನು ಸುಧಾರಿಸಿ ಭಾರತದಾದ್ಯಂತ ವಿಸ್ತರಿಸುವುದಾಗಿತ್ತು. ಜೊತೆಗೆ ಹಲವಾರು ಕ್ರಮಗಳನ್ನು ಕೈಗೊಂಡಿತು. ಆ ಕ್ರಮಗಳು ಕೆಳಕಂಡಂತಿವೆ.

ಶಿಕ್ಷಣ ಆಡಳಿತಕ್ಕಾಗಿ ಒಂದು ಪ್ರತ್ಯೇಕ ಇಲಾಖೆಯನ್ನು ಸ್ಥಾಪಿಸುವುದು. ಪ್ರಮುಖ ನಗರ ಗಳಲ್ಲಿ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸುವುದು. ಶಾಲೆಯ ಪ್ರತಿ ತರಗತಿಗಳಿಗೂ ಶಿಕ್ಷಕರನ್ನು ತರಬೇತು ಮಾಡುವ ಸಂಸ್ಥೆಗಳನ್ನು ಪ್ರಾರಂಭಿಸುವುದು. ಹೊಸ ಮಾಧ್ಯಮಿಕ ಶಾಲೆಗಳನ್ನು ಸ್ಥಾಪನೆ ಮಾಡುವುದು. ಹಾಗೆಯೇ ಪ್ರಾಥಮಿಕ ಶಿಕ್ಷಣಕ್ಕಾಗಿ ದೇಶಿಯ ಇತರ ಶಾಲೆಗಳ ಮೇಲೆ ಹೆಚ್ಚಿನ ಗಮನ ಕೊಡುವುದು. ಈ ಅಂಶಗಳ ಹಿನ್ನೆಲೆಯಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ದೇಶಿಯ ಭಾಷೆಯನ್ನು ಹಾಗೂ ಪ್ರೌಢಶಾಲೆಗಳಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಶಿಕ್ಷಣವನ್ನು ಕೊಡಲು ಪ್ರಾರಂಭಿಸಿದರು. ೧೮೫೭ರಲ್ಲಿ ಭಾರತದಲ್ಲಿ ಮೂರು ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಲಾಯಿತು. ಕಲ್ಕತ್ತಾ ವಿಶ್ವವಿದ್ಯಾಲಯ ೧೮೫೭ ಜನವರಿ ೨೪, ಬೊಂಬಾಯಿ ವಿಶ್ವವಿದ್ಯಾನಿಲಯ ೧೮೫೭ ಜುಲೈ ೧೮ ಮತ್ತು ಮದ್ರಾಸು ವಿಶ್ವವಿದ್ಯಾನಿಲಯ. ಇಲ್ಲಿನ ಆಡಳಿತ ಒಬ್ಬ ಚಾನ್ಸಲರ್ ಮತ್ತು ವೈಸ್‌ಚಾನ್ಸಲರ್‌ಗಳಿಂದ ನಿರ್ವಹಿಸಲ್ಪಡುತ್ತಿತ್ತು. ಇವುಗಳಲ್ಲಿ ಪ್ರತಿಯೊಂದು ವಿಶ್ವವಿದ್ಯಾನಿಲಯವು ನಾಲ್ಕು ಬೋಧನಾ ವಿಭಾಗಗಳನ್ನು ಹೊಂದಿದ್ದವು. ಕಲಾ ವಿಭಾಗ, ಕಾನೂನು, ವೈದ್ಯಕೀಯ ಮತ್ತು ಇಂಜನಿಯರಿಂಗ್ ವಿಷಯಗಳನ್ನು ಒಳಗೊಂಡಿದ್ದವು. ಅನಂತರ ಪ್ರತ್ಯೇಕವಾಗಿ ವಿಜ್ಞಾನ ವಿಭಾಗವನ್ನು ಸೇರಿಸಲಾಯಿತು. ಅಂದಿನ ಶಿಕ್ಷಣ ಕಾರ್ಯವು ಸರಕಾರಿ ಮಿಷನರಿ ಮತ್ತು ಖಾಸಗಿ ಕಾಲೇಜುಗಳಲ್ಲಿ ನಡೆಸಲ್ಪಡೆಯುತ್ತಿತ್ತು. ಈ ವಿಶ್ವವಿದ್ಯಾನಿಲಯಗಳಲ್ಲಿ ವಿದ್ಯಾರ್ಥಿಗಳ

ಹೆಚ್ಚಳದ ಕಾರಣದಿಂದ ೧೯ನೆ ಶತಮಾನದಲ್ಲಿ ಇನ್ನೆರಡು ವಿಶ್ವವಿದ್ಯಾನಿಲಯಗಳು ಅಸ್ತಿತ್ವಕ್ಕೆ ಬಂದವು. ಇವುಗಳೆಂದರೆ ಲಾಹೋರ್ ಮತ್ತು ಅಲಹಬಾದ್ ವಿಶ್ವವಿದ್ಯಾನಿಲಯಗಳು. ಲಾಹೋರ್‌ನ ವಿಶ್ವವಿದ್ಯಾನಿಲಯಕ್ಕೆ ಲೆಫ್ಟಿನೆಂಟ್ ಗವರ್ನರ್ ಸರ್ ಡೊನಾಲ್ಡ್ ಮೆಕ್ಲಿಯಾಡ್ ಅವರನ್ನು ನೇಮಕ ಮಾಡಲಾಯಿತು. ಅವರು ದೇಶದ ಮಹಾಕಾವ್ಯಗಳನ್ನು ಮತ್ತು ದೇಶಿಯ ಭಾಷೆಗಳನ್ನು ಪ್ರೋತ್ಸಾಹಿಸಿದರು. ಅಲ್ಲದೆ ಇಂಗ್ಲಿಷ್ ಭಾಷೆ ಮತ್ತು ಪಾಶ್ಚಿಮಾತ್ಯ ವಿಜ್ಞಾನವನ್ನು ಕಲಿಸಲು ಪ್ರೋತ್ಸಾಹಿಸುವ ವಿಶ್ವವಿದ್ಯಾನಿಲಯವೊಂದು ಬೇಕೆಂದು ಒತ್ತಾಯಿಸಿದರು. ೧೮೬೯ರ ಡಿಸೆಂಬರ್‌ನಲ್ಲಿ ಲಾಹೋರ್ ಯುನಿವರ್ಸಿಟಿ ಕಾಲೇಜು ಸ್ಥಾಪನೆಯಾಯಿತು. ಇದರ ಉದ್ದೇಶಗಳು ಹಿಗೀದ್ದವು. ಯುರೋಪಿಯನ್ ವಿಜ್ಞಾನವನ್ನು ಸಾಧ್ಯವಾದ ಮಟ್ಟಿಗೆ ಪಂಜಾಬಿನ ದೇಶಿಯ ಭಾಷೆಗಳ ಮಾಧ್ಯಮದಲ್ಲಿ ಪ್ರಸಾರ ಮಾಡುವುದು. ಸಾರ್ವಜನಿಕ ದೇಶಿಯ ಭಾಷಾ ಸಾಹಿತ್ಯದ ಸುಧಾರಣೆ, ಏಕ ಕಾಲದಲ್ಲಿ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯ ಶಿಕ್ಷಣಕ್ಕೆ ಎಲ್ಲಾ ರೀತಿಯ ಪ್ರೋತ್ಸಾಹವನ್ನು ಕೊಡುವುದಲ್ಲದೆ ಸಂಪೂರ್ಣವಾಗಿ ದೇಶೀಯ ಭಾಷೆಗಳ ಮೂಲಕ ಕಲಿಸಲು ಆಗದ ವಿಷಯಗಳನ್ನು ಇಂಗ್ಲಿಷ್ ಭಾಷೆಯು ಶಿಕ್ಷಣ ಮತ್ತು ಪರೀಕ್ಷಾ ಮಾಧ್ಯಮವಾಗಿರತಕ್ಕದ್ದು ಎಂದು ಘೋಷಿಸಲಾಯಿತು. ಹಲವಾರು ಸಂಸ್ಥೆಗಳು ಲಾಹೋರ್ ಯುನಿವರ್ಸಿಟಿ ಕಾಲೇಜಿನ ಅಂಗೀಕಾರ ಪಡೆದವು. ಅಂದಿನ ರಾಜರು ಇಂಗ್ಲಿಷ್ ವಿದ್ಯೆಬೇಕೆಂದೂ ತಮ್ಮ ಮಕ್ಕಳಿಗೆ ಇಂಗ್ಲೀಷನ್ನು ಕಲಿಸಬೇಕೆಂದು ಇಚ್ಛಿಸಿ ಸ್ವಂತವಾಗಿ ಇಂಗ್ಲಿಷ್ ಅಧ್ಯಾಪಕರನ್ನು ಮನೆಗಳಲ್ಲಿ ಇರಿಸಿಕೊಂಡು ತಾವು ಕಲಿತು ತಮ್ಮ ಮಕ್ಕಳಿಗೂ ಕಲಿಸಿದರು.

> ತಿರುವಾಂಕೂರಿನ ಸ್ವಾತಿ ತಿರುನಾಳ್ ಎಂಬ ಪ್ರಚಂಡ ವಿದ್ವಾಂಸನಾದ ರಾಜಕುಮಾರನಿಗೆ ೧೬ ವರ್ಷ ಪ್ರಾಯವಾಗುವವರೆಗೂ Cal. Monroe ಶಿಕ್ಷಕನಾಗಿದ್ದನು. ಅವನ ವೈದಿಕ ವಿದ್ಯೆ, ಸಂಗೀತ ವಿದ್ಯೆ ಮತ್ತು ಆಡಳಿತ ಕೌಶಲ್ಯ ಇತ್ಯಾದಿಗಳಿಗೆ ಕಾರಣನಾದನು. ದೇಶಾಭಿಮಾನವನ್ನೇ ತನ್ನ ಜೀವನದ ಉಸಿರಾಗಿ ಇರಿಸಿಕೊಂಡಿದ್ದ ಸುರಪುರದ ರಾಜಕುಮಾರ ವೆಂಕಟಪ್ಪನಿಗೆ Col. Meadows Taylor ಗುರುವಾಗಿದ್ದನು. ವೆಂಕಟಪ್ಪನು ಈ ಆಂಗ್ಲ ಗುರುವನ್ನು ಕಡೆಯವರೆಗೂ 'ಅಪ್ಪಾ' ಎಂದೇ ಕರೆಯುತ್ತಿದ್ದನು.[೩]

ಹೈದರಾಬಾದಿನ ನಿಜಾಮ, ಮೈಸೂರಿನ ರಾಜರು ಮೊದಲಾದವರೆಲ್ಲಾ ಆಂಗ್ಲ ಅಧ್ಯಾಪಕರನ್ನು ಅರಮನೆಯಲ್ಲಿರಿಸಿಕೊಂಡರು.

### ಕಲ್ಕತ್ತಾದಲ್ಲಿ ಹಿಂದೂ ಭಾಷಾ ಶಾಲೆಯ ಸ್ಥಾಪನೆ

ವಿವಿಧ ಜನಾಂಗ, ವಿವಿಧ ಸಂಸ್ಕೃತಿ, ವಿವಿಧ ಭಾಷೆ ಇತ್ಯಾದಿಗಳಿಂದ ಕೂಡಿದ ವಿಶಾಲ ದೇಶವನ್ನು ಆಳಲು ಪಾಶ್ಚಾತ್ಯ ದೇಶಗಳಿಂದ ಆಗಾಗ ಬರುತ್ತಿದ್ದ ಆಂಗ್ಲರಿಗೆ ಈ ದೇಶದ ಭಾಷೆಗಳನ್ನು ಕಲಿಸಲು ಮತ್ತು ಅದಕ್ಕಾಗಿ ಒಂದು ಯೋಜನೆಯನ್ನು ತಯಾರಿಸಲು ವೆಲ್ಲೆಸ್ಲಿ

ಒಂದು ಸಮಿತಿಯನ್ನು ನೇಮಿಸಿದನು. ಈ ಸಮಿತಿಯ ಸಲಹೆಯಂತೆ ಪಾಶ್ಚಾತ್ಯರಿಗೆ ಸಂಸ್ಕೃತ, ಪರ್ಶಿಯನ್, ಹಿಂದೂಸ್ಥಾನಿ ಇತ್ಯಾದಿ ದೇಶಿಯ ಭಾಷೆಗಳನ್ನು ಕಲಿಸಲು ಒಂದು ಶಾಲೆಯನ್ನು ಪೋರ್ಟ್ ವಿಲಿಯಂನಲ್ಲಿ ಸ್ಥಾಪಿಸಲಾಯಿತು. ಈ ಭಾಷಾ ಶಾಲೆಯು ಕೆಲ ವರ್ಷಗಳಲ್ಲೇ ಅಭಿವೃದ್ಧಿಯಾಗಿ ಯುರೋಪಿನಿಂದ ಬಂದ ಜನರಿಗೆ ಭಾರತೀಯ ಭಾಷೆಗಳಲ್ಲಿ ತಕ್ಕ ಪರಿಣಿತಿಯನ್ನು ಹೊಂದಲು ಅತ್ಯಂತ ಸಹಾಯಕವಾಯಿತು. ಸರಕಾರಿ ನೌಕರಿಯನ್ನು ಹೊಂದಿರುವಂಥ ಪಾಶ್ಚಾತ್ಯರು ಆರಂಭದ ತರಬೇತಿಯನ್ನು ಇದೇ ಶಾಲೆಯಲ್ಲೇ ಹೊಂದಿರುತ್ತಿದ್ದರು. ಪೋರ್ಟ್ ವಿಲಿಯಂ ಭಾಷಾ ಶಾಲೆಯನ್ನು ಸ್ಥಾಪಿಸಲು ಕಾರಣರಾದ ಮಾರ್ಕ್ವೆಸ್ ವೆಲ್ಲೆಸ್ಲಿ, ಡಬ್ಲ್ಯೂ ಬಿ. ಮಾರ್ಟಿನ್, ಡಬ್ಲ್ಯೂ ಬ್ಯಾಲೆ ಮುಂತಾದ ತಜ್ಞರು ಮುಂಬಯಿಯಲ್ಲೂ, ಮದ್ರಾಸಿನಲ್ಲೂ ಆಂಗ್ಲ ಶಾಲೆಗಳನ್ನು ಸ್ಥಾಪಿಸಬೇಕೆಂದು ಕಂಪನಿ ಸರಕಾರ ಸೂಚಿಸಿತ್ತು. ಆದರೆ ಬ್ರಿಟಿಷ್ ಅಧಿಕಾರಿಗಳಲ್ಲಿ ಎರಡು ರೀತಿ ಭಿನ್ನಭಿಪ್ರಾಯಗಳಿದ್ದವು. ಕೆಲವರು ಇಂಗ್ಲಿಷ್ ಭಾಷೆ ಮತ್ತು ಇಂಗ್ಲಿಷ್ ವಿದ್ಯಾಕ್ರಮಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಬೇಕೆಂದು ಹೇಳಿದರೆ ಇನ್ನು ಕೆಲವರು ಕೋಲ್‌ಬ್ರೂಕ್, ಕ್ಯಾರಿ ವಿಲ್ಸನ್ ಮೊದಲಾದವರು ಸಂಸ್ಕೃತ ವಿದ್ವಾಂಸರ ಬೆಂಬಲದಿಂದ ಭಾರತೀಯ ಭಾಷಾ ಬೆಳವಣಿಗೆ ಮತ್ತು ಸಾಹಿತ್ಯ ಸಂಶೋಧನೆಗೆ ಹೆಚ್ಚು ಅವಕಾಶವನ್ನು ಕಲ್ಪಿಸಬೇಕೆಂದು ಹೇಳಿದರು. ಹೀಗೆ ಈ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ಕೆಲ ವರ್ಷಗಳವರೆಗೆ ಹಾಗೆಯೇ ಮುಂದುವರೆದವು.

**ದೇಶೀಯ ಶಾಲೆಯ ಸ್ಥಾಪನೆ**

ಕ್ರಿ.ಶ. ೧೮೧೨ರಲ್ಲಿ ಮದ್ರಾಸಿನಲ್ಲಿ ಒಂದು ದೇಶಿ ಶಾಲೆಯನ್ನು ಸ್ಥಾಪಿಸಲಾಯಿತು. ಈ ಶಾಲೆಯಲ್ಲಿ ಸಂಸ್ಕೃತ ಭಾಷೆಯ ಜೊತೆಗೆ ಪ್ರಾದೇಶಿಕ ಭಾಷೆಗಳಾದ ಕನ್ನಡ, ತಮಿಳು, ತೆಲುಗು, ಮಲೆಯಾಳ, ಒರಿಯಾ, ಉರ್ದು ಮತ್ತು ಪರ್ಶಿಯನ್ ಇವುಗಳನ್ನೂ ಕಲಿಸುತ್ತಿದ್ದರು. ಪ್ರತಿಯೊಬ್ಬ ವಿದ್ಯಾರ್ಥಿಯು ಇವುಗಳಲ್ಲಿ ಯಾವುದಾದರೂ ಎರಡು ವಿಷಯಗಳನ್ನು ಐಚ್ಛಿಕವಾಗಿ ತೆಗೆದುಕೊಂಡು ಕಲಿಯಬೇಕಾಗಿತ್ತು ಮತ್ತು ಈ ಶಾಲೆಯಲ್ಲಿ ಆಯಾ ಭಾಷೆಯಲ್ಲಿ ಪರಿಣಿತರಾದ ಪಂಡಿತರನ್ನು ನೇಮಿಸಿದರು. ಹಾಗೆಯೇ ಭಾರತೀಯ ಭಾಷೆಗಳಲ್ಲಿ ಯಾವುದಾದರೂ ಎರಡು ಭಾಷೆಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದ ಪಾಶ್ಚಾತ್ಯರಿಗೆ ಸರಕಾರವು ಪ್ರತಿವರ್ಷ ಇಂತಿಷ್ಟು ಪ್ರೋತ್ಸಾಹ ಸಂಭಾವನೆಯನ್ನು ಕೊಡುತ್ತಿತ್ತು.

ಪಾಶ್ಚಾತ್ಯರಿಗೆ ಈ ದೇಶದ ಭಾಷೆಗಳನ್ನು ಕಲಿಯಲು ಮುಖ್ಯ ಉದ್ದೇಶವೆಂದರೆ ಅವರಿಗೆ ಈ ದೇಶದ ರಾಜ್ಯಾಡಳಿತವನ್ನು ಸುಗಮವಾಗಿ ಸಾಗಿಸಲು ಅನುಕೂಲತೆಯನ್ನು ಒದಗಿಸುವುದಾಗಿತ್ತು. ಜೊತೆಗೆ ಸರಕಾರಿ ಹುದ್ದೆಯನ್ನು ಈ ದೇಶದಲ್ಲಿ ಪಡೆಯುವ ಪಾಶ್ಚಾತ್ಯರಿಗೆ ಆಯಾ

ಭಾಗದಲ್ಲಿ ಪ್ರಚಾರವಿರುವ ಒಂದೆರಡು ಭಾಷೆಗಳನ್ನು ಕಲಿತರೆ ತಮ್ಮ ವೈಯಕ್ತಿಕ ಅನುಕೂಲತೆ ಮತ್ತು ರಾಜ್ಯಾಡಳಿತವನ್ನು ಸುಗಮವಾಗಿ ನಡೆಸಲು ಅನುಕೂಲವಾಗುವುದೆಂದು ಅವರು ಪರಿಗಣಿಸಿದ್ದರು. ಆದ್ದರಿಂದ ಬ್ರಿಟಿಷರು ದೇಶಿಯ ಶಾಲೆಗಳನ್ನು ಸ್ಥಾಪನೆ ಮಾಡಿದರು. ಆದರೆ ಮಕ್ಕಳ ಮನೋವಿಕಾಸಕ್ಕೆ ತಕ್ಕಂತೆ ಶಿಕ್ಷಣ ವ್ಯವಸ್ಥೆಗಳನ್ನು ರೂಪಿಸಲಿಲ್ಲ.

**ಭಾರತೀಯರಿಗೆ ಪಾಶ್ಚಾತ್ಯ ವಿದ್ಯೆ**

ಕ್ರಿ.ಶ.೧೮೦೦ರಿಂದ ೧೮೩೦ರಲ್ಲಿ ಭಾರತದ ಎಲ್ಲಾ ಭಾಗಗಳಲ್ಲೂ ನೂರಾರು ಯುರೋಪ್ ಸಾಹಿತಿಗಳೂ ಕ್ರೈಸ್ತಮತ ಪ್ರಚಾರಕರೂ ಈ ದೇಶದ ಭಾಷೆಗಳಲ್ಲಿ ವ್ಯಾಕರಣ, ನಿಘಂಟು, ಪ್ರಾಚೀನ ಕಾವ್ಯಗಳ ಭಾಷಾಂತರ ಇತ್ಯಾದಿಗಳ ರಚನೆಯಲ್ಲಿ ತೊಡಗಿದರು. ಸಾಹಿತ್ಯ ಸಂಶೋಧನೆ ಮತ್ತು ಐತಿಹಾಸಿಕ ವಿಚಾರಗಳು ಈ ದೇಶದ ಜನರಿಗೆ ತಿಳಿಯದೆ ಇದ್ದ ಹಲವು ವಿಚಾರಗಳು ಬೆಳಕಿಗೆ ಬಂದವು. ಸಂಸ್ಕೃತ ಮತ್ತು ಇತರ ಭಾಷಾ ಶಾಲೆಗಳು ಅಲ್ಲಲ್ಲಿ ತೆರೆಯಲ್ಪಟ್ಟವು. ಕಲ್ಕತ್ತಾ, ಕಾಶಿ, ಬೊಂಬಾಯಿ, ಪೂನಾ, ಹೀಗೆ ಇನ್ನೂ ಹಲವು ಕೇಂದ್ರಗಳಲ್ಲಿ ಇದ್ದ ವಿದ್ಯಾಮಂದಿರಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿತು. ಸಂಸ್ಕೃತ ಮತ್ತು ಇತರ ಭಾಷೆಗಳನ್ನು ಶಾಸ್ತ್ರೀಯವಾಗಿ ಕಲಿಯುವವರ ಸಂಖ್ಯೆಯು ಏರಿದಾಗ ಆಯಾ ಭಾಷಾ ಸಾಹಿತ್ಯಗಳ ಪುನರುದ್ಧಾರದ ಚಿಹ್ನೆಯು ಎಲ್ಲೆಡೆಯು ತೋರಿತು.

ಬ್ರಿಟಿಷರು ಸ್ಥಾಪಿಸಿದ ಹಲವು ಪಾಠಶಾಲೆಗಳು ಈ ದೇಶದ ಜನರಿಗೆ ಅಷ್ಟೇನು ಹಿಡಿಸಲಿಲ್ಲ. ಈ ದೇಶದ ಜನಕ್ಕೆ ಆಧುನಿಕ ವಿದ್ಯಾಭ್ಯಾಸವನ್ನು ನೀಡಬೇಕೆಂದು ಕೆಲ ಭಾರತೀಯರು ಬ್ರಿಟಿಷ್ ಸರಕಾರಕ್ಕೆ ಮನವಿಯನ್ನು ಮಾಡಿದರು. ಇದರಲ್ಲಿ ಪ್ರಮುಖವಾಗಿ ರಾಜಾರಾಮ್ ಮೋಹನ್ ರಾಯರು ಭಾರತದಲ್ಲಿ ಆಂಗ್ಲ ವಿದ್ಯೆಯನ್ನು ಏರ್ಪಡಿಸಬೇಕೆಂದು ಅಂದಿನ ಸರಕಾರವನ್ನು ಕೇಳಿಕೊಂಡರು.

೧೮೩೫ರಲ್ಲಿ ಲಾರ್ಡ್ ಮೆಕಾಲೆಯ ವಿದ್ಯಾಯೋಜನೆ ಸಿದ್ಧವಾಯಿತು. ಇವನು ಓರ್ವ ಶಿಕ್ಷಣ ತಜ್ಞ, ಸಾಮರ್ಥ ರಾಜಕಾರಣಿ ಮತ್ತು ಮೇಧಾವಿಯಾಗಿದ್ದ. ಇವನ ವಿದ್ಯಾಯೋಜನೆಯು ಆಧುನಿಕ ಭಾರತದ ವಿದ್ಯಾಪ್ರಗತಿಗೆ ತಕ್ಕ ತಳಹದಿಯನ್ನು ಹಾಕಿತು. ಇಂಗ್ಲಿಷ್ ಭಾಷೆಯನ್ನು ಆಡಳಿತದ ಅನೂಕೂಲತೆಗೂ ಜನತೆಯ ಜ್ಞಾನಭಿವೃದ್ಧಿಯ ಸಲುವಾಗಿ ಜಾರಿಗೆ ತರುವಂತೆ ಮಾಡಿದ್ದಲ್ಲದೆ ವಿಜ್ಞಾನ, ಗಣಿತ, ಇತಿಹಾಸ, ನ್ಯಾಯಶಾಸ್ತ್ರ, ತರ್ಕಶಾಸ್ತ್ರ, ವೈದ್ಯಕೀಯವೆಲ್ಲವನ್ನು ಶಾಸ್ತ್ರೀಯವಾಗಿ ಕಲಿಸುವ ದೃಷ್ಟಿಯಿಂದ ಹೊಸ ಸಲಹೆಗಳನ್ನು ಸರಕಾರಕ್ಕೆ ನೀಡಿದನು. ಈ ದೇಶದ ಜನರೇ ತಮಗೆ ಇಂಗ್ಲಿಷ್‌ವಿದ್ಯೆ ಬೇಕೆಂದು ಹೇಳಿದ ಕಾರಣದಿಂದಲೇ ಬ್ರಿಟಿಷರು ಆಂಗ್ಲ ವಿದ್ಯೆಯನ್ನು ಭಾರತದಲ್ಲಿ ಜಾರಿಗೊಳಿಸಿದರು. ಅಂದಿನ ದೇಶೀಯ ಪ್ರಮುಖರು ಮತ್ತು

ದೇಶೀಯ ರಾಜರು ಜೊತೆಗೆ ಬಂಗಾಳದ ಜನರ ದೇಶದ ಇತರ ಭಾಗದ ಜನರಿಗಿಂತಲೂ ಆಧುನಿಕ ವಿದ್ಯೆಯಲ್ಲಿ ಮುಂದುವರಿದಿದ್ದರು. ಬಂಗಾಳದ ಅಂದಿನ ನಾಯಕರು ಇಂಗ್ಲಿಷ್ ವಿದ್ಯೆಯಲ್ಲಿ ಎಷ್ಟು ಪ್ರಬಲರಾದರೋ ಅದೇ ಪ್ರಮಾಣದಲ್ಲಿ ಪ್ರಚಂಡ ರಾಷ್ಟ್ರಾಭಿಮಾನಿಗಳಾಗಿದ್ದರು. ೧೯ನೇ ಶತಮಾನದ ಆರಂಭದ ಕಾಲದಲ್ಲಿ ಈ ದೇಶದ ಜನರು ಪ್ರಾಚೀನ ಕವಿಗಳ ಬರಹಗಳನ್ನು, ದಾಸರ ಹಾಡುಗಳನ್ನು, ಆಳ್ವಾರರ ಕೀರ್ತನೆಗಳನ್ನು, ಮೀರಾ, ಕಬೀರರ ಭಕ್ತಿ ಗೀತೆಗಳನ್ನು ಕಲಿಯುತ್ತಿರುವಾಗ ಬಂಗಾಳದ ಜನರು ಆಧುನಿಕ ಜ್ಞಾನದಲ್ಲಿ ಇತರರಿಗಿಂತ ಮುಂದುವರಿದಿದ್ದರು. ಬಂಗಾಳವು ಹಲವು ರೀತಿಯಲ್ಲಿ ಬದಲಾವಣೆಗಳಿಗೆ ಒಳಗಾಯಿತು. ರಾಜಕೀಯ ಚಟುವಟಿಕೆಗಳು, ವಿದ್ಯಾಪ್ರಗತಿಯು ಈ ಭಾಗದಲ್ಲಿಯೇ ಹೆಚ್ಚಾಗಿ ತೋರಿ ಬಂದವು. ಈಶ್ವರಚಂದ್ರ ವಿದ್ಯಾಸಾಗರ, ರಾಜಾರಾಮ್ ಮೋಹನರಾಯ, ಸುರೇಂದ್ರನಾಥ ಬ್ಯಾನರ್ಜಿ, ಜಗದೀಶ್ ಚಂದ್ರಬೋಸ್, ಸ್ವಾಮಿ ವಿವೇಕಾನಂದ ಮೊದಲಾದವರು ಇಲ್ಲಿನ ಪ್ರಮುಖ ಚಿಂತಕರಾಗಿದ್ದರು.

ಕ್ರಿ.ಶ. ೧೭೭೭ರಲ್ಲಿ ರಾಬರ್ಟ್ ಕ್ಲೈವ್ ಕಲ್ಕತ್ತಾದ ಪೋರ್ಟ್ ವಿಲಿಯಂ ಕೋಟೆಯಲ್ಲಿ ಬ್ರಿಟಿಷ್ ಧ್ವಜವನ್ನು ಹಾರಿಸಿ ವಸಾಹತುಗಳ ರಾಜಧಾನಿಯೆಂದು ಸಾರಿದ. ಅಂದಿನಿಂದ ಸುಮಾರು ೧೫೦ ವರ್ಷಗಳ ಕಾಲ ಅದು ಈ ದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿತ್ತು. ಬ್ರಿಟಿಷ್ ಸರಕಾರ, ವಿದೇಶಿ ವ್ಯಾಪಾರ, ಕ್ರೈಸ್ತಮತ ಪ್ರಚಾರ, ಸಂಸ್ಕೃತ ಬಂಗಾಳಿ ಮತ್ತು ಇಂಗ್ಲಿಷ್ ವಿದ್ಯಾಲಯಗಳ ಅಸ್ತಿಭಾರ, ಶ್ರೇಷ್ಠ ಪಾಶ್ಚಾತ್ಯ ವಿದ್ವಾಂಸರ ಪರಿವಾರ, ಆಧುನಿಕ ಜೀವನ ಕ್ರಮದ ಆಡಂಬರ ಇತ್ಯಾದಿ ಕಲ್ಕತ್ತಾಕ್ಕೆ ಮಾತ್ರವಲ್ಲ ಇಡೀ ಬಂಗಾಳಕ್ಕೂ ವ್ಯಾಪಿಸಿತು.

೧೭ನೇ ಶತಮಾನದ ಪ್ರಾರಂಭದಿಂದಲೇ ಬಂಗಾಳದ ಜನರಿಗೆ ಪಾಶ್ಚಾತ್ಯ ಜನರ ಸಂಪರ್ಕವಿತ್ತು. ಡಚ್ಚರು, ಪೋರ್ಚುಗೀಸ್‌ರು, ಇಂಗ್ಲಿಷರು, ಬಂಗಾಳದ ವಿವಿಧ ಕರಾವಳಿ ಪ್ರದೇಶಗಳಲ್ಲಿ ತಮ್ಮ ವ್ಯಾಪಾರ ಕೋಟೆಗಳನ್ನು ಸ್ಥಾಪಿಸಿದರು. ಆ ಪ್ರದೇಶ ಸಂಪೂರ್ಣವಾಗಿ ಬ್ರಿಟಿಷರ ಪಾಲಿಗೆ ಬಂದ ನಂತರ ಕ್ರೈಸ್ತ ಮತ ಪ್ರಚಾರಕರು ಅಲ್ಲಿ ಸಮಾಜ ಸೇವೆಗೆ ತೊಡಗಿದರು. ಜೇಮ್ಸ್ ರಾನೆಲ್ ಎಂಬ ಭೌಗೋಳಿಕ ಶಾಸ್ತ್ರಜ್ಞನೂ, ಹೆನ್ರಿ ಫಾರೆಸ್ಟರ್ ಎಂಬ ಸಂಸ್ಕೃತ ವಿದ್ವಾಂಸನು, ವಾರನ್ ಹೆಸ್ಟಿಂಗ್ಸ್, ಲಾರ್ಡ್ ಕಾರ್ನ್‌ವಾಲೀಸ್ ಮೊದಲ್ಗೊಂಡು ಹಲವು ರಾಜಕಾರಣಿಗಳು ಬಂಗಾಳದಲ್ಲಿಯೇ ಕಾರ್ಯಭಾರದ ಬಹುಪಾಲನ್ನು ಕೈಗೊಂಡು ಅಲ್ಲಿಯ ಜನರಲ್ಲಿ ಒಂದು ಬಗೆಯ ಪರಿಣಾಮವನ್ನುಂಟು ಮಾಡಿದರು.

ಕ್ರಿ.ಶ.೧೬೦೦ರಲ್ಲಿ ಆಂಗ್ಲರ ವ್ಯಾಪಾರ ಕಂಪನಿ ಎಂಬುದಿತ್ತು. ಆಗಿನ್ನೂ ಕಂಪನಿ ಸರಕಾರ ವೆಂಬುದು ಆಗಿರಲಿಲ್ಲ. ಡಚ್ಚರು, ಪೋರ್ಚುಗೀಸರು, ಫ್ರೆಂಚರು ಮತ್ತು ಇಂಗ್ಲಿಷರು ಈ ದೇಶದ ಬೇರೆ ಬೇರೆ ಭಾಗಗಳಲ್ಲಿ ವ್ಯಾಪಾರವನ್ನು ನಡೆಸಿದರು. ಈ ಶತಮಾನದಲ್ಲಿ ವ್ಯಾಪಾರಿಗಳ ತಂಡವು ಭಾರತದಲ್ಲಿ ಅವರು ನಡೆಸಿದ ವ್ಯವಹಾರಿಕ ವಿವರಗಳು ವರದಿಯನ್ನು ಆಗಿಂದಾಗ್ಗೆ ಸ್ವದೇಶಗಳಿಗೆ ಬರೆದು ಕಳುಹಿಸುತ್ತಿದ್ದರು. ಈ ಪತ್ರ ವ್ಯವಹಾರವನ್ನು ನಡೆಸುವವರು ವ್ಯಾಪಾರಿ ವರ್ಗಕ್ಕೆ ಸೇರಿದವರು, ನೌಕರರು, ನಾವಿಕರು, ಸೈನಿಕರು, ಮತ್ತು ಸಿಪಾಯಿಗಳಾಗಿದ್ದರು. ಹಡಗಿನಲ್ಲಿ ಬರುತ್ತಿದ್ದ ಪ್ರಯಾಣಿಕರು ಮತ್ತು ಕ್ರೈಸ್ತಮತದ ಪಾದ್ರಿಗಳು ಆಗಿದ್ದರು. ಇವರೆಲ್ಲಾ ದೇಶದಲ್ಲಿ ಸಾಧಿಸಿದ ವಿಷಯಗಳನ್ನು ಕುರಿತು ನೂರಾರು ಪತ್ರಗಳನ್ನು, ಪ್ರವಾಸ ಕೃತಿಗಳನ್ನು ಮತ್ತು ಈ ದೇಶದ ಜನ ಜೀವನ ಕುರಿತಾದ ಸಮಾಚಾರಗಳನ್ನು ಬರೆದು ಸ್ವದೇಶಗಳಿಗೆ ಕಳುಹಿಸುತ್ತಿದ್ದರು.

ಕ್ರಿ.ಶ.೧೮ನೇ ಶತಮಾನದ ಮಧ್ಯಕಾಲದಲ್ಲಿ ರಾಬರ್ಟ್ ಕ್ಲೈವ್ ಭಾರತದಲ್ಲಿ ಬ್ರಿಟಿಷ್ ಸರಕಾರದ ಅಸ್ತಿತ್ವಕ್ಕೆ ತಳಹದಿಯನ್ನು ಹಾಕಿದನು. ಅವರ ನಂತರ ವಾರನ್ ಹೆಸ್ಟಿಂಗ್ಸ್ ಈ ದೇಶದ ಮೊದಲನೆಯ ಗವರ್ನರ್ ಜನರಲ್ ಆಗಿ ನೇಮಕವಾದನು. ದೇಶದ ಆರ್ಥಿಕ ಸಂಪತ್ತನ್ನು ಕಸಿಯುವುದರಲ್ಲಿ ಮಾತ್ರ ನಿರತರಾಗದೆ ನಾಡಿನ ಸಾಂಸ್ಕೃತಿಕ ಮತ್ತು ಪಾರಮಾರ್ಥಿಕ ವಿಚಾರಗಳನ್ನು ಸಂಶೋಧಿಸಿ ಜಗತ್ತಿಗೆ ತಿಳಿಸುವ ಇಚ್ಛೆಯನ್ನು ಹೊಂದಿದ್ದನು.

ಕಂಪನಿ ಸರಕಾರವೂ ಪಾಶ್ಚಾತ್ಯ ವಿದ್ವಾಂಸರೂ ಈ ದೇಶದಲ್ಲಿ ಮತೀಯ ವ್ಯವಹಾರಗಳನ್ನು ಎಷ್ಟು ಶ್ರದ್ಧೆಯಿಂದ ನಡೆಸಿದರೋ ಮತ್ತು ಸಾಮ್ರಾಜ್ಯ ಸ್ಥಾಪನೆಗೆ ಹೋರಾಡಿದರೋ ಅಷ್ಟೇ ನಿಷ್ಠೆಯಿಂದ ಈ ದೇಶದ ಸಂಶೋಧನೆ, ಚಾರಿತ್ರಿಕ ಪರಿಶೋಧನೆ, ಭೌಗೋಳಿಕ ಅನ್ವೇಷಣೆ ಪ್ರಾಚೀನ ಸಾಹಿತ್ಯ, ಸಂಸ್ಕೃತಿಗಳ ಪ್ರಚಾರ ಮತ್ತು ಹಲವು ದುಷ್ಟ ಪದ್ಧತಿಗಳ ನಿವಾರಣೆಗಳಿಗೆ ಶ್ರಮಿಸಿದರು. ಈ ಎಲ್ಲಾ ಕ್ಷೇತ್ರಗಳಲ್ಲೂ ಬಹು ದಕ್ಷತೆಯಿಂದ ದುಡಿಯಲು ಐರೋಪ್ಯದ ವಿವಿಧ ಭಾಗಗಳಿಂದ ತಜ್ಞರಾದ ಸಾಧಕರೂ, ಆಡಳಿತಗಾರರೂ ಒಬ್ಬರ ನಂತರ ಒಬ್ಬರಾಗಿ ಬಂದು ಈ ದೇಶದ ಪ್ರಗತಿಗೆ ತಕ್ಕ ಸುಧಾರಣೆಗಳನ್ನು ನಾವೀನ್ಯತೆಯನ್ನು ತಂದುದು ಮಾತ್ರವಲ್ಲದೆ ಇತರ ಹಲವು ಕ್ಷೇತ್ರಗಳಲ್ಲೂ ಅವರು ವಿಧೇಯಕ ರೀತಿಯಲ್ಲಿ ದುಡಿದರೆಂಬುದನ್ನು ಅವರು ಈ ದೇಶದಲ್ಲಿ ಕೈಗೊಂಡ ಕಾರ್ಯಕಲಾಪಗಳ ಫಲಿತಾಂಶಗಳಿಂದಲೇ ತಿಳಿಯಬಹುದಾಗಿದೆ.

ಭಾರತದ ಜನಕ್ಕೆ ಆಧುನಿಕ ವಿಚಾರ ವಿಜ್ಞಾನವನ್ನು ನೀಡಲು ಆಲೋಚಿಸಿದ ಅಂಗ್ಲ ಅಧಿಕಾರಿಗಳಲ್ಲಿ ವಾರನ್ ಹೆಸ್ಟಿಂಗ್ಸ್ ಮೊದಲಿಗನು. ಜೊತೆಗೆ ಅದರೊಡನೆಯೇ ಭಾರತದ ಪ್ರಾಚೀನ ಗ್ರಂಥಗಳನ್ನು ಪರಿಶೋಧಿಸಲು ಮತ್ತು ಭಾಷಾಂತರಿಸಲು ತಕ್ಕ ಸನ್ನಿವೇಶವನ್ನು ಇವನು ಕಲ್ಪಿಸಿದನು.

ಕನ್ನಡಕ್ಕಾಗಿ ಶ್ರಮಿಸಿದ ಪಾಶ್ಚಾತ್ಯರಲ್ಲಿ ಮಿಶನರಿಗಳ ಸಾಹಿತ್ಯ ರಚನೆಯೇ ಮುಖ್ಯವಾಗಿದ್ದರೂ, ಬ್ರಿಟೀಷ್ ಅಧಿಕಾರಿಗಳ ಕೊಡುಗೆಯು ಮಹತ್ವದ್ದಾಗಿದೆ. ಮೊದಲು ಆಡಳಿತವನ್ನು ನಡೆಸಲು ಕನ್ನಡವನ್ನು ಕಲಿತರು. ನಂತರ ಅವರ ಜ್ಞಾನದ ಹಂಬಲದಿದಂ ಹೆಚ್ಚಾಗಿ ಇಲ್ಲಿನ ಸಂಶೋಧನೆಗಳನ್ನು ಮಾಡಿದರು. ಇಷ್ಟೇ ಅಲ್ಲದೆ ಪ್ರಾಚೀನ ಆವಶೇಷಗಳತ್ತ ತಮ್ಮ ಗಮನವನ್ನು ಹರಿಸಿದರು. ವೈಜ್ಞಾನಿಕ ದೃಷ್ಟಿಕೋನದಿಂದ ದೇಶೀಯ ಇತಿಹಾಸಕ್ಕೆ ಸಂಬಂಧಿಸಿದಂತೆ ಅನೇಕ ವಿಷಯಗಳನ್ನು ಪ್ರಪಂಚಕ್ಕೆ ಪರಿಚಯಿಸಿದರು. ಇವರಲ್ಲಿ ಮೆಕಂಜಿ, ಫ್ಲೀಟ್, ಇಪಿ ರೈಸ್ ಪ್ರಮುಖರಾಗಿದ್ದಾರೆ.

ಟಿಪ್ಪುವಿನಿಂದ ಬ್ರಿಟಿಷರು ಮೈಸೂರು ಪ್ರಾಂತ್ಯವನ್ನು ವಶಪಡಿಸಿಕೊಂಡ ಮೆಲೆ ಮೆಕಂಜಿಯನ್ನು ಸರ್ವೆ ಕೆಲಸಕ್ಕೆ ನೇಮಿಸಿದ್ದರು. ಇಂತಹ ಸಮಯದಲ್ಲಿ ಭಾರತದಲ್ಲೆಲ್ಲಾ ಸುತ್ತಾಡಿ ಸಾಕಷ್ಟು ಮಾಹಿತಿಯನ್ನು ಕಲೆಹಾಕಿರುವುದು ನಮಗೆ ತಿಳಿದುಬರುತ್ತದೆ.

> ಈ ಕಾರ್ಯದಲ್ಲಿ ತೊಡಗಿದ್ದಾಗಲೇ ಮೆಕಂಜಿಯು ದಕ್ಷಿಣ ಭಾರತದ ಶಾಸನ, ಹಸ್ತಪ್ರತಿ ಹಾಗೂ ಪುರಾತನ ವಸ್ತುಗಳನ್ನು, ಜೊತೆಗೆ ಸ್ಥಳ ಪುರಾಣ ಮೊದಲಾದವುಗಳನ್ನು ಕಲೆ ಹಾಕಿದ್ದನು. ಅಲ್ಲದೆ ತಾನೂ ಕಂಡದ್ದನ್ನು ಮತ್ತು ಜನರ ಬಾಯಿಯಿಂದ ಕೇಳಿದ್ದನ್ನು ದಿನಚರಿಯಲ್ಲಿ ವಿವರವಾಗಿ ಬರೆದುಕೊಳ್ಳುತ್ತಿದ್ದನು. ಇದು ಅವನ ಕಚೇರಿಯ ಕಾರ್ಯವೇನೂ ಆಗಿರಲಿಲ್ಲ. ಈ ಕೆಲಸಕ್ಕೆ ಕಂಪೆನಿ ಸರ್ಕಾರದಿಂದ ಪ್ರೋತ್ಸಾಹವು ಇರಲಿಲ್ಲ. ಮೇಲಾಗಿ ಅವನ ಸರ್ವೇ ಕೆಲಸವೇ ಅವನ ದಿನಚರಿಯ ಬಹುಪಾಲನ್ನು ಪಡೆಯುತ್ತಿದ್ದಿತು. ಇಂಥ ಸ್ಥಿತಿಯಲ್ಲಿ ತನಗೆ ಪೂರ್ವ ಪರಿಚಯ ಎಳ್ಳಷ್ಟೂ ಇರದ ಜನರೊಡನೆ ಬೆರೆತು ನಾನಾ ವಿಷಯಕವಾದ ಸಾಮಾಗ್ರಿಯನ್ನು ಕಲೆಹಾಕಿದುದು ಅವನ ಜ್ಞಾನ ತೃಷೆಗೆ ನಿದರ್ಶನವಾಗಿವೆ.[೪]

ಪಾಶ್ಚಾತ್ಯರಿಗೆ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ಬಂಗಾಳ ಇತ್ಯಾದಿ ಪ್ರಾಂತೀಯ ಭಾವನೆಗಳು ಅವರಲ್ಲಿ ಇರಲಿಲ್ಲ. ಇಡೀ ಭಾರತದ ಎಲ್ಲಾ ರಾಜ್ಯಗಳು ಅವರಿಗೆ ಒಂದು ದೇಶವಾಗಿತ್ತು. ಭಾರತದ ಎಲ್ಲಾ ಸೀಮೆಗಳನ್ನು ಭಾಷೆಗಳನ್ನು ಮತ್ತು ಜನಜೀವನ ವೈವಿಧ್ಯತೆಗಳನ್ನು ಏಕ ಪ್ರಕಾರವಾಗಿ ಕಂಡು ಆಯಾ ವಿಷಯಗಳನ್ನು ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸಿದರು. ಹೀಗೆ ಪಾಶ್ಚಾತ್ಯ ದೇಶಗಳ ವಿವಿಧ ಜನಾಂಗಕ್ಕೆ ಸೇರಿದ ರಾಜಕಾರಣಿಗಳು, ವಿದ್ವಾಂಸರು ಇಡೀ ದೇಶವನ್ನು ಒಂದೇ ಘಟಕವೆಂದು ಭಾವಿಸಿ ರಾಜ್ಯಭಾರವನ್ನು ನಡೆಸಿದಾಗ ಮತ್ತು ಪ್ರಾಚೀನ ಐತಿಹಾಸಿಕ ಸಂಶೋಧನಾ ಕಾರ್ಯವನ್ನೆಸಗಿದಾಗ ಅವರ ಸೇವೆಯು ಇಡೀ ದೇಶಕ್ಕೆ ಲಭಿಸಿತು. ಹೀಗೆ ಸಂಶೋಧನಾ ಕ್ಷೇತ್ರದಲ್ಲಿ ದುಡಿದವರಲ್ಲಿ ಕ್ರೈಸ್ತ ಧರ್ಮ ಗುರುಗಳು ಆಂಗ್ಲ ಅಧಿಕಾರಿಗಳು, ಪ್ರಾಕ್ತನ ಪರಿಶೋಧನಾ ಇಲಾಖೆಗಳಲ್ಲಿ ಐರೋಪ್ಯ ವಿದ್ವಾಂಸರು ಬ್ರಿಟಿಷರು ಸೇನಾ ಅಧಿಕಾರಿಗಳು ಮೊದಲಾದವರು ವಿವಿಧ ವರ್ಗದ ಜನರು ಬಹು ನಿಷ್ಠೆಯಿಂದ ಸೇವೆಯನ್ನು ಸಲ್ಲಿಸಿದ್ದಾರೆ.

ಬ್ರಾಹ್ಮಣರ ವೇದಗಳನ್ನು ಇತರರು ಓದಿದರೆ ಅವರಿಗೆ ಕಣ್ಣು ಕಾಣಿಸದಾಗುತ್ತದೆ. ಮಂತ್ರಗಳನ್ನು ಇತರರು ಕೇಳಿದರೆ ಕಿವಿ ಕೇಳಿಸಿದಂತಾಗುತ್ತದೆ ಇತ್ಯಾದಿ ಮಾತುಗಳು ಕೇಳಿಸುತ್ತಿರುವಾಗಲೇ ವೇದಗಳನ್ನು, ಉಪನಿಷತ್ತುಗಳನ್ನು ಇತರ ಶಾಸ್ತ್ರ ಗ್ರಂಥಗಳ ಹಸ್ತಪ್ರತಿ ಕಟ್ಟುಗಳನ್ನು ಇಂಗ್ಲೆಂಡ್, ಜರ್ಮನಿ, ಫ್ರಾನ್ಸ್, ಹಾಲೆಂಡ್ ಮೊದಲಾದ ದೇಶಗಳತ್ತ ಸಾಗಿಸಲ್ಪಟ್ಟು ಅವೆಲ್ಲವನ್ನು ೧೮ನೇ ಶತಮಾನದ ಅಂತ್ಯದೊಳಗಾಗಿಯೇ ಪಾಶ್ಚಾತ್ಯ ಪಂಡಿತರು ಅವುಗಳ ಸತ್ವ ಸಾರಗಳನ್ನು ಅರಗಿಸಿಕೊಂಡು ಲೋಕವೆಲ್ಲಾ ಪ್ರಚಾರಪಡಿಸಿದರು.

ವೇದ ಉಪನಿಷತ್‌ಗಳನ್ನು ಅಧ್ಯಯನ ಮಾಡಿದ ಪಾಶ್ಚಾತ್ಯ ವಿದ್ವಾಂಸರು ಭಾರತದಲ್ಲಿರುವ ಅಜ್ಞಾನ, ಅವಿಚಾರ, ಮೂಢನಂಬಿಕೆ ಮುಂತಾದವುಗಳನ್ನು ತೊಡೆದು ಹಾಕಲು ಬ್ರಿಟಿಷ್ ರಾಜಕಾರಣಿಗಳಿಗಿಂತ ವಿದ್ವಾಂಸರೇ ಮುಂದಾದರು. ದೇಶದ ಎಲ್ಲಾ ಭಾಗಗಳಲ್ಲೂ ಸಂಚರಿಸುತ್ತಿದ್ದ ಪಾಶ್ಚಾತ್ಯ ಕ್ರೈಸ್ತಮತೋಪದೇಶಕರು ಅಲ್ಲಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆದರು. ಚಿಕಿತ್ಸಾ ಶಿಬಿರಗಳನ್ನು ಸ್ಥಾಪಿಸಿದರು. ಆಧುನಿಕ ವ್ಯವಸಾಯ ಕೇಂದ್ರಗಳನ್ನು ಸ್ಥಾಪಿಸಿ ಜನರಿಗೆ ಕೃಷಿ, ಆರೋಗ್ಯ, ವಿದ್ಯೆ, ಇತ್ಯಾದಿಗಳನ್ನು ಕುರಿತು ಜ್ಞಾನ ಪ್ರಸಾರವನ್ನು ಮಾಡುವ ಕಾರ್ಯದಲ್ಲಿ ನಿರತರಾದರು. ಕ್ರಿ.ಶ. ೧೮೫೦ರ ಸುಮಾರಿನಲ್ಲಿ ಲಾರ್ಡ್ ಹಾರ್ಡಿಂಜ್ ಮತ್ತು ಲಾರ್ಡ್ ಡಾಲ್‌ಹೌಸಿ ಇವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ದೇಶದಲ್ಲಿ ಅವ್ಯಾಹತವಾಗಿ ನಡೆಯುತ್ತಿದ್ದ ನರಬಲಿ, ಚಿತ್ರಹಿಂಸೆ, ಗುಲಾಮರ ವ್ಯಾಪಾರ, ಇತ್ಯಾದಿಗಳನ್ನು ತೊಡೆದು ಹಾಕಿದರು. ಬ್ರಿಟಿಷ್ ಸರಕಾರವು ವಿದ್ಯಾ ಪ್ರಚಾರ ಮತ್ತು ಸಮಾಜ ಸಂಸ್ಕಾರಗಳಿವೆರಡನ್ನು ಏಕಕಾಲದಲ್ಲಿ ನಡೆಸುತ್ತಾ ಇನ್ನು ಹಲವಾರು ದುಷ್ಟ ಪದ್ಧತಿಗಳನ್ನು ನಿಲ್ಲಿಸಿದರು.

ವಾರನ್ ಹೆಸ್ಟಿಂಗ್ಸ್ ಮತ್ತು ಲಾರ್ಡ್ ಕಾರ್ನ್ ವಾಲೀಸ್ ಇವರ ಕಾಲದಲ್ಲಿ ಇಂಗ್ಲಿಷ್ ಭಾಷೆಯನ್ನು ಬಂಗಾಳ ಮತ್ತು ಉತ್ತರ ಹಿಂದುಸ್ಥಾನದ ಕೆಲವೆಡೆಗಳಲ್ಲಿ ಪ್ರಚಾರಪಡಿಸಲು ಶಾಲೆಗಳನ್ನು ಸ್ಥಾಪಿಸಿದರು. ಕ್ರೈಸ್ತಮತದ ಪ್ರಚಾರಕರು ಇದರಲ್ಲಿ ಆಸಕ್ತಿಯನ್ನು ವಹಿಸಿದರು. ರಾಜ್ಯದ ಆಡಳಿತದಲ್ಲಿ ಪರ್ಷಿಯನ್ ಮತ್ತು ಇಂಗ್ಲಿಷ್ ಭಾಷೆಗಳನ್ನು ಉಪಯೋಗಿಸುತ್ತಿದ್ದರು. ಇದಕ್ಕಾಗಿ ಹಲವಾರು ಭಾರತೀಯ ನ್ಯಾಯ ಶಾಸ್ತ್ರಗ್ರಂಥಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿ ಐರೋಪ್ಯ ನೌಕರರಿಗೆ ಈ ದೇಶದ ಜನಜೀವನದ ಪರಿಚಯವನ್ನು ಮಾಡಿಕೊಡತೊಡಗಿದರು. ಇಂಗ್ಲಿಷ್ ಭಾಷೆಯು ಕ್ರಮೇಣವಾಗಿ ಮತ್ತು ಹೆಚ್ಚಾಗಿ ಈ ಕಾಲದಲ್ಲಿ ಉಪಯೋಗವಾಗತೊಡಗಿತು. ಈ ದೇಶದ ಜನರು ಇಂಗ್ಲಿಷ್‌ನ್ನು ಕಲಿಯುವುದಕ್ಕೆ ಹಾತೊರೆದರು. ಸರಕಾರಿ ಕಚೇರಿಗಳಲ್ಲಿ ಕೂಡ ಪರ್ಷಿಯನ್ ಭಾಷೆಯ ಬದಲಾಗಿ ಇಂಗ್ಲಿಷ್ ಭಾಷೆಯನ್ನು ಬಳಸಲು ಆರಂಭಿಸಿದರು.

**ಶಿಕ್ಷಣದ ಮೇಲೆ ಮಿಶನರಿಗಳ ಪ್ರಭಾವ**

ಬ್ರಿಟಿಷರ ಆಡಳಿತದಿಂದ ಭಾರತಕ್ಕೆ ಮಿಶನರಿಗಳ ಆಗಮನವಾಯಿತು. ಮುದ್ರಣ ಯಂತ್ರಗಳು, ಕ್ರೈಸ್ತಮತ ಪ್ರಚಾರ, ಹೊಸ ಶಿಕ್ಷಣ ಪದ್ಧತಿ, ಕೈಗಾರಿಕೆಗಳು, ಯಂತ್ರ ಸಾಮಗ್ರಿಗಳು ಒಂದೊಂದಾಗಿ ಭಾರತಕ್ಕೆ ಕಾಲಿಟ್ಟವು. ಇವರ ಹೊಸವಿಚಾರ, ಆಧುನಿಕ ಸಂಚಾರ ಸಾಧನಗಳು ಅತ್ಯಂತ ಭಿನ್ನವಾದ ಪಾಶ್ಚಾತ್ಯ ನಾಗರೀಕತೆಯು ಇಲ್ಲಿನ ಜನಕ್ಕೆ ತುಂಬಾ ಆಕರ್ಷಕವಾಗಿ ತೋರಿತು. ಅವರ ವ್ಯವಹಾರ ದೃಷ್ಟಿ, ಜಾತಿಗಳ ಮೇಲು ಕೀಳೆನ್ನದ ವ್ಯವಹಾರ ಭಾರತೀಯರ ಜೀವನ ದೃಷ್ಟಿಯನ್ನು ಬದಲಾಯಿಸತೊಡಗಿದವು.

ಈ ಮಿಶನರಿಗಳು ಮುಖ್ಯವಾಗಿ ಕ್ರೈಸ್ತಮತ ಪ್ರಚಾರ ಮತ್ತು ಶಿಕ್ಷಣ ಕ್ಷೇತ್ರಕ್ಕೆ ನೇರವಾಗಿ ಪ್ರವೇಶಿಸಿದವು. ಬ್ರಿಟಿಷ್ ಸರಕಾರ ಮಿಶನರಿಗಳ ಮುಖಾಂತರ ತಮ್ಮ ಅನುಕೂಲಕ್ಕೆ ತಕ್ಕಂತೆ ಇಂಗ್ಲಿಷ್ ಶಾಲೆಗಳನ್ನು ಸ್ಥಾಪನೆ ಮಾಡಿ ಆಧುನಿಕ ವಿಜ್ಞಾನ, ಪ್ರಪಂಚ ಪರಿಚಯ, ಇಂಗ್ಲಿಷ್ ಕಲಿಕೆ, ಮುಂತಾದ ವಿಷಯಗಳನ್ನು ಭಾರತಕ್ಕೆ ಪರಿಚಯಿಸಿದರು. ವಸಾಹತು ಕಾಲದಲ್ಲಿ ಇಂಗ್ಲಿಷ್ ಶಿಕ್ಷಣ ತುಂಬಾ ವ್ಯಾಪಕತೆಯನ್ನು ಪಡೆಯುವುದಕ್ಕೆ ಮಿಶನರಿಗಳು ಪ್ರಮುಖ ಪಾತ್ರವನ್ನು ವಹಿಸಿವೆ. ಭಾರತದಲ್ಲಿ ತಮ್ಮ ಧರ್ಮವನ್ನು ಪ್ರಸಾರ ಮಾಡಬೇಕೆಂದರೆ ಭಾರತೀಯ ದೇಶ ಭಾಷೆಗಳಲ್ಲಿ ಅವರು ಗ್ರಂಥಗಳನ್ನು ಪ್ರಕಟಿಸುವುದಾಗಿತ್ತು. ಜೊತೆಗೆ ಶೈಕ್ಷಣಿಕ ಪಠ್ಯಗಳ ಮುಖಾಂತರವು ಧರ್ಮ ಪ್ರಸಾರ ಮಾಡುತ್ತಿದ್ದರು.

೧೯ನೇ ಶತಮಾನದಲ್ಲಿ ಮುಂಬಯಿ ಗವರ್ನರ್ ಆಗಿದ್ದ **ಎಲ್‌ಫಿನ್‌ಸ್ಟನ್** ಅವರು ಬಾಂಬೆ ಎಜುಕೇಶನ್ ಸೊಸೈಟಿ ಮತ್ತು ನೇಟಿವ್ ಸ್ಕೂಲ್ ಆ್ಯಂಡ್ ಬುಕ್ ಸೊಸೈಟಿಗಳ ಮೂಲಕ ಶಿಕ್ಷಣದ ಸೂತ್ರಗಳನ್ನು ಅನುಷ್ಠಾನದಲ್ಲಿ ತಂದನು. ಪಾಶ್ಚಾತ್ಯ ಶಿಕ್ಷಣ ಪದ್ಧತಿಯನ್ನು ಪಠ್ಯಪುಸ್ತಕ ಗಳನ್ನು ಅನುವಾದಿಸಿ ಮುದ್ರಿಸುವ ಯೋಜನೆಯಾಗಿತ್ತು. ಮುಂದೆ **ಜರ್ವಿಸ್** ಮುಂತಾದ ಕೆಲ ಅಧಿಕಾರಿಗಳು ದೇಶ ಭಾಷೆಗಳಲ್ಲೇ ಶಿಕ್ಷಣ ನೀಡಬೇಕು. ಹಾಗೂ ದೇಶಿಯ ಪದ್ಯಗಳನ್ನೇ ಪಠ್ಯಗಳಲ್ಲಿ ಅಳವಡಿಸಬೇಕು ಎಂದು ಪ್ರತಿಪಾದಿಸಿದರು. ಮುಂಬಯಿ ಪ್ರಾಂತ್ಯದಲ್ಲಿ ಮರಾಠಿ ಭಾಷೆಯಲ್ಲಿ ಪಠ್ಯಪುಸ್ತಕಗಳನ್ನು ರಚನೆ ಮಾಡಲು ಬ್ರಿಟಿಷ್ ಸರಕಾರ ಮುಂದಾಯಿತು.

ಮಿಶನರಿಗಳು ನಡೆಸುತ್ತಿದ್ದ ಶಾಲೆಗಳ ಮೂಲಕ ಪ್ರಧಾನವಾಗಿ ಹಿಂದೂ ಕೆಳಜಾತಿಯವರನ್ನು ಕ್ರಿಶ್ಚಿಯನ್ನರಾಗಿ ಮತಾಂತರಿಸಿ ಕರಾವಳಿ ಪಟ್ಟಣ ಹಾಗೂ ಕೆಲವಾರು ಪ್ರದೇಶಗಳಲ್ಲಿ ಲಕ್ಷಾಂತರ ಜನ ಮತಾಂತರ ಗೊಂಡಿದ್ದರು. ಈ ಮತಾಂತರಗೊಂಡಿದ್ದವರ ಜೊತೆಗೆ ದಕ್ಷಿಣ ಭಾರತದಲ್ಲಿ ಮಿಷನರಿಗಳ ಸಹಾಯ ಪಡೆದವರೆಂದರೆ ಮೇಲ್ಜಾತಿಯವರು. ಖಾಸಗಿಯವರ ಪ್ರಯತ್ನ ದಿಂದಾಗಲೀ ಅಥವಾ ಸರ್ಕಾರದಿಂದಾಗಲೀ ಉನ್ನತ ವ್ಯಾಸಂಗದ ಶಿಕ್ಷಣ ಸಂಸ್ಥೆಗಳು ಪ್ರಾರಂಭ

ವಾದಾಗ ಇಂಗ್ಲಿಷ್ ಶಿಕ್ಷಣವನ್ನು ಪಡೆದುಕೊಂಡು ಸರಕಾರದೊಡನೆ ಉತ್ತಮ ಬಾಂದವ್ಯ ಹೊಂದಿದ್ದು ನಾಡಿನಲ್ಲಿ ಬಹಳ ಪ್ರಬಲರಾಗಿ ಹೊರಹೊಮ್ಮಿದ್ದರು. ಅಂದಿನ ಶಾಲೆಗಳಲ್ಲಿ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಲ್ಲಿ ಶೇಕಡಾ ೮೦ರಷ್ಟು ವಿದ್ಯಾರ್ಥಿಗಳು ಬ್ರಾಹ್ಮಣರು ಮತ್ತು ಕ್ರಿಶ್ಚಿಯನ್ನರಾಗಿದ್ದರು. ಉಳಿದೆಲ್ಲಾ ಜಾತಿಯವರು ಶೇ. ೨೦ ಭಾಗದವರಾಗಿದ್ದರು. ೧೮೫೪ರಲ್ಲಿ ಭಾರತದಲ್ಲಿ ಸುಮಾರು ೧೮೦ ಇಂಗ್ಲಿಷ್ ವಿದ್ಯಾಸಂಸ್ಥೆಗಳಿದ್ದು, ಅವುಗಳಲ್ಲಿ ೩೦೦೦೦ ವಿದ್ಯಾರ್ಥಿಗಳು ಕಲಿಯುತ್ತಿದ್ದರು ಎಂದು ತಿಳಿದು ಬರುತ್ತದೆ. ಮುಖ್ಯವಾಗಿ ಈ ಮಿಶನರಿಗಳ ಉದ್ದೇಶ ಧರ್ಮ ಪ್ರಸಾರ ಮಾಡುವುದಾಗಿತ್ತು ಮತ್ತು ಕೆಳದರ್ಜೆಯ ನೌಕರಿಗಳಿಗೆ ಭಾರತೀಯ ವಿದ್ಯಾರ್ಥಿಗಳ್ನು ನೇಮಿಸುವುದು ಬ್ರಿಟಿಷ್ ಸರಕಾರದ ಉದ್ದೇಶವಾಗಿತ್ತು.

**ಕ್ರಿಶ್ಚಿಯನ್ ಮಿಶನರಿಗಳು**

ಭಾರತದಲ್ಲಿ ಶಿಕ್ಷಣ ನೀಡಲು ನೇರವಾಗಿ ಬ್ರಿಟಿಷ್ ಕಂಪನಿಗಳು ಮಾತ್ರವೆ ಕಾರಣವಾಗಿರಲಿಲ್ಲ. ಅದರೊಂದಿಗೆ ಕ್ರೈಸ್ತಮಿಶನರಿಗಳು ಸಹಾಯ ಹಸ್ತವನ್ನು ನೀಡಿದವು. ಶಿಕ್ಷಣ ಪ್ರಸಾರವೆಂಬ ಹೆಸರಿನಲ್ಲಿ ಬೈಬಲನ್ನು ಪ್ರಾದೇಶಿಕ ಭಾಷೆಗಳಲ್ಲಿ ಅನುವಾದ ಮಾಡಿದರು. ಕ್ರೈಸ್ತ ಧರ್ಮದ ಪ್ರಚಾರಕರು ಧರ್ಮವನ್ನು ವಿಸ್ತರಿಸಲು ಭಾರತಕ್ಕೆ ಆಗಮಿಸಿದರು. ಕ್ರೈಸ್ತ ಶಿಕ್ಷಣದ ಮೂಲಕ ವಿದ್ಯಾರ್ಥಿಗಳ ಮನಸ್ಸಿನಲ್ಲಿ ತಮ್ಮ ಧರ್ಮವನ್ನು ತುಂಬಲು ಪ್ರಾರಂಭಿಸಿದರು. ಈ ಕ್ರೈಸ್ತಮತ ಪ್ರಚಾರವು ಶಿಕ್ಷಣ ಕ್ಷೇತ್ರದಲ್ಲೂ ಪ್ರವೇಶಿಸಿತು. ಕ್ರೈಸ್ತ ಮಿಶನರಿಗಳು ತಮ್ಮ ಧರ್ಮವನ್ನು ಪ್ರಸಾರ ಮಾಡಲು ಆಂಗ್ಲಶಾಲೆಗಳನ್ನು ಸ್ಥಾಪನೆ ಮಾಡಿದರು. ಆಧುನಿಕ ವಿಜ್ಞಾನ ವಿಷಯಗಳನ್ನು ಪರಿಚಯ ಮಾಡಿದರು. ಇಂಗ್ಲಿಷ್ ಶಾಲೆಗಳ ಮೂಲಕ ಒದಗಿಸುತ್ತಿದ್ದ ಆಧುನಿಕ ಶಿಕ್ಷಣವು ಭಾರತೀಯರಿಗೆ ಮೂಢನಂಬಿಕೆಗಳ ಬಗ್ಗೆ ಅರಿವು ಮೂಡಿಸಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸಲು ಅತ್ಯಂತ ಫಲದಾಯಕ ಮಾರ್ಗವೆಂದು ಕ್ರಿಶ್ಚಿಯನ್ ಮಿಶನರಿಗಳು ಭಾವಿಸಿದ್ದವು.

ಮಿಶನರಿ ಸಂಸ್ಥೆಗಳಲ್ಲಿ ಮಾತ್ರವಲ್ಲದೇ ಸರಕಾರಿ ಶಾಲೆಗಳು ಮತ್ತು ಕಾಲೇಜುಗಳಲ್ಲಿ ಬೈಬಲ್ ಅಧ್ಯಯನವನ್ನು ಆರಂಭಿಸಲಾಯಿತು. ಸರಕಾರದ ಬೆಂಬಲದಿಂದ ನಡೆಯುತ್ತಿದ್ದ ಕೆಲವು ಶಾಲೆಗಳನ್ನು ಕ್ರೈಸ್ತ ಪಾದ್ರಿಗಳೇ ನಿರ್ವಹಿಸಿಕೊಂಡು ಹೋಗುತ್ತಿದ್ದರು. ಈ ಶಾಲೆಗಳನ್ನು ಸಂಪೂರ್ಣವಾಗಿ ಕ್ರೈಸ್ತ ಧರ್ಮದ ಆಧಾರದ ಮೇಲೆ ನಡೆಸಲಾಗುತ್ತಿತ್ತು. ಇಂತಹ ಶಾಲೆಗಳಲ್ಲಿ ಮತಾಂತರದ ಕಾರ್ಯವಿಧಾನವನ್ನು ಅನುಸರಿಸಲಾಗುತ್ತಿತ್ತು. ಶಿಕ್ಷಕರು ವಿದ್ಯಾರ್ಥಿಗಳಿಗೆ ಕೆಲವು ಪ್ರಶ್ನೆಗಳನ್ನು ಕೇಳುತ್ತಿದ್ದರು. ಆ ಪ್ರಶ್ನೆಗಳು ಸಂಪೂರ್ಣವಾಗಿ ಧರ್ಮಕ್ಕೆ ಅನುಗುಣವಾಗಿ ಇರುತ್ತಿದ್ದವು. ಆ ಪ್ರಶ್ನೆಗಳು ಹೀಗಿರುತ್ತಿದ್ದವು. ನಿಮ್ಮ ದೇವರು ಯಾರು? ನಿಮ್ಮ ವಿಮೋಚಕನು ಯಾರು? ಈ ಪ್ರಶ್ನೆಗಳಿಗೆ ವಿದ್ಯಾರ್ಥಿಗಳು ಥಟ್ಟನೆ ಕೊಡುತ್ತಿದ್ದ ಉತ್ತರವೆಂದರೆ ಏಸುಕ್ರಿಸ್ತ ಈ

ಉತ್ತರ ಅವರಿಗೆ ನಿಯಮಿತವಾಗಿ ಹೇಳಿಕೊಡಲಾಗುತ್ತಿದ್ದ ಪಾಠದ ಪರಿಣಾಮವಾಗಿತ್ತು. ಹಿಂದೂ ಧರ್ಮದ ಮೂಢನಂಬಿಕೆಗಳನ್ನು ಮತ್ತು ಅನಾಚಾರಗಳನ್ನು ಇನ್ನಷ್ಟು ಬಿಂಬಸಲಾಗುತ್ತಿತ್ತು. ಆದರೆ ಕ್ರೈಸ್ತ ಧರ್ಮವನ್ನು ದಿವ್ಯಾನಂದ ಮತ್ತು ಧನ್ಯತೆಗಳ ಭವ್ಯ ಶಬ್ದಗಳಲ್ಲಿ ವರ್ಣಿಸಲಾಗುತ್ತಿತ್ತು. ಕ್ರೈಸ್ತ ಧರ್ಮದಿಂದಲೇ ವಿಮೋಚನೆ ಎಂದು ಮಕ್ಕಳಿಗೆ ಮನಮುಟ್ಟುವಂತಹ ಮತ್ತು ಆಕರ್ಷಕ ರೀತಿಯಲ್ಲಿ ತಿಳಿಸಿಕೊಡಲಾಗುತ್ತಿತ್ತು.

ಯುರೋಪಿನಿಂದ ಬಂದ ಕ್ರೈಸ್ತಮತ ಪ್ರಚಾರಕರು ಕರ್ನಾಟಕದ ಕರಾವಳಿ ಪ್ರದೇಶ ಮತ್ತು ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಶಿಬಿರಗಳನ್ನು ತೆರೆದರು. ಸ್ಥಳೀಯ ಜನರೊಡನೆ ಸಂಪರ್ಕವನ್ನು ಬೆಳೆಸಿದರು. ಕ್ರೈಸ್ತಮತದ ಪ್ರಮುಖ ಧರ್ಮಗುರುಗಳು ಅಲ್ಲಿನ ಸ್ಥಳೀಯ ರಾಜರ ಅಥವಾ ನಾಯಕರ ಮೇಲೆ ಪ್ರಭಾವವನ್ನು ಬೀರಿ ಅವರ ವಿಶ್ವಾಸ ವನ್ನು ಗಳಿಸಿ ಅವರಿಂದ ತಮಗೆ ಬೇಕಾದ ಸಹಾಯವನ್ನು ಪಡೆಯುತ್ತಿದ್ದರು.

> ಹೈದರಾಲಿಯು ಸುಮಾರು ಕ್ರಿ.ಶ. ೧೭೭೮ರಲ್ಲಿ ಮಂಗಳೂರಿನಲ್ಲಿ ೬೦೦೦ ಕೇಥೋಲಿಕ್ ಕ್ರೈಸ್ತರಿಗೆ ಆಶ್ರಯವಿತ್ತನು. ಸುಮಾರು ೧೭೭೫ ಕಾಲಕ್ಕೆ ಶ್ರೀರಂಗಪಟ್ಟಣ, ಸತ್ಯಮಂಗಲ, ಪಾಲ್ಘಳ್ಳಿ, ನಾಗರ, ಶಿರಾ, ತುಮಕೂರು, ಮೊದಲಾದೆಡೆಗಳಲ್ಲಿ ಕ್ರೈಸ್ತ ಗುಡಿಗಳು ಏರಿದವು. ಇಷ್ಟರಲ್ಲಿ ಆಂಧ್ರ ಪ್ರದೇಶದ ಕಡೆಯಿಂದ ಬಂದ ಕ್ರೈಸ್ತರು ಹೊಸಕೋಟೆ, ಆನೆಕಲ್ಲು, ಕೋಲಾರ, ಚಿಕ್ಕಬಳ್ಳಾಪುರ, ಧಾರವಾಡ ಮೊದಲಾದ ಕಡೆಗಳಲ್ಲಿ ನೆಲೆಸಿದರು.[೫]

ಪಾಶ್ಚಾತ್ಯ ಕ್ರೈಸ್ತಮತ ಪ್ರಚಾರಕರು ತಮ್ಮ ಧರ್ಮವನ್ನು ಸಾರಲು ಕರ್ನಾಟಕದ ಹಲವು ಪ್ರದೇಶಗಳಲ್ಲಿ ಸೇರಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು. ಕ್ರೈಸ್ತ ಮತಕ್ಕೆ ಮತಾಂತರ ಹೊಂದುವವರಿಗೆ ಹಲವಾರು ಆಮಿಷಗಳನ್ನು ಒಡ್ಡುತ್ತಿದ್ದರು.

> ಕೊಡಗಿನ ದೊಡ್ಡ ವೀರರಾಜನು ೧೭೯೮ರಲ್ಲಿ ವೀರರಾಜಪೇಟೆಯಲ್ಲಿ ಕ್ರೈಸ್ತಮತಕ್ಕೆ ಸೇರಿದವರಿಗೆ ಜಮೀನು ಮತ್ತು ಹಣವನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದನು.[೬]

ಹೀಗೆ ಧರ್ಮಗುರುಗಳು ಅಲ್ಲಿನ ಸ್ಥಳೀಯ ನಾಯಕರೊಂದಿಗೆ ಸಂಪರ್ಕವನ್ನು ಬೆಳೆಸುವು ದಲ್ಲದೆ ಅವರಿಂದ ಮತಾಂತರವನ್ನು ಹೊಂದಿದವರಿಗೆ ಮನೆ, ಹೊಲ, ಹಣವನ್ನು ಕೊಡಿಸುತ್ತಿದ್ದರು.

ಕ್ರಿ.ಶ. ೧೭ ಮತ್ತು ೧೮ನೆ ಶತಮಾನದಲ್ಲಿ ಯುರೋಪಿನಿಂದ ಬಂದ ಕ್ರೈಸ್ತ ಮತ ಪ್ರಚಾರಕರು ಈ ದೇಶದ ಉದ್ದಗಲಕ್ಕೂ ಸಂಚರಿಸುತ್ತಿದ್ದಾಗ ಸಾಮಾನ್ಯ ಜನರು ಬಹುಮಟ್ಟಿಗೆ ಹಿಂದುಳಿದುದನ್ನು ಕಂಡರು. ಆದ್ದರಿಂದ ತಮ್ಮ ಧರ್ಮದ ಬೋಧನೆಯೊಂದಿಗೆ ಮತಾಂತರಗೊಂಡ ಬಡ ಭಾರತೀಯರಿಗೆ ಅನ್ನ, ಬಟ್ಟೆ, ವಿದ್ಯೆ ಮೊದಲಾದ ಸೌಕರ್ಯಗಳನ್ನು ಒದಗಿಸಲಾಗುತ್ತಿತ್ತು. ತಮ್ಮ ಮತಪ್ರಚಾರವೇ ಅವರಿಗೆ ಮುಖ್ಯ ಗುರಿಯಾಗಿತ್ತು. ಸಮಾಜಸೇವೆಯ ನಿಮಿತ್ತವಾಗಿ

ಜನರೊಡನೆ ಆತ್ಮೀಯ ಸಂಪರ್ಕವನ್ನು ಬೆಳೆಸಿದರು. ಅವರು ಹಿಂಸಾತ್ಮಕ ನೀತಿಯನ್ನು ಅನುಸರಿಸದೆ ದಲಿತರಾದ ಮತ್ತು ಜಾತೀಯವಾದದ ಪೀಡೆಗೆ ಬಲಿಬಿದ್ದ ಬಡಜನರನ್ನು ತಾವಾಗಿಯೇ ಅವರ ಬಲೆಗೆ ಬೀಳುವಂತೆ ಅವರನ್ನು ಆಕರ್ಷಿಸಿದರು. ಸಾಧ್ಯವಾದಷ್ಟು ಮಟ್ಟಿಗೆ ಅವರನ್ನು ಕ್ರೈಸ್ತ ಮತಕ್ಕೆ ಸೇರಿಸಲು ಪ್ರಯತ್ನಿಸುತ್ತಿದ್ದರು. ಕ್ರೈಸ್ತಮತಕ್ಕೆ ಸೇರಿಸಿದರೆ ಮಾತ್ರ ಉದ್ಧಾರವಾಗುವುದೆಂದು ನಂಬಿಸುತ್ತಿದ್ದರು.

ಲಾರ್ಡ್ ಮೆಕಾಲೆಯ ವಿದ್ಯಾಯೋಜನೆ ೧೮೩೫ರಲ್ಲಿ ಜಾರಿಗೆ ಬರುವುದಕ್ಕಿಂತ ಮೊದಲೇ ಹಲವಾರು ಇಂಗ್ಲಿಷ್ ಶಾಲೆಗಳು ಭಾರತದಲ್ಲಿ ಸ್ಥಾಪನೆಯಾಗಿದ್ದವು. ಕ್ರೈಸ್ತಮತ ಪ್ರಚಾರಕರು ನಾಡಿನ ಕೆಲ ಕೇಂದ್ರಗಳಲ್ಲಿ ಇಂಗ್ಲಿಷ್ ಶಾಲೆಗಳನ್ನು ಸ್ಥಾಪಿಸಿದ್ದರು. ಬಾಸೆಲ್ ಮಿಷನ್, ವೆಸ್ಲಿಯನ್ ಮಿಷನ್, ಜಿಸಸ್ ಮಿಷನ್, ಫ್ರೀ ಚರ್ಚ್ ಸ್ಕಾಟ್‌ಲ್ಯಾಂಡ್ ಮಿಷನ್ ಮೊದಲಾದ ಸಂಸ್ಥೆಗಳು ಹಲವಾರು ಆಂಗ್ಲ ಪಾಠಶಾಲೆಗಳನ್ನು ತೆರೆದರು. ಬಾಸೆಲ್ ಮಿಷನ್‌ನ ಮೊದಲ ಮಾಧ್ಯಮಿಕ ಶಾಲೆಯು ಕ್ರಿ.ಶ. ೧೮೬೩ರಲ್ಲಿ ಧಾರವಾಡದಲ್ಲಿ ಸ್ಥಾಪನೆಯಾಯಿತು. ೧೮೫೭ರಲ್ಲಿ ಕಲ್ಕತ್ತಾ, ಬೊಂಬಾಯಿ ಮತ್ತು ಮದ್ರಾಸು ವಿಶ್ವವಿದ್ಯಾಲಯಗಳು ಸ್ಥಾಪನೆಯಾದ ಮೇಲೆ ಹಲವು ಕ್ರೈಸ್ತ ಪಾಠಶಾಲೆಗಳು ಮಾಧ್ಯಮಿಕ ಶಾಲೆಗಳಾಗಿರುವುದಲ್ಲದೆ ಕೆಲ ಕಾಲೇಜು ಕಟ್ಟಡಗಳ ಆಸ್ತಿ ಭಾರವು ಹಾಕಲ್ಪಟ್ಟವು. ಆಧುನಿಕ ವಿಜ್ಞಾನ ಭೂಗೋಳ ಇತ್ಯಾದಿ ವಿಷಯಗಳನ್ನು ಶಾಸ್ತ್ರೀಯ ವಾಗಿ ಬೋಧಿಸಲು ತಕ್ಕ ತಳಹದಿಯನ್ನು ಹಾಕಿದ್ದಲ್ಲದೆ ಶಾಲೆಗಳಲ್ಲಿ ಉತ್ತಮ ಶಿಸ್ತು ಮತ್ತು ಸುವ್ಯವಸ್ಥಿತ ಶಿಕ್ಷಣ ಕ್ರಮಗಳನ್ನು ಜಾರಿಗೆ ತಂದರು.

ಮಿಶನರಿಗಳಿಗೆ ದೇಶೀಯತೆ ಶಿಕ್ಷಣದ ಅಗತ್ಯ ಹೆಚ್ಚಾಗಿದ್ದಿತು. ಇಲ್ಲಿಯ ಜನರನ್ನು ನಂಬಿಸಿ ತಮ್ಮ ಧರ್ಮಕ್ಕೆ ಮತಾಂತರ ಮಾಡಿಕೊಳ್ಳುವ ಉದ್ದೇಶದಿಂದ ಹಲವಾರು ಶೈಕ್ಷಣಿಕ ಸಂಸ್ಥೆಗಳನ್ನು ಪ್ರಾರಂಭಮಾಡಿದರು. ವಯಸ್ಕರ ಮನಸ್ಸನ್ನು ಪರಿರ್ವತನೆ ಮಾಡುವುದು ತುಂಬಾ ಕಷ್ಟದ ಕೆಲಸ. ಅವರ ಮನಸ್ಸಿನಲ್ಲಿ ಬೇರೂರಿದ ನಂಬಿಕೆಗಳನ್ನು ಸಡಿಲಿಸುವುದು ಅಸಾಧ್ಯ, ಅದಕ್ಕಾಗಿ ಎಳೆಯರ ಮನಸ್ಸು ಬಿಳಿಯಹಾಳೆ ಇದ್ದ ಹಾಗೆ. ಅವರ ಮನಸ್ಸಿನಲ್ಲಿ ಏನು ತುಂಬಿದರು ಅದು ಮೊಳಕೆಯೊಡೆದು ಬೇರೂರುತ್ತದೆ ಎಂಬ ಆಸೆಯಿಂದ ಅವರು ಇಂತಹ ಒಂದು ಕಾರ್ಯವನ್ನು ಕೈಗೊಂಡರು. ಇದರ ಮೂಲಕ ಮಿಶನರಿಗಳು ಮಕ್ಕಳ ಮನದಲ್ಲಿ ಬೈಬಲಿನ ನಿತ್ಯ ಪಠಣ ಮತ್ತು ಕ್ರೈಸ್ತ ತತ್ವಗಳನ್ನು ಒಳಗೊಂಡ ವಾಚನ ಪಾಠವನ್ನು ತುಂಬುತ್ತಿದ್ದರು. ಇದರಿಂದ ಮಕ್ಕಳ ಮನಸ್ಸನ್ನು ಪರಿವರ್ತನೆ ಮಾಡಿ ಅವರನ್ನು ಆಕರ್ಷಿಸಿಕೊಳ್ಳುತ್ತಿದ್ದರು. ಇದರಿಂದ ಹಲವಾರು ಪ್ರಾಥಮಿಕ ಶಾಲೆಗಳನ್ನು ಪ್ರಾರಂಭ ಮಾಡಿದರು. ಹೀಗೆ ಶಾಲೆಗಳನ್ನು ಸ್ಥಾಪಿಸಿದ ಮಿಶನರಿಗಳೆಂದರೆ ಲಂಡನ್ ಮಿಶನ್, ವೆಸ್ಲಿಯನ್ ಮಿಶನ್, ಬಾಸೆಲ್ ಮಿಷನ್.

**ಲಂಡನ್ ಮಿಶನ್**

ಲಂಡನ್ ಮಿಶನ್ ಸಂಸ್ಥೆಯವರು ಬೆಂಗಳೂರಿನಲ್ಲಿ ಒಂದು ಕಾಲೇಜನ್ನು ಸ್ಥಾಪನೆ ಮಾಡಿದರು. ಅಲ್ಲಿ ತತ್ವಜ್ಞಾನ, ವಿಜ್ಞಾನ ಮತ್ತು ವಾಙ್ಮಯ ವಿಷಯಗಳನ್ನು ಕಲಿಸುವುದಕ್ಕೆ ಪ್ರಯತ್ನಿಸುತ್ತಿದ್ದರು. ಇಂತಹ ವಿಷಯಗಳನ್ನು ಭೋದಿಸುವುದಕ್ಕೆ ಬ್ರಿಟಿಷರು ಶಿಕ್ಷಕರನ್ನು ನೇಮಿಸುತ್ತಿದ್ದರು. ಆದರೆ ಭಾರತೀಯ ವಿಷಯಗಳಿಗಾಗಿ ಇಲ್ಲಿನ ಪಂಡಿತರನ್ನು ಆಮಂತ್ರಿಸುತ್ತಿದ್ದರು. ಇದರ ಮುಖ್ಯ ಗುರಿಯು ಕ್ರೈಸ್ತಮತ ಪ್ರಚಾರ ಮಾಡುವುದಾಗಿತ್ತು. ಇಲ್ಲಿ ಕಲಿತ ದೇಶಿಯರು ಮತಾಂತರ ಹೊಂದುವವರಲ್ಲದೆ ಅವರಲ್ಲಿ ಕೆಲವರು ಬೋಧಕರಾಗಿ ಮಾರ್ಪಟ್ಟರು. ಹೀಗೆ ಶಿಕ್ಷಣದ ನೆಪದಲ್ಲಿ ಲಂಡನ್ ಮಿಶನ್ ಕ್ರೈಸ್ತಮತ ಪ್ರಚಾರವನ್ನು ಮಾಡುತ್ತಿತ್ತು.

**ವೆಸ್ಲಿಯನ್ ಮಿಶನ್**

ಥಾಮಸ್ ಹಾಡ್ಲನ್ ಅವರು ಬೆಂಗಳೂರಿನಲ್ಲಿ ಕಾಂಟೋನ್ ಮೆಂಟಿನಲ್ಲಿ ಇಂಗ್ಲಿಷ್ ಶಾಲೆಯನ್ನು ಸ್ಥಾಪಿಸಿ ಪಬ್ಲಿಕ್ ಪರೀಕ್ಷೆಯನ್ನು ಜಾರಿಗೆ ತಂದರು. ಅಲ್ಲದೆ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಪದಕ–ಪಾರಿತೋಷಕಗಳನ್ನು ನೀಡುವುದನ್ನು ಜಾರಿಗೆ ತಂದನು. ಇದರಿಂದ ಪರೀಕ್ಷೆಯಲ್ಲಿ ಅನುತ್ತೀರ್ಣರಾದ ವಿದಾರ್ಥಿಗಳು ಶಿಕ್ಷಣ ವ್ಯವಸ್ಥೆಯಿಂದ ದೂರ ಉಳಿಯುವ ಪರಿಸ್ಥಿತಿ ಒದಗಿಬಂದಿತು. ಅಂದಿನಿಂದ ಇಂದಿಗೂ ಹಲವಾರು ವಿದ್ಯಾರ್ಥಿಗಳು ಈ ವ್ಯವಸ್ಥೆಗೆ ಒಳಪಟ್ಟು ಶಿಕ್ಷಣದಿಂದ ದೂರ ಉಳಿಯುವಂತಾಗಿದೆ.

**ಬಾಸೆಲ್ ಮಿಶನ್**

ಈ ಮಿಶನ್‌ನಲ್ಲಿ ಸ್ಯಾಮುಯೆಲ್ ಮತ್ತು ಮೋಗ್ಲಿಂಗ್ ಇವರು ೧೮೪೦ರಲ್ಲಿ ಮಂಗಳೂರಿನಲ್ಲಿ ಕನ್ನಡ ಮತ್ತು ಇಂಗ್ಲಿಷ್ ಶಾಲೆಗಳನ್ನು ಸ್ಥಾಪಿಸಿದರು. ಇವುಗಳಲ್ಲಿ ದೇಶಿಯ ಶಿಕ್ಷಣವನ್ನು ಬೋಧಿಸುತ್ತಿದ್ದರು. ಈ ಶಾಲೆಗಳಲ್ಲಿ ಮೊಗ್ಲಿಂಗ್‌ನ ಕನ್ನಡ ಕಾವ್ಯ ವ್ಯಾಕರಣ, ಬೈಬಲಿನ ತತ್ವಗಳನ್ನು ಬೋಧಿಸುತ್ತಿದ್ದರು. ಅದರ ಜೊತೆಗೆ ಗ್ರೀಕ್ ಭಾಷೆಯನ್ನು ಸೇರಿಸಿಕೊಳ್ಳಲಾಯಿತು. ಇದರಿಂದ ಸಂಪೂರ್ಣವಾಗಿ ಇಲ್ಲಿಯ ಜನರನ್ನು ತಮ್ಮ ಕಡೆ ಆಕರ್ಷಿಸುವುದಕ್ಕೆ ಎಲ್ಲಾ ವಿದ್ಯಾರ್ಥಿಗಳನ್ನು ಒಟ್ಟುಗೂಡಿಸಿ ಶಿಕ್ಷಣವನ್ನು ಕೊಡುವ ಯೋಜನೆ ಹಾಕಿದ್ದರು. ಇದರಿಂದ ದೇಶೀಯರ ಸ್ವಭಾವ ಅವರ ನಡವಳಿಕೆ ವರ್ತನೆಗಳನ್ನು ಪರಿಚಯ ಮಾಡಿಕೊಳ್ಳುತ್ತಿದ್ದರು. ಅಲ್ಲದೆ ಆಯಾ ಕ್ಷೇತ್ರಗಳಲ್ಲಿ ನಡೆಯುವ ಆಚಾರ ವಿಚಾರಗಳನ್ನು ಪರಿಶೀಲನೆ ಮಾಡುತ್ತಿದ್ದರು. ಇದರಿಂದ ಅವರ ವ್ಯವಹಾರ ಮತ್ತು ಆಡಳಿತದ ಸುಲಭತೆಯನ್ನು ಕಂಡುಕೊಳ್ಳುತ್ತಿದ್ದರು. ಇಂತಹ ಅಧ್ಯಯನಗಳನ್ನು ನಡೆಸುವುದಕ್ಕೆ ಹಲವಾರು ದೇಶಿಯ ವಿದ್ವಾಂಸರುಗಳನ್ನು ನೇಮಕ ಮಾಡಿಕೊಳ್ಳುತ್ತಿದ್ದರು. ಈ ರೀತಿಯಾಗಿ ವಸಾಹತುಶಾಹಿ ಶಿಕ್ಷಣ ಪದ್ಧತಿಯು ಮಿಶನರಿಗಳ

ಮೂಲಕ ನಡೆದುಬಂದಿತು. ಕ್ರೈಸ್ತ ಮಿಶನರಿಗಳ ಮುಖಾಂತರ ಮತಪ್ರಸಾರ ಮಾಡುವ ಉದ್ದೇಶದಿಂದ ಹಲವಾರು ಶಾಲೆಗಳು ದೇಶಾದ್ಯಂತ ಹುಟ್ಟಿಕೊಂಡವು. ಇದರಲ್ಲಿ ಮಕ್ಕಳ ಬುದ್ಧಿಶಕ್ತಿಗೆ ಮೀರಿ ಪಠ್ಯಪುಸ್ತಕಗಳಲ್ಲಿ ವಿಷಯವನ್ನು ಅಳವಡಿಸಲಾಗಿತ್ತು. ನಿಘಂಟು, ತತ್ವಜ್ಞಾನ, ಆಧುನಿಕ ವಿಜ್ಞಾನ, ಭೂಗೋಳ, ಚರಿತ್ರೆ, ಮುಂತಾದ ವಿಷಯಗಳನ್ನು ಅಳವಡಿಸಿದರು. ವಿಜ್ಞಾನವನ್ನು ಕಲಿಯುವ ವಿದ್ಯಾರ್ಥಿಗಳು ಕಡ್ಡಾಯವಾಗಿ ಇಂಗ್ಲಿಷ್ ಕಲಿಯಬೇಕಾಗಿತ್ತು. ಇಂದು ಮಕ್ಕಳು ಓದುವ ಹಲವಾರು ಪಠ್ಯಪುಸ್ತಕಗಳು ಎಂ.ಎ., ಎಂ.ಎಸ್ಸಿ, ತರಗತಿಯವರು ಅಭ್ಯಾಸ ಮಾಡುವಂತಹವು. ಹದಿನಾಲ್ಕನೆಯ ಶತಮಾನದ ಛಾಸರ್ ಕವನಗಳನ್ನು, ಷೇಕ್ಸ್‌ಪಿಯರ್‌ನ ನಾಟಕಗಳನ್ನು, ಮಿಲ್ಟನ್, ವರ್ಡ್ಸ್‌ವರ್ತ್, ಶೆಲ್ಲಿ, ಕೀಟ್ಸ್ ಮುಂತಾದವರ ವಿಷಯಗಳನ್ನು ಕುರಿತು ಅತ್ಯಂತ ಕಷ್ಟದಾಯಕವಾಗಿ ಕಲಿಸಲಾಗುತ್ತಿತ್ತು. ಇಂಗ್ಲಿಷ್ ಮಾಧ್ಯಮದ ಶಿಕ್ಷಣವನ್ನು ಪಡೆದರೆ ಉದ್ಯೋಗ ಖಾಯಂ ಆಗಿ ಸಿಗುತ್ತದೆ ಎಂಬ ನಂಬಿಕೆಯಿಂದ ಅತ್ಯಂತ ಕಷ್ಟಪಟ್ಟು ಶಿಕ್ಷಣವನ್ನು ಪಡೆಯುವ ಪರಿಸ್ಥಿತಿ ಒದಗಿಬಂದಿತ್ತು. ಇಂದು ಇಂಗ್ಲಿಷ್ ಶಿಕ್ಷಣವನ್ನು ಪಡೆದವರು ಸಹ ನಿರುದ್ಯೋಗಿಗಳಾಗಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ವಸಾಹತು ಶಿಕ್ಷಣ ಪದ್ಧತಿಯು ಹಲವಾರು ಸಮಸ್ಯೆಗಳನ್ನು ಹುಟ್ಟುಹಾಕಿದೆ. ಕ್ರೈಸ್ತಮಿಶನರಿಗಳು ಹಲವಾರು ಸಮಾಜಸೇವೆಯ ಕಾರ್ಯಗಳನ್ನು ಕೈಗೊಂಡರು. ಕರ್ನಾಟಕದ ಪ್ರಮುಖ ಕೇಂದ್ರಗಳಲ್ಲಿ ಔಷಧಾಲಯಗಳನ್ನು ಸ್ಥಾಪಿಸಿ ರೋಗಿಗಳ ಚಿಕಿತ್ಸೆಗಾಗಿ ಶ್ರಮಿಸಿದರು. "ಹಾಸನ, ಮಂಗಳೂರು, ಹುಬ್ಬಳ್ಳಿ, ರಾಯಚೂರು, ಬೀದರ, ಹುಲಿಕೋಟೆ, ಗದಗ ಮೊದಲಾದೆಡೆಗಳಲ್ಲಿ ಚಿಕಿತ್ಸಾಲಯಗಳನ್ನು ತೆರೆದು ಬಡವರನ್ನು ಮತ್ತು ಅನಾಥರನ್ನು ಪೋಷಿಸಿದರು. ಕಂಪನಿ ಸರಕಾರದ ಪ್ರೋತ್ಸಾಹದಿಂದ ದೀನದಲಿತರಿಗೆ ಉಚಿತವಾಗಿ ಔಷಧಿಗಳನ್ನು ಹಂಚಿದರು. ಮೀರಜ್ ಮತ್ತು ಮಂಗಳೂರಿನಲ್ಲಿ ಕ್ರಿ.ಶ. ೧೮೧೦ರ ಕಾಲದಲ್ಲಿಯೇ ಅವರು ಸ್ಥಾಪಿಸಿದ ಕ್ಷಯರೋಗಾಸ್ಪತ್ರೆಗಳು ಪ್ರಸಿದ್ಧವಾಗಿದ್ದವು. ೧೮೫೦ರಿಂದ ಕರ್ನಾಟಕದ ಎಲ್ಲಾ ಪ್ರಮುಖ ಪಟ್ಟಣಗಳಲ್ಲೂ ಕ್ರೈಸ್ತಮತ ಪ್ರಚಾರ ಸಂಸ್ಥೆಗಳ ಚಿಕಿತ್ಸಾ ಶಿಬಿರಗಳು ಇದ್ದವು.

ಕೃಷಿ ಕ್ಷೇತ್ರದಲ್ಲೂ ಅವರಿಗೆ ತುಂಬಾ ಆಸಕ್ತಿಯಿತ್ತು. ಕರ್ನಾಟಕ ಮುಂತಾದ ಸ್ಥಳಗಳಲ್ಲಿ ವ್ಯವಸಾಯ ಕೇಂದ್ರಗಳನ್ನು ಸ್ಥಾಪಿಸಿ ಜನರಿಗೆ ಆಧುನಿಕ ವ್ಯವಸಾಯ ಕ್ರಮವನ್ನು ಕಲಿಸಲು ಶ್ರಮಿಸುತ್ತಿದ್ದರು. ನಿರಾಶ್ರಿತರನ್ನು ಕ್ರೈಸ್ತಮತಕ್ಕೆ ಮತಾಂತರಿಸಿ ಸರಕಾರದ ಸಹಾಯದಿಂದ ಹೊಲವನ್ನು ಪಡೆದು ಹಂಚುತ್ತಿದ್ದರು. ಚನ್ನಪಟ್ಟಣ, ಕೊಳ್ಳೆಗಾಲದಲ್ಲಿ ರೇಷ್ಮೆ ವ್ಯವಸಾಯಕ್ಕೆ ಅನುವುಮಾಡಿ ಕೊಡುತ್ತಿದ್ದರು. ಕೊಡಗು, ಚಿಕ್ಕಮಗಳೂರು ಕಡೆಗಳಲ್ಲಿ ಕಾಫಿ ವ್ಯವಸಾಯವನ್ನು ಪ್ರೋತ್ಸಾಹಿಸುತಿದ್ದರು. ಕೈಗಾರಿಕೆ, ವ್ಯಾಪಾರ ಮುಂತಾದವುಗಳಲ್ಲಿ ಜನರಿಗೆ ಮಾರ್ಗದರ್ಶಕರಾದರು. ಬಿಜಾಪುರದಲ್ಲಿ ಒಂದು ನೇಯ್ಗೆ ಶಾಲೆಯನ್ನು ಅವರು ಪ್ರಥಮ ಬಾರಿಗೆ ತೆರೆದರು. ಮಂಗಳೂರು,

ಮಲ್ಪೆ ಮುಂತಾದ ಕಡೆಗಳಲ್ಲಿ ಹಂಚಿನ ಕಾರ್ಖಾನೆಗಳನ್ನು ಸ್ಥಾಪಿಸಿ ನಿರುದ್ಯೋಗಿಗಳ ತೊಂದರೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ನಿವಾರಿಸಲು ಶ್ರಮಿಸಿದರು. ಹೀಗೆ ಹಲವು ವಿಷಯಗಳಲ್ಲಿ ಜನತೆಗೆ ನವೀನ ಹಾದಿಯನ್ನು ತೋರಿಸಿದರು.

ಎರಡನೂರು ವರ್ಷಗಳ ಹಿಂದೆ ಅವರು ಸ್ಥಾಪಿಸಿದ ಚಿಕ್ಕ ಶಾಲೆಗಳು ಇಂದು ದೊಡ್ಡ ಕಲಾ ಶಾಲೆಗಳಾಗಿವೆ. ಅವರು ಅಂದು ತೆರೆದ ಪುಟ್ಟ ವೈದ್ಯಕೀಯ ಶಿಬಿರಗಳು ಇಂದು ದೊಡ್ಡ ಚಿಕಿತ್ಸಾಲಯಗಳಾಗಿ ಮಾರ್ಪಟ್ಟಿವೆ. ಅವರು ತಳಹದಿಯನ್ನು ಹಾಕಿದ ಆಧುನಿಕ ಶಿಕ್ಷಣ ಕ್ರಮದ ಮೇಲೆಯೇ ಇಂದು ದೊಡ್ಡ ವಿಶ್ವವಿದ್ಯಾಲಯಗಳು ತಲೆ ಎತ್ತಿವೆ. ಕ್ರೈಸ್ತಮತ ಪ್ರಚಾರಕರು ಸರಕಾರದ ಅಧಿಕಾರಿಗಳು ಈ ದೇಶದ ಪ್ರಗತಿಗೆ ಮತ್ತು ಸಮಾಜದ ಪರಿಷ್ಕಾರಕ್ಕೆ ದುಡಿದರು. ಈ ದೇಶದಲ್ಲಿ ಪ್ರಚಲಿತವಿದ್ದ ಹಲವು ದುಷ್ಟ ಪದ್ಧತಿಗಳನ್ನು ನಿಲ್ಲಿಸಿದರು. ಪ್ರಾಚೀನ ಗ್ರಂಥಗಳನ್ನು ಕುರಿತು ಸಾಹಿತ್ಯ ಸಂಶೋಧನೆಯನ್ನು ಕೈಗೊಂಡರು. ಅಂದು ಅವರು ನಡೆಸಿದ ಅನ್ವೇಷಣೆ ಮತ್ತು ಸಂಶೋಧನೆಗಳು ಇಂದಿನವರಿಗೆ ಪ್ರಾಚೀನ ಕಾಲದ ಕರ್ನಾಟಕವನ್ನು ತಿಳಿದುಕೊಳ್ಳಲು ಸಹಕಾರಿಯಾಗಿವೆ.

### ಕನ್ನಡದಲ್ಲಿ ಬೈಬಲ್ ಸಾಹಿತ್ಯ

ಕ್ರಿಶ್ಚಿಯನ್ ಧರ್ಮಗುರುಗಳು ಈ ದೇಶದಲ್ಲಿ ಹಲವಾರು ಭಾಷೆಗಳನ್ನು ಕಲಿತು ಸ್ಥಳೀಯ ಜನರೊಡನೆ ಬೆರೆತು ತಮ್ಮ ಕಾರ್ಯಸಾಧನೆಗೆ ನಿಷ್ಠೆಯಿಂದ ಇಳಿದರು. ಪ್ರಾರಂಭದಲ್ಲಿ ದೇಶಿಯ ಭಾಷೆಗಳನ್ನು ಕಲಿತು ಚಿಕ್ಕ ಚಿಕ್ಕ ಸಭೆಗಳನ್ನು ಅಲ್ಲಲ್ಲಿ ನಡೆಯಿಸಿ ಭಾಷಣಗಳನ್ನು ಕೊಡುತ್ತಿದ್ದರು. ಈ ದೇಶದ ಭಾಷೆಗಳಲ್ಲಿಯೆ ಜನ ಸಾಮಾನ್ಯರಿಗೆ ಅರ್ಥವಾಗುವಂತೆ ಬೈಬಲ್ ತತ್ವಗಳನ್ನು ಬರೆದು ಪ್ರಚಾರಪಡಿಸಿದರು. ಬೈಬಲ್‌ನ ಕುರಿತು ಹಲವಾರು ಗ್ರಂಥಗಳನ್ನು ಸ್ಥಳೀಯ ಭಾಷೆಗಳಿಗೆ ಅನುವಾದಿಸಿದರು.

ಕ್ರಿ.ಶ. ೧೮೭೦ರಿಂದ ಕರ್ನಾಟಕದಲ್ಲಿ ಕ್ರೈಸ್ತ ಧರ್ಮಗುರುಗಳು ಇಂತಹ ಕಾರ್ಯಕ್ಕೆ ಇಳಿದರು. ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿ ವಿದ್ವತ್ತನ್ನು ಪಡೆದು ಪಾಂಡಿತ್ಯವನ್ನು ಗಳಿಸಿ ಬೈಬಲ್ ಭಾಷಾಂತರವನ್ನು ಮಾಡಿದರು. ಅದರ ಜೊತೆಗೆ ನೂರಾರು ಬಗೆಯ ಬೈಬಲ್ ಗೀತೆಗಳು, ಬೈಬಲ್ ಕಥೆಗಳು, ಸೂಕ್ತಿಗಳು ಎಂಬ ಬೈಬಲ್ ಸಾಹಿತ್ಯವನ್ನು ಕನ್ನಡ ಭಾಷೆಯಲ್ಲಿ ನಿರ್ಮಿಸಿದರು.

> ಬೈಬಲ್ಲನ್ನು ವೇದಗಳೆಂದು ಸಾರಿದರು. ಬೈಬಲ್ ತತ್ವಗಳನ್ನು **ಹಿತೋಪದೇಶವೆಂದು**, ಕ್ರಿಸ್ತನೂ ಕೃಷ್ಣನೂ ಓರ್ವನೇ ಎಂದು ಸಾರಿದರು. ಕ್ರಿಸ್ತನ ಜನನಕ್ಕೂ ಕೃಷ್ಣನ ಜನನಕ್ಕೂ ಸಾಮ್ಯತೆಯನ್ನು ನ್ಯಾಯವಾಗಿ ಪ್ರತಿಪಾದಿಸಿದರು[೭]

ಬ್ರಾಹ್ಮಣರು ನಿರ್ಮಿಸಿದ ಚಾತುರ್ವರ್ಣ್ಯ, ಜಾತಿಭೇದ ಜನಬೇಧಗಳನ್ನು ಆಗಿಂದ್ದಾಗ್ಗೆ ಖಂಡಿಸಿದರು. ಹಿಂದೂ ಧರ್ಮದಲ್ಲಿ ಅದೆಷ್ಟು ಮೂಢನಂಬಿಕೆಗಳೂ, ಅಮಾನುಷ ನೀತಿಗಳೂ ಇವೆಯೆಂಬುದನ್ನು ಹಿಂದೂಶಾಸ್ತ್ರಗಳ ಆಧಾರದಿಂದಲೇ ಜನರಿಗೆ ತಿಳಿಸಿ ಹೇಳುತ್ತಿದ್ದರು. ಕರ್ನಾಟಕದ ಪ್ರತಿ ಹಳ್ಳಿ, ಕೇರಿಗಳಲ್ಲಿ ಸಾಮಾನ್ಯ ಜನರು ವಿದೇಶಿಯ ವಿದ್ವಾಂಸರ ಮತ್ತು ಮತ ಪ್ರಚಾರಕರ ಹಿಂದೂಮತ ಮತ್ತು ಕ್ರೈಸ್ತಧರ್ಮದ ಮೇಲೆ ನಡೆಸುತ್ತಿದ್ದ ಭಾಷಣಗಳನ್ನು ಕೇಳಿ ಮುಗ್ಧರಾದರು. ಕ್ರೈಸ್ತ ಗುಡಿಗಳಲ್ಲಿ ಅವರು ಜನರನ್ನು ಸೇರಿಸಿ ನಯವಾದ ಮಾತುಗಳಿಂದ ಅವರಿಗೆ ಗಹನವಾದ ವಿಚಾರಗಳನ್ನು ತಿಳಿಸಿ ಅಂದಿನ ಅವಿದ್ಯಾವಂತ ಜನರು ಆವರೆಗೂ ತಿಳಿಯದೇ ಇದ್ದುದನ್ನು ತಿಳಿಸಿ ಅದೊಂದು ಬಗೆಯ ಜನಜಾಗೃತಿ ಮತ್ತು ವಿಚಾರ ಜಾಗೃತಿಯನ್ನು ಎಬ್ಬಿಸಲು ಕಾರಣರಾದರು. ಇದರಿಂದ ಭಾರತೀಯರು ಪ್ರಾಪಂಚಿಕ ಜ್ಞಾನವನ್ನು ತುಂಬಾ ಪಡೆದರು.

ಕ್ರೈಸ್ತ ಧರ್ಮಗುರುಗಳು ಮತ್ತು ಪಾಶ್ಚಾತ್ಯರು ಯಾವುದೇ ಕೆಲಸವನ್ನು ಕೈಗೊಂಡರೂ ಅದನ್ನು ವಿದೇಯಕವಾಗಿ ನಡೆಸಿ ಪೂರ್ತಿಗೊಳಿಸುವುದೇ ಅವರ ವೈಶಿಷ್ಟ್ಯವಾಗಿತ್ತು. ಮತ ಪ್ರಚಾರ, ಸಮಾಜ ಸೇವೆ, ರಾಜನೀತಿ ಇತ್ಯಾದಿ ವಿಷಯಗಳಲ್ಲಿ ಎಂದೂ ಧರ್ಮ ಮತ್ತು ನೀತಿಯನ್ನು ಮೀರಿ ಹೋದುದಿಲ್ಲ.

### ಇಂಗ್ಲಿಷ್ ಶಿಕ್ಷಣ ವ್ಯವಸ್ಥೆ ಮತ್ತು ಕ್ರೈಸ್ತ ಮಿಶನರಿಗಳು

೧೮೧೩ರ ಚಾರ್ಟರ್ ಕಾಯ್ದೆಯ ಪ್ರಕಾರ ಈಸ್ಟ್ ಇಂಡಿಯಾ ಕಂಪನಿಯು ಕ್ರಿಶ್ಚಿಯನ್ ಮಿಶನರಿಗಳಿಗೆ ತನ್ನ ಅಧೀನದಲ್ಲಿರುವ ಪ್ರದೇಶಗಳಿಗೆ ಪ್ರವೇಶಿಸಲು ಅನುಮತಿಯನ್ನು ನೀಡಿತು. ಅಂದಿನಿಂದಲೂ ಕ್ರೈಸ್ತ ಮಿಶನರಿಗಳು ತಮ್ಮ ಮತಕ್ಕೆ ಭಾರತೀಯರನ್ನು ಮತಾಂತರಿಸಲು ಪ್ರಾರಂಭಿಸಿದರು. ಹಲವಾರು ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿದರು. ಇವುಗಳ ಮುಖ್ಯ ಉದ್ದೇಶ ವಿದ್ಯಾರ್ಥಿಗಳ ಜ್ಞಾನ ಮತ್ತು ತಿಳಿವಳಿಕೆಯನ್ನು ಹೆಚ್ಚಿಸುವುದಷ್ಟೇ ಆಗಿರಲಿಲ್ಲ. ಈ ವಿದ್ಯಾರ್ಥಿಗಳನ್ನು ಕ್ರಿಶ್ಚಿಯನ್ ಮತಕ್ಕೆ ಮತಾಂತರಗೊಳಿಸುವ ಧ್ಯೇಯವನ್ನು ಹೊಂದಿದ್ದವು. ಮಾನವನ ಮುಕ್ತಿಗೆ ಇರುವ ಏಕೈಕ ಮಾರ್ಗವೆಂದರೆ ಕ್ರಿಶ್ಚಿಯನ್ ಧರ್ಮವನ್ನು ಅನುಸರಿಸುವುದು ಎಂಬುದೇ ಈ ಮಿಶನರಿಗಳ ನಂಬಿಕೆಯಾಗಿತ್ತು.

ಮಿಶನರಿ ಸಂಸ್ಥೆಗಳಲ್ಲಿ ತರಬೆತಿ ಪಡೆದ ಕೆಲವು ಯುವಕರು ಹಳೆಯ ಧಾರ್ಮಿಕ ನಂಬಿಕೆಗಳು ಮತ್ತು ಆಚರಣೆಗಳನ್ನು ಬಹಿರಂಗವಾಗಿ ದಿಕ್ಕರಿಸುತ್ತಿದ್ದರು. ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕಾಗಿ ಪಾಶ್ಚಾತ್ಯ ಮಾದರಿಯ ಶಿಕ್ಷಣವನೊಪ್ಪಿಕೊಂಡರು. ಮಿಶನರಿಗಳು ಸ್ಥಾಪಿಸಿದ ಈ ಶಾಲಾ ಕಾಲೇಜುಗಳಲ್ಲಿ ಕ್ರಿಶ್ಚಿಯನ್ ಧರ್ಮದ ಸಿದ್ಧಾಂತಗಳ ಬೋಧನೆಯನ್ನು ಕಡ್ಡಾಯ

ಗೊಳಿಸಲಾಯಿತು. ಈ ಶಿಕ್ಷಣ ಸಂಸ್ಥೆಗಳನ್ನು ಕ್ರೈಸ್ತ ಧರ್ಮದ ಪ್ರಚಾರಕ್ಕಾಗಿ ಉಪಯೋಗಿಸಿ ಕೊಳ್ಳುವುದೇ ಮಿಶನರಿಗಳ ಮುಖ್ಯ ಉದ್ದೇಶವಾಗಿತ್ತು.

**ವಸಾಹತುಶಾಹಿ ಕಾಲಘಟ್ಟದಲ್ಲಿ ಶೈಕ್ಷಣಿಕ ಸುಧಾರಣೆಗಳು**

ಯುರೋಪಿಯನ್ನರ ಆಗಮನದಿಂದ ಶಿಕ್ಷಣ ಕ್ರಮದಲ್ಲಿ ಬದಲಾವಣೆಯಾಯಿತು. ಇಂಗ್ಲಿಷ್ ಶಿಕ್ಷಣಕ್ಕೆ ಪ್ರಾಮುಖ್ಯತೆ ದೊರೆಯಿತು. ವಸಾಹತು ಪೂರ್ವದಲ್ಲಿ ಹಿಂದೂಗಳು ಹಾಗೂ ಮುಸ್ಲಿಂರು ಸಂಸ್ಕೃತ ಮತ್ತು ಪರ್ಶಿಯಾ ಭಾಷೆಗಳಲ್ಲಿ ತಮ್ಮದೇ ಆದ ರೀತಿಯ ಶಿಕ್ಷಣ ಸಂಸ್ಥೆಗಳನ್ನು ಹೊಂದಿದ್ದರು. ಈ ಶಿಕ್ಷಣ ಸಂಸ್ಥೆಗಳನ್ನು ಪಾಠಶಾಲೆಗಳೆಂದು ಕರೆಯುತ್ತಿದ್ದರು. ಅವುಗಳಲ್ಲಿ ಪಂಡಿತರು ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದಂತೆ ಶಿಕ್ಷಣವನ್ನು ನೀಡುತ್ತಿದ್ದರು. ಈ ಕಾಲದಲ್ಲಿ ವಿದ್ಯಾಭ್ಯಾಸವು ಸಾರ್ವತ್ರಿಕವಾಗಿರದೇ ಕೆಲವೇ ವ್ಯಕ್ತಿಗಳಿಗೆ ಸೀಮಿತವಾಗಿತ್ತು. ಕ್ರಿ.ಶ. ೧೬ನೇ ಶತಮಾನದಲ್ಲಿ ಬ್ರಿಟಿಷರ ಆಗಮನ ಮತ್ತು ಅವರ ಆಳ್ವಿಕೆಯ ಪ್ರಭಾವ ಹಾಗೂ ಅವರ ಸಂಪರ್ಕದಿಂದಾಗಿ ಪಾಶ್ಚಿಮಾತ್ಯ ಶಿಕ್ಷಣ ಪರಿಚಯವು ಭಾರತೀಯರಿಗಾಯಿತು. ಜೊತೆಗೆ ವೈಜ್ಞಾನಿಕ ಬೆಳವಣಿಗೆಯೂ ಆಯಿತು.

ಬ್ರಾಹ್ಮಣರು ವಿದ್ಯಾಭ್ಯಾಸವನ್ನು ಪಡೆಯುವ ಸಂಪೂರ್ಣ ಏಕಸ್ವಾಮ್ಯವನ್ನು ಹೊಂದಿದ್ದರು. ಮುಸ್ಲಿಮರು ಶಿಕ್ಷಣ ಸಂಸ್ಥೆಗಳಿಗಾಗಿ ಮುಕ್ತಾಬ್ ಮತ್ತು ಮದರಸಾಗಳನ್ನು ಸ್ಥಾಪಿಸುತ್ತಿದ್ದರು. ಅವು ಹೆಚ್ಚಾಗಿ ಮಸೀದಿಗಳಲ್ಲಿ ನಡೆಯುತ್ತಿದ್ದವು. ಬ್ರಿಟಿಷ್ ಪೂರ್ವಕಾಲದ ವಿದ್ಯಾಭ್ಯಾಸವು ಹೀಗೆ ನಡೆಯುತ್ತಿತ್ತು. ೧೮ನೇ ಶತಮಾನದ ಭಾರತದಲ್ಲಿ ರಾಜಕೀಯ ಶಕ್ತಿಯಾಗಿ ಬೆಳೆದ ಬ್ರಿಟಿಷರಿಗೆ ಕ್ರಮಬದ್ಧವಾದ ತರ್ಕಸಮ್ಮತವಾದ ಶಿಕ್ಷಣ ಬೆಳವಣಿಗೆಯ ಹೊಣೆ ಇವರಮೇಲೆ ಬಿತ್ತು. ಮುಂದೆ ಹಂತಹಂತವಾಗಿ ಬ್ರಿಟಿಷರ ಕಾಲಾವಧಿಯಲ್ಲಿ ಶಿಕ್ಷಣದ ಬೆಳವಣಿಗೆಯಾಯಿತು.

ಇಂಗ್ಲಿಷ್ ವಿದ್ಯಾಭ್ಯಾಸವನ್ನು ಭಾರತೀಯರಿಗೆ ನೀಡಬೇಕೆಂದು ಬ್ರಿಟಿಷ್ ರಾಜನೀತಿ ತಜ್ಞರು ಮತ್ತು ರಾಜಾರಾಮ್ ಮೋಹನರಾಯ್, ಕೇಶವದಾಸರಂತಹ ಪ್ರಗತಿಪರ ಭಾರತೀಯರು ಪ್ರೋತ್ಸಾಹಿಸಿದರು. ಈ ಹಿನ್ನೆಲೆಯಲ್ಲಿ ಭಾರತದಲ್ಲಿ ಪಾಶ್ಚಿಮಾತ್ಯ ಶಿಕ್ಷಣ ಪ್ರಚಾರವಾಗಲು ವಿದೇಶಿ ಕ್ರೈಸ್ತ ಮಿಶನರಿಗಳು ಬ್ರಿಟಿಷ್ ಸರಕಾರ ಮತ್ತು ಭಾರತೀಯ ಚಿಂತಕರು ಕಾರಣರಾದರು. ಆಂಗ್ಲ ಶಿಕ್ಷಣದ ಬೆಳವಣಿಗೆಗೆ ಪ್ರಮುಖ ಕಾರಣರಾದವರು ಪ್ರಪ್ರಥಮವಾಗಿ ವಾರನ್ ಹೆಸ್ಟಿಂಗ್ಸ್ ಮತ್ತು ಕ್ರೈಸ್ತಮಿಶನರಿಗಳು.

ಕ್ರಿ.ಶ. ೧೭೮೧ರಲ್ಲಿ ವಾರನ್ ಹೇಸ್ಟಿಂಗ್ಸ್‌ನು ಪರ್ಶಿಯನ್ ಮತ್ತು ಅರೇಬಿಕ್ ಭಾಷೆಗಳ ಅಧ್ಯಯನಕ್ಕಾಗಿ ಕಲ್ಕತ್ತಾದಲ್ಲಿ ಮದರಸಾವೊಂದನ್ನು ಸ್ಥಾಪಿಸಿದನು. ೧೭೮೪ರಲ್ಲಿ ವಿಲಿಯಂ ಜೋನ್ಸ್‌ನು ಸಂಶೋಧನೆಗಳಿಗೆ ಪ್ರೋತ್ಸಾಹ ನೀಡಲು ಕಲ್ಕತ್ತಾದಲ್ಲಿ ಏಷ್ಯಾಟಿಕ್ ಸೊಸೈಟಿ

ಆಫ್ ಬೆಂಗಾಲ್‌ನ್ನು ಸ್ಥಾಪಿಸಿದನು. ೧೭೯೧ರಲ್ಲಿ ಜೋನಾಥನ್ ಹಿಂದೂಧರ್ಮ, ಸಾಹಿತ್ಯ, ಕಾನೂನುಗಳ ಅಧ್ಯಯನಕ್ಕಾಗಿ ಸಂಸ್ಕೃತ ಕಾಲೇಜ್‌ನ್ನು ಬನಾರಸ್‌ನಲ್ಲಿ ಸ್ಥಾಪಿಸಿದನು. ಕ್ರಿ.ಶ. ೧೮೦೦ರಲ್ಲಿ ಲಾರ್ಡ್ ವೆಲ್ಲೆಸ್ಲಿಯು ಭಾರತೀಯ ಭಾಷೆ ಮತ್ತು ಸಂಸ್ಕೃತಿಗೆ ಅನುಗುಣವಾಗಿ ಶಿಕ್ಷಣ ನೀಡುವುದಕ್ಕಾಗಿ ತರಬೇತಿ ಕಾಲೇಜ್‌ನ್ನು ಪೋರ್ಟ್ ವಿಲಿಯಂನಲ್ಲಿ ಸ್ಥಾಪಿಸಿದನು. ಕ್ರಿ.ಶ. ೧೮೧೧ರಲ್ಲಿ ಲಾರ್ಡ್‌ಮಿಂಟೋ ಎನ್ನುವವನು ಭಾರತದಲ್ಲಿನ ಸಾಹಿತ್ಯ ಮತ್ತು ವಿಜ್ಞಾನ ಶಿಕ್ಷಣ ವ್ಯವಸ್ಥೆಯ ದುಸ್ಥಿತಿಯ ಬಗೆಗೆ ತೀವ್ರವಾದ ಅಸಮಾಧಾನವನ್ನು ವ್ಯಕ್ತಪಡಿಸಿ ಇರುವ ಶಾಲಾ ಕಾಲೇಜುಗಳ ಪುನರ್ ವ್ಯವಸ್ಥೆಗೆ ಮತ್ತು ಹೊಸ ಶಾಲಾ ಕಾಲೇಜುಗಳ ಸ್ಥಾಪನೆಗೆ ಆಗ್ರಹಪಡಿಸಿದನು.

**ಚಾರ್ಟರ್ ಕಾಯ್ದೆ - ೧೮೧೯**

೧೮೧೩ರ ಕಾಯ್ದೆಯ ಪ್ರಕಾರ ಭಾರತೀಯರ ಸಾಹಿತ್ಯ ವಿಜ್ಞಾನದ ಬೆಳವಣಿಗೆ ಹಾಗೂ ವಿದ್ಯಾವಂತರಿಗೆ ಪ್ರೋತ್ಸಾಹ ನೀಡುವ ಸಲುವಾಗಿ ಪ್ರತಿವರ್ಷ ಒಂದು ಲಕ್ಷ ರೂಪಾಯಿಗಳನ್ನು ತೆಗೆದಿಡುವ ವ್ಯವಸ್ಥೆ ಜಾರಿಗೆಬಂದಿತು. ಇದರಿಂದ ಆಂಗ್ಲ ವಿದ್ಯಾಭ್ಯಾಸಕ್ಕೆ ಹೆಚ್ಚು ಗಮನವನ್ನು ನೀಡಲಾಯಿತು. ಅಂದು ರಾಜಾರಾಮ್ ಮೋಹನ್‌ರಾಯ್ ಅವರಂತಹ ವ್ಯಕ್ತಿಗಳು ಇಂಗ್ಲಿಷ್ ಮಾಧ್ಯಮಕ್ಕೆ ಹೆಚ್ಚು ಒತ್ತುಕೊಡಬೇಕೆಂದು ತಿಳಿಸಿದರು.

ಕ್ರಿಶ್ಚಿಯನ್ ಮಿಶನರಿಗಳು ಭಾರತದ ಶಿಕ್ಷಣದ ಬೆಳವಣಿಗೆಗೆ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸಿದವು. ಶಿಕ್ಷಕರ ತರಬೇತಿಗಾಗಿ ತರಬೇತಿ ಕಾಲೇಜನ್ನು ಮದ್ರಾಸಿನಲ್ಲಿ ಸ್ಥಾಪಿಸಿದರು. ಡೆವಿಡ್ ಥಾಮಸ್ ಮೊದಲಾದವರು ಭಾರತದಾದ್ಯಂತ ಇಂಗ್ಲಿಷ್ ಶಾಲೆಗಳನ್ನು ತೆರೆದರು.

ಬಾಂಬೆಯಲ್ಲಿ ವಿಲ್ಸನ್ ಕಾಲೇಜು ಮತ್ತು ಭಾರತದ ಇತರೆ ಸ್ಥಳಗಳಲ್ಲಿ ಕಾಲೇಜು ಗಳನ್ನು ಮತ್ತು ಸಂಸ್ಥೆಗಳನ್ನು ಪ್ರಾರಂಭಿಸಿದರು. ತರಗತಿಗಳಲ್ಲಿ ಬೈಬಲ್ ಗ್ರಂಥದ ಅಧ್ಯಯನವನ್ನು ಕಡ್ಡಾಯಗೊಳಿಸದರು. ಹೀಗೆ ಕ್ರಿಶ್ಚಿಯನ್ ಮಿಶನರಿಗಳು ಶಿಕ್ಷಣದ ಮೂಲಕ ಕ್ರೈಸ್ತಮತವನ್ನು ವಿಸ್ತರಿಸಿದರು. ಬ್ರಿಟಿಷ್ ಸರಕಾರವು ಶಿಕ್ಷಣಕ್ಕಾಗಿ ಒಂದು ಲಕ್ಷ ರೂಪಾಯಿಯನ್ನು ಶಿಕ್ಷಣ ಅಭಿವೃದ್ಧಿಗೆ ಮೀಸಲಿರಿಸಿತು. ಭಾರತದಲ್ಲಿ ಸಾಹಿತ್ಯ, ವಿಜ್ಞಾನದ ಜ್ಞಾನವನ್ನು ಬೆಳೆಸುವುದು. ಇಲ್ಲಿನ ಜನರೊಂದಿಗೆ ವ್ಯವಹರಿಸಲು ದೇಶಿಯ ಭಾಷೆಯ ಅಗತ್ಯ ಬ್ರಿಟಿಷರಿಗೆ ಇತ್ತು.

**೧೮೫೪ರ ಚಾರ್ಲ್ಸ್‌ವುಡ್ ವರದಿ**

ಆಧುನಿಕ ಭಾರತದ ಶಿಕ್ಷಣ ಬೆಳವಣಿಗೆಯಲ್ಲಿ ಚಾರ್ಲ್ಸ್‌ವುಡ್ ವರದಿಯು ಅತ್ಯಂತ ಪ್ರಮುಖವಾದುದಾಗಿದೆ. ಈ ವರದಿಯು ೧೮೫೪ರಲ್ಲಿ ಲಾರ್ಡ್ ಡಾಲ್‌ಹೌಸಿಯ ಕಾಲಾವಧಿಯಲ್ಲಿ ಜಾರಿಗೆ ಬಂದಿತು. ಚಾರ್ಲ್ಸ್‌ವುಡ್‌ನು ಶಿಕ್ಷಣದ ಬಗ್ಗೆ ೧೮೫೪ರಲ್ಲಿ ಸಮಗ್ರ ಅಧ್ಯಯನವನ್ನು ಮಾಡಿ ವರದಿಯನ್ನು ಸಿದ್ಧಪಡಿಸಿದನು. ಇದು ಭಾರತೀಯರಿಗೆ ಪಾಶ್ಚಿಮಾತ್ಯ ಶಿಕ್ಷಣ, ವಿಜ್ಞಾನ,

ತತ್ವಶಾಸ್ತ್ರ ಸಾಹಿತ್ಯ ಜ್ಞಾನ ಮತ್ತು ಉನ್ನತ ವಿದ್ಯಾಭ್ಯಾಸವನ್ನು ಇಂಗ್ಲಿಷ್ ಭಾಷೆಯ ಮೂಲಕ ನೀಡುವುದು, ಗ್ರಾಮಾಂತರ ಪ್ರದೇಶಗಳಲ್ಲಿ ಶಾಲೆಗಳನ್ನು ಸ್ಥಾಪನೆ ಮಾಡುವುದು, ಅವುಗಳನ್ನು ಪ್ರೋತ್ಸಾಹಿಸಿ ಅನುದಾನ ಮಾಡುವುದು, ಲಂಡನ್ ವಿಶ್ವವಿದ್ಯಾಲಯ ಮಾದರಿಯಲ್ಲಿ ಭಾರತದಲ್ಲಿ ಕಲ್ಕತ್ತಾ, ಮದ್ರಸ್, ಬಾಂಬೆಗಳಲ್ಲಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವುದು, ತಾಂತ್ರಿಕ ಶಿಕ್ಷಣವನ್ನು ನೀಡುವ ಸಲುವಾಗಿ ಶಾಲಾ ಕಾಲೇಜುಗಳನ್ನು ದೇಶದಾದ್ಯಂತ ತೆರೆಯುವುದು, ಸ್ತ್ರೀ ವಿದ್ಯಾಭ್ಯಾಸ, ದೇಶಭಾಷೆಯ ಸುಧಾರಣೆ, ವಿದ್ಯಾರ್ಥಿಯ ವೇತನ ಮುಂತಾದವುಗಳನ್ನು ಈ ವರದಿಯು ಒಳಗೊಂಡಿತ್ತು. ಲಾರ್ಡ್ ಡಾಲ್‌ಹೌಸಿಯು, ಚಾರ್ಲ್ಸ್‌ವುಡ್‌ನ ವರದಿಯನ್ನು ಅನುಷ್ಠಾನ ಗೊಳಿಸಿದನು.

**ಹಂಟರ್ ಆಯೋಗ – ೧೮೮೨**

ಆಧುನಿಕ ಭಾರತದ ಶಿಕ್ಷಣ ಬೆಳವಣಿಗೆಯಲ್ಲಿ ಹಂಟರ್ ಆಯೋಗವು ಒಂದು ಪ್ರಮುಖವಾದ ಮೈಲುಗಲ್ಲು. ಚಾರ್ಲ್ಸ್‌ವುಡ್‌ನ ವರದಿಯ ಕಾಲದಿಂದ ಭಾರತದಲ್ಲಿ ಶಿಕ್ಷಣದಲ್ಲಿ ಉಂಟಾಗಿದ್ದ ಪ್ರಗತಿಯನ್ನು ಪರಿಶೀಲಿಸುವುದು ಇದರ ಕಾರ್ಯವಾಗಿತ್ತು. ಕ್ರಿ.ಶ. ೧೮೮೩ರಲ್ಲಿ ಈ ಆಯೋಗ ಸರಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿತು. ಇದರ ಪ್ರಮುಖ ಅಂಶಗಳು ಪ್ರಾಥಮಿಕ ಶಿಕ್ಷಣ ಮೇಲ್ವಿಚಾರಣೆಯನ್ನು ಸರಕಾರವೇ ವಹಿಸಿಕೊಳ್ಳಬೇಕು. ಖಾಸಗಿ ಸಂಸ್ಥೆಗಳ ಶಾಲಾ ಕಾಲೇಜುಗಳಿಗೆ ವಿಶೇಷ ಅನುದಾನವನ್ನು ಕೊಟ್ಟು ಸರಕಾರಿ ಶಾಲೆಗಳಂತೆ ಮಾನ್ಯತೆ ಕೊಡಬೇಕು. ಕಾಲೇಜುಗಳಲ್ಲಿ ಶುಲ್ಕ ಮತ್ತು ವಿದ್ಯಾರ್ಥಿ ವೇತನಗಳ ವ್ಯವಸ್ಥೆಯಲ್ಲಿ ಏಕರೂಪತೆಯನ್ನು ತರುವುದು. ಈ ಆಯೋಗದ ಬಹುತೇಕ ಸಲಹೆಗಳನ್ನು ಸರಕಾರ ಒಪ್ಪಿಕೊಂಡಿತು.

೧೮೮೨ರಲ್ಲಿ ಹಂಟರ್ ಆಯೋಗವು ಭಾರತದಲ್ಲಿ ಪ್ರಾಥಮಿಕ ಶಿಕ್ಷಣವನ್ನು ವಿಸ್ತರಿಸಲು ಅನುಸರಿಸಬೇಕಾದ ಮಾರ್ಗೋಪಾಯಗಳನ್ನು ಸೂಚಿಸುವ ಉದ್ದೇಶಕ್ಕಾಗಿಯೇ ನೇಮಿಸಲ್ಪಟ್ಟಿತು. ಈ ಆಯೋಗವು ೧೮೮೩ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು. ಪ್ರಾಥಮಿಕ ಶಿಕ್ಷಣದ ಬಗೆಗಿನ ಅದರ ಮೂವತ್ತಾರು ಶಿಫಾರಸ್ಸುಗಳು ಭಾರತೀಯ ಇತಿಹಾಸದಲ್ಲಿ ಹೊಸ ಅಧ್ಯಾಯವೊಂದನ್ನು ತೆರೆಯಿತು. ಮುಖ್ಯವಾಗಿ ಈ ಆಯೋಗವು ತನ್ನ ವರದಿಯಲ್ಲಿ ಜನಸಾಮಾನ್ಯರಿಗೆ ಪ್ರಾಥಮಿಕ ಶಿಕ್ಷಣವನ್ನೊದಗಿಸುವಿಕೆ, ಅದರ ವಿಸ್ತರಣೆ, ಸುಧಾರಣೆಗಳು ಈ ಶಿಕ್ಷಣದ ಪದ್ಧತಿಯ ಅಂಗವಾಗಿರ ತಕ್ಕದೆಂದು ಮತ್ತು ಸರಕಾರದ ಪ್ರಯತ್ನಗಳನ್ನು ಮೊದಲಿಗಿಂತಲೂ ಹೆಚ್ಚು ಮಾಡಬೇಕೆಂದು ತಿಳಿಸಿತು.

ಪ್ರಾಥಮಿಕ ಶಿಕ್ಷಣವು ಜನಸಾಮಾನ್ಯರಿಗೆ ಸಿಗಬೇಕು. ಇದು ದೇಶೀಯ ಭಾಷೆಯಲ್ಲಿದ್ದು ಜೀವನದಲ್ಲಿ ಅವರವರ ಸನ್ನಿವೇಶಕ್ಕೆ ಚೆನ್ನಾಗಿ ಹೊಂದುವಂತಹ ವಿಷಯಗಳನ್ನು ಕಲಿಸಬೇಕು.

ಅಲ್ಲದೆ ಇದು ವಿಶ್ವವಿದ್ಯಾಲಯದ ಶಿಕ್ಷಣಕ್ಕೆ ಎಡೆಮಾಡಿ ಕೊಡಬಹುದಾದಂತಹ ವಿದ್ಯಾಭ್ಯಾಸದ ಅಂಗವಾಗಿರಲೇಬೇಕೆಂದು ಭಾವಿಸುವ ಅಗತ್ಯವಿರಲಿಲ್ಲ. ಪ್ರತಿ ಪ್ರಾಂತ್ಯದ ಸನ್ನಿವೇಶಗಳಿಗೆ ಸರಿಹೊಂದುವಂತಹ ಸರ್ವಸಾಧ್ಯ ಅವಕಾಶವನ್ನು ಒದಗಿಸಲು ಸೂಕ್ತ ಶಾಸನದ ಮೂಲಕ ಪ್ರಯತ್ನಿಸಿವುದು. ಎಲ್ಲೆಲ್ಲಿ ದೇಶಿಯ ಶಾಲೆಗಳು ಇವೆಯೋ ಅವುಗಳಿಗೆ ನೆರವು ನೀಡಿ ಅವುಗಳನ್ನು ಸುಧಾರಿಸುವ ಮೂಲಕ ಪ್ರಾಥಮಿಕ ಶಿಕ್ಷಣದ ವಿಸ್ತರಣೆಗೆ ಅವು ಉತ್ತಮ ಸಾಧನೆಗಳೆಂಬ ಸೂತ್ರವನ್ನು ಅಳವಡಿಸಿಕೊಳ್ಳುವುದು. ಸಾರ್ವಜನಿಕ ಶಿಕ್ಷಣದ ಇಡೀ ವ್ಯವಸ್ಥೆಯಲ್ಲಿ ಸ್ಥಳೀಯ ಸರಕಾರಗಳು ಹಣಕಾಸಿನಲ್ಲಿ ಸಿಂಹಪಾಲನ್ನು ಪಡೆಯುವ ಹಾಗೂ ಪ್ರಾಂತೀಯ ಸರಕಾರಗಳ ಹಣಕಾಸಿನಲ್ಲಿ ದೊಡ್ಡ ದೊಂದು ಪಾಲು ಪಡೆಯುವ ಹಕ್ಕನ್ನು ಹೊಂದಿರುವ ಶಿಕ್ಷಣ ವ್ಯವಸ್ಥೆಯೇ ಪ್ರಾಥಮಿಕ ಶಿಕ್ಷಣ ಎಂದು ಘೋಷಿಸತಲಾಯಿತು. ಮುನಿಸಿಪಾಲ್ ಹಾಗೂ ಸ್ಥಳೀಯ ಸಂಸ್ಥೆಗಳ ಮಂಡಳಿಗಳು ಪ್ರತ್ಯೇಕವಾದ ಶಾಲಾ ನಿಧಿಯನ್ನು ಹೊಂದಿರತಕ್ಕದ್ದು. ಶಾಲೆಗಳ ತಪಾಸಾಣೆ ಮತ್ತು ಮೇಲ್ವಿಚಾರಣೆಗೆ ಸಾಧ್ಯವಿದ್ದಲ್ಲೆಲ್ಲಾ ರಾತ್ರಿ ಶಾಲೆಗಳನ್ನು ಪ್ರಾರಂಭಿಸುವುದು. ಪ್ರಾಥಮಿಕ ಶಿಕ್ಷಣವನ್ನು ಜನಸಾಮಾನ್ಯರಿಗೂ ಕಲಿಯಲು ಅನುಕೂಲವಾಗುವಂತಹ ನಿಯಮಗಳನ್ನು ರೂಪಿಸಿತು. ಆಯಾ ದೇಶಭಾಷೆಗಳಲ್ಲಿ ಪಠ್ಯಗಳನ್ನು ರಚಿಸಲು ಮುಂದಾಯಿತು. ಮಕ್ಕಳ ಗ್ರಹಣಶಕ್ತಿಗೆ ಎಟುಕುವಂತಹ, ಅವರ ಮನೋವಿಕಾಸವನ್ನು ಬೆಳೆಸುವಂತಹ ಪಠ್ಯಗಳನ್ನು ರಚಿಸುವಲ್ಲಿ ಹೆಚ್ಚಿನ ಗಮನಕೊಡಲಿಲ್ಲ.

### ಆಂಗ್ಲ ವಿದ್ಯಾಭ್ಯಾಸದಿಂದ ಭಾರತೀಯ ಸಮಾಜದ ಮೇಲೆ ಉಂಟಾದ ಪ್ರಭಾವ

೧೯ನೇ ಶತಮಾನದಲ್ಲಿ ಬ್ರಿಟಿಷರ ಆಡಳಿತದಿಂದ ಭಾರತದ ಸಮಾಜದಲ್ಲಿ ಹಲವಾರು ಬದಲಾವಣೆಗಳಾದವು. ಪಾಶ್ಚಿಮಾತ್ಯರು ಭಾರತಕ್ಕೆ ಬರುವ ಪೂರ್ವದಲ್ಲಿ ಹಲವಾರು ಮೂಢ ನಂಬಿಕೆಗಳು, ಅನಿಷ್ಠ ಪದ್ಧತಿಗಳು ರೂಢಿಯಲ್ಲಿದ್ದವು. ಸತಿಪದ್ಧತಿ, ಬಾಲ್ಯವಿವಾಹ, ಬಹುಪತ್ನಿತ್ವ, ಶಿಶುಹತ್ಯೆ, ಅಸ್ಪೃಶ್ಯತೆ, ಪರದಾ ಪದ್ಧತಿ, ಜಾತಿ ಪದ್ಧತಿ, ಮುಂತಾದ ದೋಷಗಳು, ಮೌಢ್ಯಗಳು, ಅರ್ಥಹೀನ ಸಂಪ್ರದಾಯಗಳು ಭಾರತೀಯ ಸಮಾಜವನ್ನು ಕಿತ್ತು ತಿನ್ನುತ್ತಿದ್ದವು. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಈ ದೋಷಗಳು ಸಮಾಜದಲ್ಲಿ ಬಹಳಷ್ಟು ಹಾನಿಯನ್ನುಂಟು ಮಾಡಿದ್ದವು. ಪಾಶ್ಚಿಮಾತ್ಯರ ಆಗಮನದಿಂದ ಮತ್ತು ಶಿಕ್ಷಣದಿಂದ ಭಾರತದಲ್ಲಿ ಹಲವಾರು ಸುಧಾರಣೆಗಳಾದವು.

ಬ್ರಿಟಿಷರು ಭಾರತದಲ್ಲಿ ಸಾರ್ವಭೌಮತ್ವವನ್ನು ಸ್ಥಾಪಿಸಿ ಭಾರತದ ಸಮಾಜದಲ್ಲಿ ಒಂದು ಹೊಸ ಯುಗವನ್ನು ಪ್ರಾರಂಭಮಾಡಿ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹೊಸ ಯುಗವನ್ನು ಪ್ರಾರಂಭ ಮಾಡಿದರು. ಲಾರ್ಡ್ ವಿಲಿಯಂ ಬೆಂಟಿಕನು ಗೌರ್‍ನರ್ ಆಗಿ ಭಾರತಕ್ಕೆ ಬಂದ ಮೇಲೆ ಹಲವಾರು ಸಾಮಾಜಿಕ ಸುಧಾರಣೆಗಳನ್ನು ಕೈಗೊಂಡನು. ಸತಿ ಪದ್ಧತಿಯನ್ನು

ನಿಷೇಧಿಸಬೇಕೆಂದು ರಾಜಾರಾಮ ಮೋಹನರಾಯರು ಲಾರ್ಡ್ ವಿಲಿಯಂ ಬೆಂಟಿಕ್‌ನಿಗೆ ಪತ್ರವನ್ನು ಬರೆದಾಗ ಕ್ರಿ.ಶ. ೧೮೨೯ ಡಿಸೆಂಬರ್ ೪ರಂದು ಬೆಂಟಿಕನು ಸತಿಸಹಗಮನ ಕಾನೂನು ಬಾಹಿರವೆಂದು ಘೋಷಿಸಿದನು. ಈ ಶಾಸನ ಉಲ್ಲಂಘಿಸಿದವರಿಗೆ ಕಠಿಣ ಶಿಕ್ಷೆಗೆ ಗುರಿಯಾಗುವರೆಂಬುದನ್ನು ಸ್ಪಷ್ಟಪಡಿಸಲಾಯಿತು. ಅಲ್ಲದೇ ಸ್ತ್ರೀ ಶಿಶುಹತ್ಯೆಯನ್ನು ನಿಷೇಧಿಸಿದನು.

ರಾಜರಾಮ್ ಮೋಹನ್‌ರಾಯ್, ದಯಾನಂದ ಸರಸ್ವತಿ ಮತ್ತು ಈಶ್ವರ ಚಂದ್ರ ವಿದ್ಯಾಸಾಗರ ಮೊದಲಾದವರು ಬಹುಪತ್ನಿತ್ವದ ವಿರುದ್ಧ ಹೋರಾಟವನ್ನು ಆರಂಭಿಸಿದರು. ೧೮೭೨ರಲ್ಲಿ ಬ್ರಿಟಿಷರು ಬಾಲ್ಯವಿವಾಹಕ್ಕೆ ಸಂಬಂಧಿಸಿದಂತೆ ಕಾನೂನನ್ನು ಜಾರಿಗೆ ತಂದು ಬಾಲ್ಯವಿವಾಹ ಕಾನೂನು ಬಾಹಿರವೆಂದು ಘೋಷಣೆಯನ್ನು ಮಾಡಿದರು. ಕ್ರಿ.ಶ. ೧೮೫೬ರಲ್ಲಿ ಲಾರ್ಡ್ ಡಾಲ್‌ಹೌಸಿಯು ವಿಧವಾ ವಿವಾಹ ಶಾಸನವನ್ನು ಜಾರಿಗೆ ತಂದು ಹಿಂದೂ ವಿಧವೆಯರ ಪುನರ್ ವಿವಾಹವನ್ನು ಕಾನೂನು ಬದ್ಧಗೊಳಿಸಿದರು.

ಸ್ವಾಮಿ ದಯಾನಂದ ಸರಸ್ವತಿ, ಜ್ಯೋತಿ ಬಾ ಪುಲೆ ಮುಂತಾದವರು ಸ್ತ್ರೀ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಿದರು. ಬ್ರಿಟಿಷರು ಸಹ ಸ್ತ್ರೀ ಶಿಕ್ಷಣಕ್ಕೆ ಆದ್ಯತೆಯನ್ನು ನೀಡಿದರು. ಅಂದಿನ ಸಮಾಜದಲ್ಲಿ ಮೇಲು-ಕೀಳು ಎನ್ನುವ ಭಾವನೆ ಬಲವಾಗಿ ಬೇರೂರಿತ್ತು. ಭಾರತವು ಸಮಾಜಿಕವಾಗಿ ಎದುರಿಸುವ ಅಸ್ಪೃಶ್ಯತೆಯು ಒಂದು ಕ್ರೂರವಾದ ಸಮಸ್ಯೆಯಾಗಿತ್ತು. ಅಂಬೇಡ್ಕರ್ ಅವರು ಅಸ್ಪೃಶ್ಯತೆಯ ವಿರುದ್ಧ ಚಳವಳಿಯನ್ನು ಆರಂಭಿಸಿದರು. ಪಾಶ್ಚಿಮಾತ್ಯ ಶಿಕ್ಷಣ ಮತ್ತು ಆಡಳಿತದ ಪ್ರಭಾವದಿಂದಾಗಿ ಅಸ್ಪೃಶ್ಯರನ್ನು ಮೇಲೆತ್ತಲು ಸಹಾಯವಾಯಿತು. ೧೯ನೇ ಶತಮಾನದಲ್ಲಿ ಹಲವಾರು ಧಾರ್ಮಿಕ, ಸಾಮಾಜಿಕ ಸಂಘ ಸಂಸ್ಥೆಗಳು ಹಾಗೂ ಆರ್ಯ ಸಮಾಜ, ರಾಮಕೃಷ್ಣ ಮಿಷನ್ ಮೊದಲಾದವುಗಳು ಅಸ್ಪೃಶ್ಯರನ್ನು ಮೇಲೆತ್ತಲು ಹಲವಾರು ಕಾರ್ಯಗಳನ್ನು ಕೈಗೊಂಡವು. ಅಸ್ಪೃಶ್ಯರಿಗೆ ದೇವಾಲಯ ಪ್ರವೇಶಕ್ಕೆ ಅವಕಾಶ ಮಾಡಿ ಕೊಡಲಾಯಿತು. ಜಾತಿ ಪದ್ಧತಿಯಲ್ಲಿದ್ದ ಸಂಕುಚಿತತೆಯನ್ನು ಹೋಗಲಾಡಿಸಿ ಜನ ಸಾಮಾನ್ಯರಲ್ಲಿ ಸಾಮರಸ್ಯ ಮೂಡಿಸಲು ಪ್ರಯತ್ನಿಸಿದರು.

ವ್ಯಾಪಾರಿಗಳಾಗಿ, ಪ್ರವಾಸಿಗರಾಗಿ ಕ್ರೈಸ್ತಮತ ಪ್ರಚಾರಕರಾಗಿ ಬಂದ ಪಾಶ್ಚಾತ್ಯರು ಕ್ರಿ.ಶ. ೧೬೪೭ರಿಂದ ೧೯೪೭ರವರೆಗೆ ಎಂದರೆ ಮೂನ್ನುರು ವರ್ಷಗಳ ಕಾಲ ಭಾರತದಲ್ಲಿ ವ್ಯಾಪಾರ ಮತ್ತು ಹೋರಾಟವನ್ನು ನಡೆಸುವುದರ ಜೊತೆಗೆ ರಾಜ್ಯಭಾರವನ್ನು ಮಾಡಿದರು. ಆರಂಭದಲ್ಲಿ ವ್ಯಾಪಾರಿಗಳಾಗಿ ಬಂದ ಅವರಿಗೆ ಈ ದೇಶವನ್ನು ಗೆದ್ದು ಸಾಮ್ರಾಜ್ಯವನ್ನು ಕಟ್ಟುವ ಆಲೋಚನೆಯೇ ಇರಲಿಲ್ಲ. ಹಾಗಿದ್ದರೂ ಅಂದಿನ ದೇಶದ ವಿಚಿತ್ರ ರಾಜಕೀಯ ಕಾರಣದಿಂದ ಮತ್ತು ಪೋರ್ಚುಗೀಸರು, ಡಚ್ಚರು ಮತ್ತು ಫ್ರೆಂಚರು ಈ ದೇಶದಲ್ಲಿ ಪೈಪೋಟಿ ನಡೆಸುತ್ತಿದ್ದ

ಕಾರಣದಿಂದ ಅವರ ಪ್ರಭಾವವನ್ನು ತಡೆಗಟ್ಟುವ ಸಲುವಾಗಿ ಬ್ರಿಟಿಷರು ರಾಜಕೀಯಕ್ಕೆ ಇಳಿದರು. ಪ್ರಾರಂಭದ ೧೫೦ ವರ್ಷಗಳ ಅವಧಿಯಲ್ಲಿ ನಿಧಾನವಾಗಿ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸುತ್ತಾ ಕೊನೆಗೆ ಭಾರತದ ಪ್ರಮುಖ ನಗರಗಳಲ್ಲಿ ತಮ್ಮ ವಸಾಹತು ಕೇಂದ್ರಗಳನ್ನು ವಿಸ್ತರಿಸಿದರು. ಅನಂತರ ೧೫೦ ವರ್ಷಗಳ ಕಾಲ ಈ ದೇಶವನ್ನು ಆಳಿದರು. ಒಟ್ಟಾರೆ ಅವರು ೩೦೦ ವರ್ಷಗಳ ಕಾಲ ಭಾರತದ ನೆಲದಲ್ಲಿ ಸುತ್ತಾಡಿ ನಡೆಸಿದ ಕಾರ್ಯವಾದರೂ ಅವರಿಗಿಂತಲೂ ಹಿಂದೆ ಹಲವಾರು ಶತಮಾನಗಳ ಕಾಲ ಆಳಿದ ಯಾವ ರಾಜ ಪ್ರಭುತ್ವಗಳೂ ಸಾಧಿಸದಷ್ಟು ಸಾಧಿಸಿವೆ. ವ್ಯಾಪಾರ, ವ್ಯವಹಾರ, ಶಿಕ್ಷಣ, ಸರಕಾರ, ಆಡಳಿತ ಇತ್ಯಾದಿ ಕ್ಷೇತ್ರಗಳಲ್ಲಿ ಅವರು ಅಪಾರ ಸಾಧನೆಯನ್ನು ಮಾಡಿದರು. ನಮ್ಮ ದೇಶದ ನಾಲ್ಕಾರು ಭಾಷೆಗಳನ್ನು ಕಲಿತಿದ್ದಲ್ಲದೆ ಅವರಲ್ಲಿ ವಿದ್ವಾಂಸರಾದ ಹಲವಾರು ಈ ದೇಶದ ಪ್ರಾಚೀನ ಭಾಷೆಗಳಲ್ಲೆಲ್ಲಾ ವಿಶೇಷ ಪರಿಣಿತಿ ಯನ್ನು ಹೊಂದಿ ಕೈಗೊಂಡ ಭಾಷಾ ಸೇವೆ, ಮತಪ್ರಚಾರ ಸೇವೆ, ಭಾರತೀಯರ ಸಂಸ್ಕತಿಯ ಪ್ರಚಾರ ಇತ್ಯಾದಿಗಳನ್ನು ಏಕ ಪ್ರಕಾರವಾಗಿ ನಡೆಸಿದರು. ನಮ್ಮ ಸಂಸ್ಕೃತಿಗಳನ್ನು ತಿಳಿಯಬೇಕೆನ್ನುವ ಅವರ ಹಂಬಲ ಇಂದು ಅವರಿಗಿಂತಲೂ ಹೆಚ್ಚಾಗಿ ನಮಗೆ ಪ್ರಯೋಜನೆಯಾಗಿದೆ. ಆದರೆ ಮತ ಪ್ರಸಾರ ಮತ್ತು ಆಡಳಿತದಲ್ಲಿ ಸೇವೆಯನ್ನು ಸಲ್ಲಿಸುವುದಕ್ಕೆ ಬೇಕಾಗುವ ಶಿಕ್ಷಣಕ್ಕೆ ಮಾತ್ರ ಹೆಚ್ಚಾಗಿ ಮಹತ್ವವನ್ನು ನೀಡಿದರು. ಕ್ರಿಶ್ಚಿಯನ್ ಧರ್ಮವನ್ನು ಪ್ರಸಾರ ಮಾಡುವುದಕ್ಕೆ ಪ್ರಮುಖವಾದ ಅಸ್ತ್ರ ಶಿಕ್ಷಣ ಎಂಬುದನ್ನು ಮನಗಂಡಿದ್ದರು. ಅನೇಕರು ರಾಷ್ಟ್ರೀಯ ಮಟ್ಟದಲ್ಲಿ ಶಿಕ್ಷಣವನ್ನು ಕುರಿತು ಪ್ರಯೋಗ ಚಿಂತನೆ ಮತ್ತು ಸುಧಾರಣೆಗಳನ್ನು ಮಾಡಲು ಮುಂದಾದರು. ಅಂತಹವರಲ್ಲಿ ಕನ್ನಡದ ಲೇಖಕರಾದ ಶಿವರಾಮಕಾರಂತರು ಆ ಬಗೆಗೆ ಗಂಭೀರ ಚಿಂತನೆ ಪ್ರಯೋಗಗಳನ್ನು ಮಾಡಿದರು. ಅಂತೆಯೇ ಶಿಕ್ಷಣವನ್ನು ಕುರಿತು ಶೋಧದ ಬರಹಗಳನ್ನು, ಪಠ್ಯಪುಸ್ತಕಗಳನ್ನು, ಬಾಲಪ್ರಪಂಚ, ವಿಜ್ಞಾನ ಪ್ರಪಂಚ, ವಿಶ್ವಕೋಶಗಳನ್ನು ರಚಿಸಿದರು. ಸುಮಾರು ಇಪ್ಪತ್ತನೇ ಶತಮಾನದಲ್ಲಿ ಜೀವಿಸಿದ ಶಿವರಾಮ ಕಾರಂತರು ಅಂದಿನ ಶಿಕ್ಷಣವನ್ನು ಪಡೆದು ಅದರಲ್ಲಿರುವ ಲೋಪದೋಷಗಳನ್ನು ಗುರುತಿಸಿ ಸ್ವತಃ ತಾವೇ ಹಲವಾರು ಕೃತಿಗಳನ್ನು ಬರೆದರು. ಅಂದಿನ ಕಾಲದಲ್ಲಿ ಮಕ್ಕಳಿಗೆ ಸರಿಯಾದ ರೀತಿಯಲ್ಲಿ ಪಠ್ಯಪುಸ್ತಕಗಳು ರಚನೆಗೊಂಡಿರಲಿಲ್ಲ. ಮಕ್ಕಳ ಆಸಕ್ತಿಯನ್ನು ಕೆರಳಿಸುವ ವಿಷಯಗಳು ಇರಲಿಲ್ಲ. ಕೇವಲ ಮತ ಪ್ರಸಾರದ ಉದ್ದೇಶದಿಂದ ಆಗಮಿಸಿದ ಮಿಶನರಿಗಳು ಮಕ್ಕಳ ಆಸಕ್ತಿಯನ್ನು ಗಮನಿಸದೆ ಕ್ರೈಸ್ತಧರ್ಮದ ವಿಚಾರಗಳು ಮತ್ತು ತತ್ತ್ವಗಳನ್ನು ಪಠ್ಯಪುಸ್ತಕ ಗಳಲ್ಲಿ ಅಳವಡಿಸಿದರು. ಆಡಳಿತದ ಅನುಕೂಲಕ್ಕೆ ತಕ್ಕಂತೆ ಶಿಕ್ಷಣದ ನೀತಿ ನಿಯಮಗಳನ್ನು ರೂಪಿಸಿ ಜಾರಿಗೆತಂದರು. ಇಪ್ಪತ್ತನೇ ಶತಮಾನದಲ್ಲಿ ಆಂಗ್ಲ ಭಾಷೆಯಲ್ಲಿ ಒಬ್ಬ ಸಾಮಾನ್ಯ ವ್ಯಕ್ತಿಗೆ ತನ್ನ ಜ್ಞಾನವನ್ನು ವಿಸ್ತರಿಸಿಕೊಳ್ಳಲು ಹಲವಾರು ಜ್ಞಾನ ಶಿಸ್ತುಗಳು ಲಭ್ಯವಿದ್ದವು. ಆದರೆ ಕನ್ನಡದಲ್ಲಿ ಮಕ್ಕಳಿಗೆ ವಿವಿಧ ವಿಷಯಗಳನ್ನು ಒಳಗೊಂಡ

ಕೃತಿಗಳು ರಚನೆಯಾಗಿರಲಿಲ್ಲ. ಇದನ್ನೆಲ್ಲಾ ಗಮನಿಸಿದ ಶಿವರಾಮ ಕಾರಂತರು ದೇಶ ವಿದೇಶಗಳ ಪ್ರವಾಸದಿಂದ ಅಲ್ಲಿರುವ ಅನೇಕ ಶಿಕ್ಷಣ ಸಂಸ್ಥೆಗಳನ್ನು ಕಂಡು ಶಿಕ್ಷಣ ಕುರಿತು ವ್ಯಾಪಕವಾಗಿ ಚಿಂತನೆಯನ್ನು ಮಾಡ ತೊಡಗಿದರು. ತಾವೇ ಹಲವಾರು ಶಾಲೆಗಳಿಗೆ ಬೇಟಿ ನೀಡಿ ಮಕ್ಕಳ ಕಲಿಕೆಯ ಸಮಸ್ಯೆಗಳನ್ನು, ಉಪಾಧ್ಯಾಯರ ಕುಂದುಕೊರತೆಗಳನ್ನು ತಿಳಿದುಕೊಳ್ಳುತ್ತಿದ್ದರು. ಇದರಿಂದ ಶಿಕ್ಷಣ ಕುರಿತು ಹಲವಾರು ವೈಚಾರಿಕ ಬರಹಗಳನ್ನು ಮಕ್ಕಳ ಪ್ರಾಥಮಿಕ ಪಠ್ಯ ಪುಸ್ತಕಗಳನ್ನು ರಚಿಸಿದ್ದಾರೆ. ವಸಾಹತುಶಾಹಿ ಶಿಕ್ಷಣಕ್ಕೆ ಅವರು ನೀಡಿದ ಪ್ರತಿಕ್ರಿಯೆ ಮತ್ತು ಚಿಂತನೆಗಳನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಅಡಿ ಟಿಪ್ಪಣಿಗಳು**

೧. ಶ್ರೀನಿವಾಸ ಹಾವನೂರು, ೨೦೧೧, ಹೊಸಗನ್ನಡ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು. ೩೧

೨. ಮಹಾಬಲೇಶ್ವರರಾವ್, ೨೦೧೦, ಮೆಕಾಲೆಯ ಮಕ್ಕಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪು. ೨೯

೩. ಮುತ್ತಣ್ಣ ಐ ಮಾ, ೧೯೭೩, ೧೯ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ, ಉಷಾ ಪ್ರೆಸ್, ಮೈಸೂರು, ಪು. ೬೦

೪. ಶ್ರೀನಿವಾಸ ಹಾವನೂರು, ೨೦೧೧, ಹೊಸಗನ್ನಡ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು. ೧೩೮

೫. ಮುತ್ತಣ್ಣ ಐ ಮಾ, ೧೯೭೩, ೧೯ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ, ಉಷಾ ಪ್ರೆಸ್, ಮೈಸೂರು, ಪು. ೨೫೭

೬. ಅದೇ ಪು. ೨೬೫

೭. ಅದೇ ಪು. ೨೫೭

ಅಧ್ಯಾಯ ಮೂರು

# ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಮತ್ತು ಶಿಕ್ಷಣ ಕುರಿತ ಚಿಂತನೆಗಳ ಮುಖಾಮುಖಿ

೩.೧. ಶಿವರಾಮ ಕಾರಂತರ ಪ್ರಾಥಮಿಕ ಶಿಕ್ಷಣ

೩.೨. ಕಾರಂತರ ಶಿಕ್ಷಣ ಚಿಂತನೆಗೆ ಪ್ರಭಾವ ಬೀರಿದ ಅಂಶಗಳು

೩.೩. ವಸಾಹತು ಶಿಕ್ಷಣಕ್ಕೆ ಕಾರಂತರ ಪ್ರತಿಕ್ರಿಯೆ ಹಾಗೂ ಚಿಂತನೆಗಳು

ಅಧ್ಯಾಯ ಮೂರು

# ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಹಾಗೂ ಶೈಕ್ಷಣಿಕ ಚಿಂತನೆಗಳು

**ಶಿ**ವರಾಮ ಕಾರಂತರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃಷಿ ಮಾಡಿದವರು. ಜೊತೆಗೆ ಶಿಕ್ಷಣಕ್ಷೇತ್ರಕ್ಕೆ ಅವರು ಸಲ್ಲಿಸಿರುವ ಕೊಡುಗೆ ಅಪಾರವಾದುದು. ನವೋದಯ ಕಾಲದಲ್ಲಿ ವಸಾಹತು ಶಿಕ್ಷಣ ಪಡೆದ ಕಾರಂತರು ಅಂದಿನ ಕಾಲದ ಶಿಕ್ಷಣದ ಲೋಪದೋಷಗಳನ್ನು ಕುರಿತು ಚಿಂತನೆ ಮಾಡಿದರು. ಅದರ ಜೊತೆಗೆ ಶಿಕ್ಷಣ ಕುರಿತು ಹಲವಾರು ಲೇಖನಗಳನ್ನು ಬರೆದರು ಮತ್ತು ಪ್ರಯೋಗಗಳನ್ನು ಮಾಡಿದರು. ಮಕ್ಕಳಿಗಾಗಿ ಪಠ್ಯಪುಸ್ತಕಗಳನ್ನು, ವಿಜ್ಞಾನ ಸಂಪುಟಗಳನ್ನು ರಚಿಸಿದರು. ಸಮಾಜ ಸಂಸ್ಕೃತಿ ಹಾಗೂ ಜನರ ಆರ್ಥಿಕ ಸ್ಥಿತಿಗತಿ ಮಕ್ಕಳ ಬೌದ್ಧಿಕ ಮಟ್ಟ, ಅವರ ಮನೋವಿಜ್ಞಾನ, ಕುತೂಹಲ, ಆಸಕ್ತಿ ಮುಂತಾದ ಎಲ್ಲಾ ದೃಷ್ಟಿಕೋನ ದಿಂದಲೂ ವಿಶ್ಲೇಷಿಸಿ ಬರೆದ ಕಾರಂತರ ಶೈಕ್ಷಣಿಕ ಬರಹಗಳು ಪ್ರಸ್ತುತವೆನಿಸುತ್ತವೆ. ಅವರು ವಿದ್ಯಾರ್ಥಿಯಾಗಿರುವಾಗಲೇ ಅಸಹಕಾರ ಚಳವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ರಾಷ್ಟ್ರಭಕ್ತಿ, ಸ್ವದೇಶಿ ವ್ಯಾಪಾರ, ಪತ್ರಿಕೋದ್ಯಮ, ಆಧ್ಯಾತ್ಮಸಾಧನೆ, ಪೋಟೋಗ್ರಫಿ, ನಾಟಕ, ನೃತ್ಯ, ಚಿತ್ರಕಲೆ, ಸಂಗೀತ, ಸಿನಿಮಾ, ಸಮಾಜ ಸುಧಾರಣಾ ಕಾರ್ಯಕ್ರಮಗಳು ಮತ್ತು ಶಿಕ್ಷಣ ಪ್ರಯೋಗಗಳು ಮುಂತಾದ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು.

**ಶಿವರಾಮ ಕಾರಂತರ ಪ್ರಾಥಮಿಕ ಶಿಕ್ಷಣ**

ದಕ್ಷಿಣ ಕನ್ನಡದ ಉತ್ತರ ಭಾಗದಲ್ಲಿರುವ ಕಡಲ ತೀರದ ಕೋಟ ಎಂಬ ಗ್ರಾಮದಲ್ಲಿ ೧೯೦೨ರಲ್ಲಿ ಶಿವರಾಮ ಕಾರಂತರು ಜನಿಸಿದರು. ಇವರ ಮನೆಯ ಸಮೀಪದಲ್ಲಿ ಹೀರೇ ದೇವಸ್ಥಾನವೆಂಬ ದೇವಾಲಯವಿತ್ತು. ದೇವಾಲಯದ ಪಕ್ಕದ ಒಂದು ಕೋಣೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಪಡೆದರು. ಈ ಶಾಲೆಯಲ್ಲಿ ಮಕ್ಕಳಿಗೆ ಮಗ್ಗಿ, ವಾರಗಳ ಹೆಸರುಗಳು, ತಿಥಿಗಳ ಹೆಸರು, ಚಂದ್ರಮಾನ ಮತ್ತು ಸೌರಮಾನಗಳು, ತಿಂಗಳುಗಳ ಹೆಸರು, ಸವಂತ್ಸರಗಳ ಹೆಸರುಗಳನ್ನು ಕಂಠಪಾಠ ಮಾಡಿಸುತ್ತಿದ್ದರು. ಐದನೆಯ ತರಗತಿಯ ತನಕ ಕಾರಂತರ ವಿದ್ಯಾಭ್ಯಾಸವು ಇಲ್ಲಿಯೇ ನಡೆಯಿತು. ಅಂದಿನ ಕಾಲದಲ್ಲಿ ಮಕ್ಕಳಿಗೆ ಸರಿಯಾದ ಪಠ್ಯಗಳು ರಚನೆಯಾಗಿರಲಿಲ್ಲ. ಕಾರಂತರೇ ಹೇಳುವಂತೆ

> ಭಾಷಾ ಪಠ್ಯಪುಸ್ತಕಗಳನ್ನು ಬಿಟ್ಟರೆ ನಮಗೆ ಬೇರೆ ಪಠ್ಯಗಳು ಇರಲಿಲ್ಲ. ಮಗ್ಗಿ ಪುಸ್ತಕ ಉದ್ದಕ್ಕೂ ಇರುತ್ತಿತ್ತು. ಅದರ ಎಲ್ಲಾ ಅಂಶಗಳೂ ನಮಗೆ ಕಂಠಪಾಟವಾಗಿದ್ದವು. ರೂಪಾಯಿಯಿಂದ ಕಾಸಿನ ತನಕ ರೂಪಾಯಿ, ಅದೇಲಿ, ಪಾವಲಿ, ಅಥವಾ ಚಕ್ರ, ಅಲ್ಲಿಂದ ದುಡ್ಡು ಕಾಸು ಈ ಲೆಕ್ಕವಲ್ಲದೆ ಬ್ರಿಟಿಷರ ಪೌಂಡಿನಿಂದ ಪೆನ್ನಿನ ತನಕ ಕಲಿಯಬೇಕಿತ್ತು. ಎಣ್ಣೆಯ ಲೆಕ್ಕ, ಹಾಡ, ಬೇಳೆ, ಸಿದ್ದೆಯ ತನಕ, ಇನ್ನೂ ಹಾಗೆಯೇ ಭಾರದ ಅಳತೆಗಳು ಬಂಗಾಲಿ, ರಾತ್ಲು, ತೊಲೆ, ಖಂಡಿ, ಮಣ ಮತ್ತು ಸೇರುಗಳು, ಗಜದಿಂದ ಇಂಚಿನ ತನಕ ಉದ್ದಳತೆ, ಇಕ್ಕೇರಿ ಕೋಲಿನಿಂದ ಅಂಗುಲದ ತನಕ ಉದ್ದದ ಅಳತೆ, ಕಾಳು ಕಡಿಗಳ ವಿಭಿನ್ನ ಅಳತೆಗಳು ಸ್ವಲ್ಪ ಮಟ್ಟಿಗೆ ಅಂಗಡಿ ಸಾಹುಕಾರರು ಬರೆಯುತ್ತಿದ್ದ ರೂಪಾಯಿ, ಚಕ್ರ ಹಾಗೂ ವೀಸ ಇತ್ಯಾದಿಗಳ ಲೆಕ್ಕ ಹೀಗೆ ಮಗ್ಗಿ ಕೋಷ್ಟಕದ ಯಾವತ್ತು ವಿವರಗಳು ಕಂಠಪಾಟದ ವಿಷಯಗಳಾಗಿದ್ದವು[೧]

ಎಂದು ಹೇಳುತ್ತಾರೆ. ಅಂದಿನ ವಿದ್ಯಾಭ್ಯಾಸವು ಕಂಠಪಾಟಕ್ಕೆ ಹೆಚ್ಚಿನ ಸಮಯವನ್ನು ಮೀಸಲಿಡಲಾಗುತ್ತಿತ್ತು. ಇದಲ್ಲದೆ ಮೋಡಿ ಬರಹದ ಕಾಗದಗಳನ್ನು ಓದಿಸುತ್ತಿದ್ದರು. ಮುಖ್ಯವಾಗಿ ದಿನನಿತ್ಯದ ವ್ಯವಹಾರಕ್ಕೆ ಬೇಕಾಗುವ ವಿದ್ಯಾಭ್ಯಾಸವನ್ನು ಕಲಿಸುತ್ತಿದ್ದರು. ಭೂ ಕಂದಾಯದ ರಶೀದಿಗಳನ್ನು ಬರೆಯುವುದು, ದಸ್ತಾವೇಜು, ವ್ಯವಹಾರ ಗಣಿತ, ನಿತ್ಯ ಜೀವನದಲ್ಲಿ ಮುಂದಿನ ಉಪಯೋಗಕ್ಕೆ ಬರಬಹುದಾದ್ದೆಲ್ಲಾ ಇಲ್ಲಿ ಕಲಿಸುತ್ತಿದ್ದರು. ಇವುಗಳನ್ನು ಕಲಿಯುವುದರ ಜೊತೆಗೆ ಶಾಲೆಯಲ್ಲಿ ಮನರಂಜನೆಗಾಗಿ ಕಾಗದಗಳನ್ನು ಕತ್ತರಿಸುವುದು, ವಿವಿಧ ರೀತಿಯ ಚಿತ್ರಗಳನ್ನು ಬರೆಯುವುದು ಮತ್ತು ಆಕೃತಿಗಳನ್ನು ರೂಪಿಸುವುದು, ಕಾಗದಗಳಿಂದ ಕೃತಕ ಗುಲಾಬಿ ಗಿಡಗಳನ್ನು ತಯಾರಿಸುವುದು, ಚಾಪೆಗಳನ್ನು ಹೆಣೆಯುವುದು ಮುಂತಾದವುಗಳನ್ನೆಲ್ಲ ಶಿಕ್ಷಣದ ಒಂದು ಭಾಗವಾಗಿಯೇ ಕಲಿಸಲಾಗುತ್ತಿತ್ತು.

ಕಾರಂತರು ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಗಿಸಿ ೧೯೧೨ರಲ್ಲಿ ಹೈಸ್ಕೂಲ್ ವಿದ್ಯಾಭ್ಯಾಸಕ್ಕಾಗಿ ಕುಂದಾಪುರಕ್ಕೆ ತೆರಳಿದರು. ಅಲ್ಲಿ ಅವರಿಗೆ ಇಂಗ್ಲಿಷ್ ವಿದ್ಯಾಭ್ಯಾಸ ಪರಿಚಯವಾಯಿತು. ಮುಂದಿನ ಜೀವನಕ್ಕೆ ಇಂಗ್ಲಿಷ್ ವಿದ್ಯಾಭ್ಯಾಸ ಪ್ರಯೋಜನವಾಗುವುದು ಎಂದು ಅವರ ತಂದೆಯವರು ಕಾರಂತರನ್ನು ಆಂಗ್ಲ ವಿದ್ಯಾಭ್ಯಾಸಕ್ಕೆ ಸೇರಿಸಿದರು. ಪ್ರಾಥಮಿಕ ಶಾಲೆಯಲ್ಲಿ ಐದನೇ ತರಗತಿ ತನಕ ಓದಿದರೂ ಪುನಃ ಆಂಗ್ಲ ಭಾಷೆಯನ್ನು ಕಲಿಯಲು ಮೂರನೆ ತರಗತಿಗೆ ಸೇರಿಸಲಾಯಿತು. ಕಾರಂತರ ಸಹೋದರರು ಆಗಾಗಲೇ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದರು.

> ಎಲ್ಲಾ ಮಕ್ಕಳಿಗೂ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ನಮ್ಮ ತಂದೆ ಎಡೆ ಮಾಡಿದ್ದರು. ಆ ದಿನಗಳಲ್ಲಿ ನಮ್ಮ ಹಳ್ಳಿಯಲ್ಲಿ ಅಂಥಹ ಮನಸ್ಸನ್ನು ಮಾಡುವವರೇ ಇದ್ದಿಲ್ಲ[೨]

ಅಂದಿನ ದಿನಗಳಲ್ಲಿ ಇಂಗ್ಲಿಷ್ ಶಾಲೆಗಳಿಗೆ ಬಹಳಷ್ಟು ಜನ ತಮ್ಮ ಮಕ್ಕಳನ್ನು ಕಳುಹಿಸುತ್ತಿರಲಿಲ್ಲ. ತುಂಬಾ ಶ್ರೀಮಂತರಾಗಿದ್ದವರು ಮಾತ್ರ ತಮ್ಮ ಮಕ್ಕಳಿಗೆ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಕಲಿಯಲು ಅವಕಾಶ ಮಾಡಿ ಕೊಡುತ್ತಿದ್ದರು. ಕಾರಂತರ ತಂದೆ ಶೇಷ ಕಾರಂತರು ಆರ್ಥಿಕವಾಗಿ ಮಧ್ಯಮ ವರ್ಗಕ್ಕೆ ಸೇರಿದವರಾದರೂ ತಮ್ಮ ಎಲ್ಲಾ ಮಕ್ಕಳಿಗೂ ಇಂಗ್ಲಿಷ್ ಶಿಕ್ಷಣವನ್ನು ಕಲಿಯಲು ಅವಕಾಶ ಮಾಡಿಕೊಟ್ಟಿದ್ದರು.

೨೦ನೇ ಶತಮಾನದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಹೆಚ್ಚಾಗಿ ಮಠಗಳಲ್ಲಿ ಕಲಿಸುತ್ತಿದ್ದರು. ಮಠಕ್ಕೆ ಸೇರಿದ ದಿನವೇ ನೆಲದ ಮೇಲೆ, ಹಾಸಿದ ಮರಳಿನ ಮೇಲೆ ಮಠದ ಐಗಳು ವಿದ್ಯಾರ್ಥಿಯ ಕೈ ಬೆರಳನ್ನು ಹಿಡಿದು ಬರೆಯಿಸುತ್ತಿದ್ದರು. ಮಕ್ಕಳಿಗಾಗಿಯೇ ಓದಲು ಪ್ರತ್ಯೇಕ ಪಠ್ಯಗಳು ರಚನೆಯಾಗಿರಲಿಲ್ಲ. ಮಗ್ಗಿಯನ್ನು ಕಂಠಪಾಟ ಮಾಡಿಸುತ್ತಿದ್ದರು. ಮಿಶನರಿಗಳು ನಡೆಸುವ ಸರಕಾರಿ ಶಾಲೆಯಲ್ಲಿ ಕ್ರಿಶ್ಚಿಯನ್ ಧರ್ಮದ ವರ್ಷ, ತಿಂಗಳುಗಳನ್ನು ಕಲಿಸಿದರೆ ಐಗಳ ಮಠಗಳಲ್ಲಿ ದಿನ, ವಾರ, ತಿಥಿ, ನಕ್ಷತ್ರ, ಸೌರಮಾನ, ಚಾಂದ್ರಮಾನ, ತಿಂಗಳು ಸವಂತ್ಸರಗಳನ್ನು ಕಲಿಸಲಾಗುತ್ತಿತ್ತು. ಇಂಗ್ಲಿಷ್ ಪಠ್ಯಗಳು ಮೊದಲ ವರ್ಷ ಬಹಳ ಸುಲಭ ವಾಗಿರುತ್ತಿತ್ತು. ಮುಂದಿನ ತರಗತಿಗಳಲ್ಲಿ ಅತ್ಯಂತ ಕಠಿಣ ವಿಷಯವಾಗಿ ವಿದ್ಯಾರ್ಥಿಗಳಿಗೆ ನಿರಾಸಕ್ತಿಯನ್ನು ಮೂಡಿಸುತ್ತಿತ್ತು. ಮಕ್ಕಳು ಎಂದೂ ಕೇಳಿರದ ವಿಷಯಗಳನ್ನು ಒಳಗೊಂಡಿದ್ದ ವೆಂದು ತಮ್ಮ ಆತ್ಮಕಥೆಯಲ್ಲಿ ಬಾಲ್ಯ ಶಿಕ್ಷಣವನ್ನು ಕುರಿತು ತಿಳಿಸುತ್ತಾರೆ.

> ನಾನು ಥರ್ಡ್ ಫಾರ್ಮನ್ನು ಸೇರುವಹೊತ್ತಿಗೆ ಜಿ.ಎ. ಯೇಟ್ಸ್ ಎಂಬುವರು ಬರೆದ ಇನ್ನೊಂದೇ ಪಠ್ಯಮಾಲೆಯ ೫ನೇ ಪುಸಕ್ತವನ್ನು ಓದಬೇಕಾಯಿತು. ಅದು ಬಲು ದಪ್ಪನಾಗಿತ್ತು. ಅದರ ಭಾಷಾಶೈಲಿ ತೀರ ಕ್ಲಿಷ್ಟವಾಗಿತ್ತು. ನಮ್ಮ ಪಾಲಿಗೆ ಅಪರಿಚಿತ

ವಾತವಾರಣವನ್ನು ಚಿತ್ರಿಸುವ ಹಲವು ವಿಷಯಗಳು ಅದರಲ್ಲಿದ್ದವು. ಇದು ಒಂದು ಬಗೆಯ ದಣಿವನ್ನು ನಮ್ಮಲ್ಲಿ ತರಿಸಿದ್ದೀತು. ಈ ಕಾರಣದಿಂದಲೋ ಏನೋ, ಹೈಸ್ಕೂಲಿನ ೪ ರಿಂದ ೬ನೇ ಫಾರ್ಮಿನ ಅವಧಿಯಲ್ಲಿ ನನಗೆ ಬೇರೆ ಇಂಗ್ಲಿಷ್ ಪಠ್ಯಪುಸ್ತಕಗಳಿದ್ದರೂ, ನನ್ನ ಪಾಲಿಗೆ ಅವು ಯಾವೊಂದು ಆಕರ್ಷಣೆಯನ್ನು ಹುಟ್ಟಿಸದೇ ಹೋದವು[೩] ಎನ್ನುತ್ತಾರೆ.



ಆರಂಭದ ಇಂಗ್ಲಿಷ್ ವಿದ್ಯೆಯಿಂದ ಪಡೆದ ತಿಳುವಳಿಕೆಯಿಂದ ಆಂಗ್ಲ ಭಾಷೆಯಲ್ಲಿರುವ ಚಿಕ್ಕ ಚಿಕ್ಕ ಕಥೆಗಳನ್ನು, ಲಘು ಪ್ರಬಂಧಗಳನ್ನು ಓದುವ ಹವ್ಯಾಸವನ್ನು ಬೆಳೆಸಿಕೊಂಡರು. ಆ ಕಾಲದ ಇಂಗ್ಲಿಷ್ ಪುಸ್ತಕಗಳು ಹಲವಾರು ಚಿತ್ರಗಳನ್ನು ಒಳಗೊಂಡು ಓದುಗರಲ್ಲಿ ಆಸಕ್ತಿಯನ್ನು ಉಂಟು ಮಾಡುತ್ತಿದ್ದವು. ಆದರೆ ಅದರಲ್ಲಿರುವ ಹಲವಾರು ವಸ್ತು, ವಿಷಯಗಳು ಸ್ಥಳೀಯವಾಗಿರಲಿಲ್ಲ. ಕಾರಂತರು ಹೈಸ್ಕೂಲ್ ವಿದ್ಯಾಭ್ಯಾಸವನ್ನು ಪಡೆಯುವ ಅವಧಿಯಲ್ಲಿ ಸಂಸ್ಕೃತವನ್ನು ಕಲಿಯತೊಡಗಿದರು, ಸಂಸ್ಕೃತದಲ್ಲಿರುವ ಹಲವಾರು ವಿಷಯಗಳು ಕಂಠಪಾಠ ಮಾಡಿ ಒಪ್ಪಿಸುವ ಪದ್ಧತಿ ಇತ್ತು. ಇದರಿಂದ ಜಿಗುಪ್ಸೆಗೊಂಡ ಕಾರಂತರು ಸಂಸ್ಕೃತ ಕಲಿಯುವುದನ್ನು ಅರ್ಧದಲ್ಲೇ ಬಿಟ್ಟರು. ನಂತರ ಭೂಗೋಳ ಮತ್ತು ವಿಜ್ಞಾನದ ವಿಷಯಗಳನ್ನು ಕಲಿಯಲಾರಂಭಿಸಿದರು. ಭೂಗೋಳದಲ್ಲಿ ಪ್ರಕೃತಿ ಸ್ವರೂಪ, ಭೂವಿಸ್ತಾರ ಜನಸಂಖ್ಯೆ, ಪ್ರಸಿದ್ಧ ಸ್ಥಳಗಳನ್ನು ಕಂಠಪಾಠ ಮಾಡಬೇಕಾಗಿತ್ತು. ಹೀಗೆ ಅಂದಿನ ಕಾಲದ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣವನ್ನು ಕುರಿತು ಹಲವಾರು ವಿಷಯಗಳನ್ನು ತಿಳಿಸುತ್ತಾರೆ.

ಕಾರಂತರು ಹೈಸ್ಕೂಲ್ ವಿದ್ಯಾಭ್ಯಾಸವನ್ನು ಮಾಡುವಾಗ ಹಲವಾರು ಉಪಾಧ್ಯಾಯರ ಕೈಯಲ್ಲಿ ಪಳಗಿದ್ದರು. ಅಂದಿನ ಶಿಕ್ಷಕರು ಪಾಠ ಹೇಳಿಕೊಡುವಾಗ ಸದಾ ಕೈಯಲ್ಲಿ ಬೆತ್ತವಿರುತಿತ್ತು. ಕಾರಂತರು ತಮ್ಮ ಬಾಲ್ಯದ ಅನುಭವಗಳನ್ನು ಆತ್ಮಕಥೆಯಲ್ಲಿ ಹೀಗೆ ಹೇಳುತ್ತಾರೆ.

> ಒಬ್ಬ ಕೆಥೋಲಿಕ ಉಪಾಧ್ಯಾಯರು ನನ್ನ ಇಂಗ್ಲಿಷ್ ಅಧ್ಯಾಪಕರಾಗಿದ್ದರು. ಮಾರುದ್ದದ ಬೆತ್ತವಿಲ್ಲದೆ ಅವರಿಂದ ಪಾಠವೇ ಸಾಗಲಾರದು. ಬೆಳಗಿನ ಪಾಠಕ್ಕೆ ಬರುವಾಗಲೇ ಕುಡಿದು 'ಡಿಂಗ್' ಆಗಿ ಬರುತ್ತಿದ್ದರು. ಅಮಲು ಇಳಿಯುವುದಕ್ಕೋಸ್ಕರ ತಮ್ಮ ಮನೆಯಿಂದ ಮಜ್ಜಿಗೆ ತರಸಿ ಕುಡಿದ ಮೇಲೆಯೇ ವಿದ್ಯಾರ್ಥಿ ಲೋಕಕ್ಕೆ ಶಾಂತಿ ದೊರೆಯಬೇಕಿತ್ತು.[೪]

ಈ ಮಾತುಗಳಿಂದ ಅಂದಿನ ಶಿಕ್ಷಕರ ವರ್ತನೆ ಹೇಗಿತ್ತೆಂದು ತಿಳಿಯಬಹುದು. ಆಗಿನ ದಿನಗಳಲ್ಲಿ ಪ್ರಾಥಮಿಕ ಶಾಲೆ ಮುಗಿಯುವುದರೊಳಗೆ ತಂದೆ ತಾಯಿಯರಿಗೆ ಪತ್ರ ಬರೆಯುವುದನ್ನು, ಡಿಮಾಂಡ್ ನೋಟು, ಅಡವು ದಸ್ತಾವೇಜು, ಮುಂತಾದ ವಿಷಯಗಳಿಗೆ ತಕ್ಕಂತೆ ಬರವಣಿಗೆ ಹೇಳಿಕೊಡುತ್ತಿದ್ದರು. ಜೊತೆಗೆ ಮೋಡಿ ಬರಹವನ್ನು ಅಭ್ಯಾಸ ಮಾಡಿಸುತ್ತಿದ್ದರು.

ಕಾರಂತರು ೧೯೨೦ರಲ್ಲಿ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಆಗಾಗಲೇ ಅವರ ಅಣ್ಣಂದಿರು ಕಾಲೇಜಿನಲ್ಲಿ ಮತ್ತು ತಮ್ಮಂದಿರು ಹೈಸ್ಕೂಲಿನ ವಿದ್ಯಾಭ್ಯಾಸದಲ್ಲಿದ್ದರು. ತಂದೆ ಶೇಷಕಾರಂತರು ಜವುಳಿ ವ್ಯಾಪಾರವನ್ನು ಮಾಡುತ್ತಿದ್ದರು. ತಮ್ಮ ಮಕ್ಕಳಲ್ಲಿ ಯಾರೊಬ್ಬರೂ ಅವರಂತೆಯೇ ಜವುಳಿ ವ್ಯಾಪಾರವನ್ನು ಮುಂದುವರಿಸಿಕೊಂಡು ಹೋಗಬೇಕೆಂದು ಆಪೇಕ್ಷಿಸಿದವರಲ್ಲ. ತಮ್ಮ ಮಕ್ಕಳು ವಿದ್ಯಾಭ್ಯಾಸವನ್ನು ಪಡೆದು ಹೊಸ ವೃತ್ತಿಗಳನ್ನು ಅವಲಂಬಿಸಬೇಕೆಂಬುದು ಅವರ ಆಸೆಯಾಗಿತ್ತು. ಕಾರಂತರ ಹಿರಿಯ ಅಣ್ಣಂದಿರು ಆಗಲೇ ವಕೀಲ ವೃತ್ತಿಗೆ ತರಬೇತಿಗೊಂಡು ಮಂಗಳೂರಿಗೆ ಬಂದು ನೆಲೆಸಿದ್ದರು. ಇಂತಹ ವಾತಾವರಣದಲ್ಲಿರುವ ಕಾರಂತರಿಗೂ ಕಾಲೇಜಿಗೆ ಸೇರಬೇಕು ಎಂಬ ಬಯಕೆ ಮೂಡಿತು. ಜೂನ್ ೧೯೨೦ರಲ್ಲಿ ಮಂಗಳೂರಿನ ಸರಕಾರಿ ಕಾಲೇಜಿಗೆ ಸೇರಿದರು. ಅಲ್ಲಿ ಫಿಸಿಕ್ಸ್ ಮತ್ತು ಕೆಮಿಸ್ಟ್ರಿ ವಿಷಯಗಳನ್ನು ತೆಗೆದುಕೊಂಡರೂ ಈ ವಿಷಯಗಳು ಅವರನ್ನು ಆಕರ್ಷಿಸಲಿಲ್ಲ. ಮೊದಲನೆಯದು ನಿರುತ್ಸಾಹ ಹುಟ್ಟಿಸುವಂತಿದ್ದರೆ ಎರಡನೆಯದು ಕೆಮಿಸ್ಟ್ರಿ ಪ್ರಯೋಗ ಶಾಲೆ ಇರುವುದರಿಂದ ಆಕರ್ಷಕವಾಯಿತು ಎನ್ನುತ್ತಾರೆ. ಇಂತಹ ಹಲವಾರು ಸಂದರ್ಭಗಳು ಮುಂದೆ ಶಿಕ್ಷಣ ಕುರಿತು ಯೋಚನೆ ಮಾಡುವಂತಾಯಿತು.

**ಕಾರಂತರ ಶಿಕ್ಷಣ ಚಿಂತನೆಗೆ ಪ್ರಭಾವ ಬೀರಿದ ಆಂಶಗಳು**

ಶಿವರಾಮ ಕಾರಂತರು ಕಾಲೇಜು ವಿದ್ಯಾಭ್ಯಾಸನ್ನು ಮಾಡುವಾಗ ರವೀಂದ್ರನಾಥ ಠಾಕೂರರ ಬರಹಗಳನ್ನು ಅಲ್ಪ–ಸ್ವಲ್ಪ ಓದಿ ತಿಳಿದುಕೊಂಡಿದ್ದರಿಂದ ಶಾಂತಿನಿಕೇತನ ಸಂಸ್ಥೆಯೊಂದಿಗೆ ಆಗಾಗ ಪತ್ರ ವ್ಯವಹಾರವನ್ನು ಮಾಡುತ್ತಿದ್ದರು. ಅವರಿಗೆ ಶಾಂತಿನಿಕೇತನಕ್ಕೆ ಹೋಗಬೇಕೆಂಬ ಬಯಕೆಯೂ ಇತ್ತು. ಆದರೆ ಅವರ ತಂದೆಯವರು ಇದಕ್ಕೆ ಅನುಮತಿಸಲಿಲ್ಲ. ಮುಂದೆ ಒಂದೆರಡು ತಿಂಗಳಲ್ಲಿ ಗಾಂಧೀಜಿಯವರು ಮಂಗಳೂರಿಗೆ ಅಸಹಕಾರ ಚಳವಳಿಯ ಸಲುವಾಗಿ ಭೇಟಿ ನೀಡಿದಾಗ ಹಲವಾರು ವಿದ್ಯಾರ್ಥಿಗಳಿಗೆ ಆಗಿನ ಶಾಲಾ ಕಾಲೇಜುಗಳನ್ನು ಬಹಿಷ್ಕರಿಸುವಂತೆ ಸಲಹೆಯನ್ನು ನೀಡಿದರು. ಆಗ ಗಾಂಧೀಜಿ ಅವರ ಕರೆಯಿಂದ ಉತ್ತೇಜನಗೊಂಡು ಕಾಲೇಜು ವಿದ್ಯಾಭ್ಯಾಸವನ್ನು ತ್ಯಜಿಸಿ ಸ್ವಾತಂತ್ರ್ಯ ಚಳವಳಿಗೆ ತಮ್ಮನ್ನು ತೊಡಗಿಸಿಕೊಂಡರು.

> ನಾನು ಫೋರ್ತ್ ಫಾರ್ಮ್ ಓದುತ್ತಿದ್ದಾಗ ಏನಿಬೆಸಂಟ್‌ರವರ ಚಳವಳಿದಿಂದ ದೇಶಿಯ ವಿದ್ಯಾಭ್ಯಾಸದ ಮೋಹಕ್ಕೆ ಗುರಿಯಾದ ಅಂಕುರ ಗಾಂಧೀಜಿಯ ಉಪನ್ಯಾಸ ಗಳಿಂದ ಇನ್ನಷ್ಟು ಬೆಳೆಯುವುದಕ್ಕೆ ಅವಕಾಶವಾಯಿತು. ಕಾಲೇಜಿನ ಪಠ್ಯಕ್ರಮ ಏನೂ ರುಚಿಸದಾಯಿತು. ರಾಜಕೀಯದ ಗೀಳು ಹೆಚ್ಚಿತು. ಮನಸ್ಸು ಅನಿಶ್ಚಿತ ಗುರಿ ಯಿಂದ ಮಂಗಳೂರಿಗೆ ನಾನು ಬಂದ ಉದ್ದೇಶವನ್ನು ಮರೆತು ಇನ್ನೆತ್ತತ್ತಲೋ ತೊಳಲಾಡಿತು.[೫]
>
> ಆ ಸಂದರ್ಭದಲ್ಲಿ ತಮಗಾದ ಮನಸ್ಸಿನ ತಳಮಳವನ್ನು ಹೀಗೆ ವ್ಯಕ್ತಪಡಿಸಿದ್ದಾರೆ.

ಮುಂದೆ ಕಾರಂತರು ಅಸಹಕಾರ ಚಳುವಳಿಗೆ ತಮನ್ನು ತೊಡಗಿಸಿಕೊಳ್ಳುಲು ನಿಶ್ಚಯ ಮಾಡಿ ಫೆಬ್ರವರಿ ೧೯೨೧ರಲ್ಲಿ ಕಾಲೇಜನ್ನು ಬಿಟ್ಟು ಮನೆಗೆ ಬಂದರು. ಮುಂದಿನ ಕೆಲ ವರ್ಷಗಳವರೆಗೆ ಗಾಂಧೀಜಿಯ ಸಂದೇಶವನ್ನು ಹರಡುವ ಕೆಲಸವನ್ನು ಕೈಗೊಂಡರು. ಇಂತಹ ಅವಧಿಯಲ್ಲಿ ಕಾರಂತರು ದೇಶದಲ್ಲೆಲ್ಲಾ ಅಲೆದಾಡುತ್ತಿದ್ದರಿಂದ ಅನೇಕ ಮಿತ್ರರ ಪರಿಚಯವಾಯಿತು. ಹೀಗೆ ಪರಿಚಯರಾದವರಲ್ಲಿ **ಕೆ. ಶ್ರೀನಿವಾಸು ಚಾರ್ಲು** ಎಂಬುವವರು ಕಾರಂತರ ಮೇಲೆ ವಿಶೇಷವಾಗಿ ಪ್ರಭಾವವನ್ನು ಬೀರಿದರು. ಹೈಸ್ಕೂಲ್ ಶಿಕ್ಷಕರಾಗಿದ್ದ ಅವರೊಂದಿಗೆ ಕಾರಂತರು ದೀರ್ಘಕಾಲ ಸ್ನೇಹವನ್ನು ಮುಂದುವರಿಸಿದರು. ಕೆ. ಶ್ರೀನಿವಾಸ ಚಾರ್ಲು ಅವರಿಗೆ ಶಿಕ್ಷಣ ಅವರ ವೃತ್ತಿಯಾದರೆ ಗಾಂಧೀಜಿ ಅವರಿಗೆ ಆದರ್ಶವಾಗಿದ್ದರು. ಇವರೊಂದಿಗೆ ಕಾರಂತರು ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಹಲವಾರು ವಿಷಯಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ಜೊತೆಗೆ ಪಾಶ್ಚಾತ್ಯರ ಪದ್ಧತಿಗಳನ್ನು ಓದಿ ತಿಳಿದುಕೊಳ್ಳುತ್ತಿದ್ದರು. ವಿದೇಶಗಳಿಂದ ಹಲವಾರು ಪತ್ರಿಕೆಗಳನ್ನು ತರಿಸುತ್ತಿದ್ದರು. ಈ ಪತ್ರಿಕೆಗಳಲ್ಲಿ ಸಿಜೆಕ್ ಎಂಬುವವರು ಸಂಪಾದಿಸುತ್ತಿದ್ದ **ನ್ಯೂಯಿರಾ** ಎಂಬ ಪತ್ರಿಕೆಯಲ್ಲಿ ಮಕ್ಕಳ ಶಿಕ್ಷಣವನ್ನು ಕುರಿತು ಸಿಜೆಕ್‌ರು ನಡೆಸುತ್ತಿದ್ದ ಪ್ರಯೋಗಗಳು ಮತ್ತು ವಿಚಾರಗಳಿರುತ್ತಿದ್ದವು. ಇದೂ ಕೂಡ ಮಕ್ಕಳ ಶಿಕ್ಷಣ ವಿಚಾರದಲ್ಲಿ ಕಾರಂತರಿಗೆ ವಿಶೇಷ ಆಸಕ್ತಿಯನ್ನು ಕೆರಳಿಸಿತ್ತು.

ಶಿವರಾಮ ಕಾರಂತರು ಮಂಗಳೂರಿನಲ್ಲಿ **ವಸಂತಮಾಸ** ಪತ್ರಿಕೆಯನ್ನು ನಡೆಸುತ್ತಿದ್ದ ಕಾಲದಲ್ಲಿ **ಪಡುಕೋಣೆ ರಮಾನಂದರಾವ್** ಎಂಬ ಕೆಮಿಸ್ಟ್ರಿ ಪ್ರಾಧ್ಯಾಪಕರ ಪರಿಚಯವಾಯಿತು. ಇವರೊಂದಿಗೂ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹಲವಾರು ವಿಷಯಗಳನ್ನು ಚರ್ಚಿಸುತ್ತಿದ್ದರು. ಇಂತಹ ಸಂದರ್ಭದಲ್ಲಿ ಪುತ್ತೂರು ತಾಲೂಕು ಬೋರ್ಡಿನ ಅಧ್ಯಕ್ಷರು ಮತ್ತು ಜಿಲ್ಲೆಯ ಸಹಕಾರಿ ಸಂಸ್ಥೆಗಳ ಪಿತಾಮಹರಾದ ಮೊಳಹಳ್ಳಿ ಶಿವರಾಯರ ಪರಿಚಯವಾಯಿತು. ಇವರು ಹಲವಾರು ಪ್ರಾಥಮಿಕ ಮತ್ತು ಹೈಸ್ಕೂಲ್ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿದ್ದರು. ಇವರು ಶಾಲೆಯಲ್ಲಿ ಮಕ್ಕಳು ಸಂತೋಷವಾಗಿ ಕಲಿಯಬೇಕು ಎನ್ನುವ ಮನೋಧರ್ಮವನ್ನು ಹೊಂದಿದ್ದರು. ಮಕ್ಕಳ ಬಾಹ್ಯ ಚಟುವಟಿಕೆಗಳಲ್ಲಿ ವಿಶೇಷವಾದ ಆಸಕ್ತಿಯನ್ನು ವಹಿಸುತ್ತಿದ್ದರು. ಮಕ್ಕಳ ಚಟುವಟಿಕೆಗಳನ್ನು ಬೆಳೆಸಲು ಕಾರಂತರೊಂದಿಗೆ ಮುಕ್ತವಾಗಿ ಚರ್ಚಿಸುತ್ತಿದ್ದರು. ಇದೂ ಕೂಡ ಕಾರಂತರು ಮುಂದೆ ಶಿಕ್ಷಣ ಕುರಿತು ಚಿಂತನೆ ಮತ್ತು ಪ್ರಯೋಗಗಳನ್ನು ಕೈಗೊಳ್ಳಲು ಉತ್ತೇಜನವಾಯಿತು.

ಬ್ರಿಟಿಷ್ ಅಧಿಕಾರಿಗಳು ಶಿಕ್ಷಣದಲ್ಲಿ ಮಕ್ಕಳ ಮನಸ್ಸನ್ನು ಅರಿಯದೆ ಪಠ್ಯ ಪುಸ್ತಕಗಳನ್ನು ತಯಾರಿಸುತ್ತಿದ್ದರು. ಅಂದಿನ ನಿಯಾಮವಳಿಗಳಲ್ಲಿ ಪ್ರಾಥಮಿಕ ಶಿಕ್ಷಣದ ಮಕ್ಕಳನ್ನು ಗಮನದಲ್ಲಿ ಇಟ್ಟುಕೊಳ್ಳದೇ ಪಠ್ಯಕ್ರಮವನ್ನು ರೂಪಿಸುತ್ತಿದ್ದರು. ಪಠ್ಯಪುಸ್ತಕ ನಿರ್ಮಾಣವೆನ್ನುವುದು ಕೈಗಾರಿಕೆ

ಯಂತಾಗಿತ್ತು. ಆದರೆ ಅದೊಂದು ಕಲಿಕೆಯಾಗಿರಲಿಲ್ಲ. ಯಾವುದೋ ದೇಶದಲ್ಲಿ ನಡೆದ ಘಟನೆಗಳನ್ನೋ ಸಂಗತಿಗಳನ್ನೋ ಮಕ್ಕಳು ಎಂದೂ ಕಂಡು ಕೇಳಿರದ ವಿಷಯಗಳನ್ನು ಪಠ್ಯ ಪುಸ್ತಕಗಳಲ್ಲಿ ಸೇರಿಸುತ್ತಿದ್ದರು. ಇದನ್ನು ಗಮನಿಸಿದ ಕಾರಂತರು ವಸಾಹತುಶಾಹಿ ಶಿಕ್ಷಣವನ್ನು ತೀವ್ರವಾಗಿ ವಿರೋಧಿಸುತ್ತಿದ್ದರು. ಮಕ್ಕಳ ಪಾಲಿಗೆ ಶಿಕ್ಷಣ ಎನ್ನುವುದು ನಾಲ್ಕು ಗೋಡೆಗಳ ನಡುವಿನ ತರಗತಿಗಳು ಹೇಗೆ ಸೆರೆಮನೆಗಳು ಆಗುತ್ತವೆ ಎಂಬುದನ್ನು, ಹಾಗೂ ಎಳೆಯರ ಮನಸ್ಸು ಹಾಗೂ ಭಾವನೆಗಳ ಮೇಲೆ ಶಿಕ್ಷಣ ಹೇಗೆ ಪ್ರಭಾವ ಬೀರುತ್ತದೆ ಎಂಬುದನ್ನು ಕಾರಂತರು ಹಲವಾರು ಭಾಷಣಗಳಲ್ಲಿ ಪ್ರಸ್ತಾಪಿಸಿದ್ದಾರೆ. ಈ ಕುರಿತು ಅನೇಕ ಲೇಖನಗಳನ್ನು ಸಹ ಬರೆದಿದ್ದಾರೆ. ಮಕ್ಕಳಿಗೆ ಕಲಿಸುವ ವಿಜ್ಞಾನ, ಸಮಾಜಶಾಸ್ತ್ರ, ಚರಿತ್ರೆ, ಭೂಗೋಳದಂತಹ ವಿಷಯಗಳು ಮುಂದಿನ ಜೀವನಕ್ಕೆ ನೆರವಾದಾಗ ಮಾತ್ರ ಶಿಕ್ಷಣ ಸಾರ್ಥಕವಾಗುತ್ತದೆ ಎನ್ನುತ್ತಾರೆ. ಆದರೆ ಮಕ್ಕಳ ಅಭಿರುಚಿ, ಆಸಕ್ತಿ, ಅವರ ಇತಿಮಿತಿಗಳನ್ನು ತಿಳಿದುಕೊಳ್ಳದೇ ತಯಾರಿಸುವ ಪಠ್ಯಕ್ರಮದಿಂದ ಶಿಕ್ಷಣವನ್ನು ಮುಗಿಸಿಕೊಂಡು ವಿಶ್ವವಿದ್ಯಾಲಯಗಳನ್ನು ಸೇರಿ ಹೊರಬರುವ ಹಲವಾರು ವಿದ್ಯಾರ್ಥಿಗಳಲ್ಲಿ ಯಾವ ಯಾವ ಅಭಿರುಚಿಗಳು ಬೆಳೆದಿವೆ? ಅವರಲ್ಲಿ ಸ್ವಂತ ಕಾಲಿನ ಮೇಲೆ ನಿಂತು ಜೀವನ ನಡೆಸುವ ಧೈರ್ಯ ಬಂದಿದೆಯೇ? ಸರಕಾರಿ ಕೆಲಸ ಸಿಗದಿದ್ದರೂ ಸ್ವಂತ ಬುದ್ಧಿಯಿಂದ ತಮ್ಮ ಮನಸ್ಸಿಗೆ ಸಂತೋಷವನ್ನು ಕೊಡಬಲ್ಲ ಜ್ಞಾನ ಅವರಲ್ಲಿ ಅಂಕುರಿಸಿ ದೆಯೇ ಎಂದು ಪ್ರಶ್ನಿಸುತ್ತಾರೆ.

> ಪ್ರಾಥಮಿಕ ಶಾಲೆಯಿಂದ ವಿಶ್ವವಿದ್ಯಾಲಯದ ತನಕ ಓದಿದ ಬಹುಮಟ್ಟಿನ ವಿಷಯಗಳನ್ನು ವಿದ್ಯಾರ್ಥಿಗಳು ಓದುವುದು–ಜ್ಞಾನದ ತೃಷೆಯಿಂದಲ್ಲ. ಅಂಥ ವಿಷಯಗಳಲ್ಲಿ ಪರೀಕ್ಷೆ ಪಾಸಾಗಿ, ಆ ಸರ್ಟಿಫಿಕೇಟಿನ ವರಪ್ರಸಾದಿಂದ ಪಡೆಯಬಹುದಾದ ನೌಕರಿಯ ಆಸೆಯಿಂದ–ಎಂಬುದು ಗೊತ್ತಿದ್ದ ಸಂಗತಿ. ಹಿಂದೆ ತಾನು ಓದಿದ ಯಾವೊಂದು ವಿಷಯದಲ್ಲೂ ಅಭಿರುಚಿ ಹುಟ್ಟದೆ ಹೋದರೆ, ಅದರಿಂದ ಪ್ರಯೋಜನ ಸಿಗದೆ ಹೋದರೆ ನಾವು ಈ ತನಕ ಹೋದುದು ಕುರುಡುದಾರಿ ಎಂಬುದು ಸ್ಪಷ್ಟವಾಗುತ್ತದೆ[೬]

ಕಲಿಯುವ ಮಕ್ಕಳ ವಯಸ್ಸು, ಅವರ ಅಭಿರುಚಿ, ಆಸಕ್ತಿಗಳು ಮಕ್ಕಳ ಇತಿಮಿತಿಗಳನ್ನು ತಿಳಿದು ಅದರ ಮೂಲಕ ನಾವು ಕೊಡುವ ಶಿಕ್ಷಣದ ವಸ್ತು ವಿಧಾನಗಳನ್ನು ನಿರ್ಣಯಿಸಬೇಕು ಎಂಬ ಕಾಳಜಿ ಕಾರಂತರಲ್ಲಿತ್ತು. ತಮ್ಮ ಕಾಲದ ವರ್ತಮಾನದ ಶಿಕ್ಷಣ ಕ್ರಮವನ್ನು ಕಂಡು ಕಾರಂತರು ಕಟುವಾಗಿ ಪ್ರತಿಕ್ರಿಯಿಸಿದ್ದರು. ವಸಾಹತು ಶಿಕ್ಷಣ ಕ್ರಮದಿಂದ ಶಿಕ್ಷಣವೆನ್ನುವುದು ಕೆಲಸಕ್ಕೆ ಬೇಕಾಗುವ ಅಂಕಪಟ್ಟಿಗಳನ್ನು ಪಡೆಯುವಂತಾಗಿದೆ. ನಾವು ಕಲಿಸುವ ಪಾಠಗಳು, ಪುಸ್ತಕಗಳು ಮಕ್ಕಳಲ್ಲಿ ಆಕರ್ಷಣೆಯನ್ನು ಹುಟ್ಟಿಸದೆ ಹೋದರೆ, ಯಾವ ಪ್ರಾಯದಲ್ಲಿ ಮಕ್ಕಳಿಗೆ ಏನು ಹೇಳಿದರೆ ತಿಳಿಯುತ್ತದೆ ಎಂಬ ಅರಿವಿಲ್ಲದೆ ಬರೆದ ಪುಸ್ತಕಗಳೂ ವ್ಯರ್ಥ ಎನ್ನುತ್ತಾರೆ.

ಕಂಠಪಾಠವನ್ನು ಮಾಡಿಸುವುದು, ಸಂಧಿ ವಿಂಗಡಿಸಿ ಹಾಗೂ ವ್ಯಾಕರಣವನ್ನು ತೋರಿಸುವ ರೀತಿಯೂ, ಮಕ್ಕಳಲ್ಲಿರುವ ಉತ್ಸಾಹವನ್ನು ಕಡಿಮೆಮಾಡಿ ಪುಸ್ತಕಗಳ ಬಗೆಗೆ ವೈರಾಗ್ಯವನ್ನು ತರಿಸುತ್ತವೆ. ಪಠ್ಯಗಳಲ್ಲಿರುವ ವಿಷಯವನ್ನು ಮಕ್ಕಳಿಗೆ ಒತ್ತಾಯದಿಂದ ಹೇರಬಾರದು. ಮಕ್ಕಳ ಗ್ರಹಿಕೆಯ ಮಟ್ಟಕ್ಕಣುಗುಣವಾದ ಸಂಭಾಷಣೆಯಿಂದ ಭಾಷೆಯಲ್ಲಿ ಶಬ್ದಗಳ ಅರ್ಥವಂತಿಕೆಯಿಂದ ರಮ್ಯವಾಗಿ ಮಕ್ಕಳಲ್ಲಿ ಆಸಕ್ತಿ ಅಭಿರುಚಿಗಳನ್ನು ಹುಟ್ಟಿಸಬೇಕು ಎನ್ನುತ್ತಾರೆ. ತರಗತಿಯ ಸಂದರ್ಭದಲ್ಲಿ ಶಿಕ್ಷಕರ ಜೊತೆ ವಿದ್ಯಾರ್ಥಿಯು ತನ್ನಲ್ಲಿ ಇದ್ದುದನ್ನು ಪರರಿಗೆ ತಿಳಿಸಬೇಕು ಎಂಬ ಮನಸ್ಸಿನ ಹಂಬಲ ಮೂಡುವ ರೀತಿಯಲ್ಲಿ ಸಂಭಾಷಣೆ ನಡೆಯಬೇಕು. ಎಂದು ಹೇಳುತ್ತಾರೆ.

ಶಿವರಾಮಕಾರಂತರು ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಕಲಿಯುತ್ತಿದ್ದಾಗ ಕನ್ನಡದಲ್ಲಿ ಕೆಲವೇ ಪುಸ್ತಕಗಳು ರಚನೆಯಾಗಿದ್ದವು. ಆಂಗ್ಲ ಭಾಷೆಯ ಪುಸ್ತಗಳು ಹೇರಳವಾಗಿದ್ದವು. ಪ್ರಾಥಮಿಕ ಮಕ್ಕಳ ಸಲುವಾಗಿಯೇ ಆಕರ್ಷಕ ಚಿತ್ರಗಳನ್ನು ಒಳಗೊಂಡ ಪುಸ್ತಕಗಳು ಕಡಿಮೆ ಬೆಲೆಯಲ್ಲಿ ಸಿಗುವಂತಿದ್ದವು. ಇಂತಹ ಪುಸ್ತಕಗಳಲ್ಲಿ ಹೆಚ್ಚಾಗಿ ಪ್ರಪಂಚದ ಬೇರೆ ಬೇರೆ ದೇಶದ ಕಥೆಗಳೇ ಇರುತ್ತಿದ್ದವು. ಪುಸ್ತಕದ ಪುಟಗಳಲ್ಲಿ ಅರ್ಧಕ್ಕೂ ಹೆಚ್ಚು ಚಿತ್ರಗಳು ಇರುತ್ತಿದ್ದವು. ಇಂತಹ ಚಿತ್ರಗಳೇ ಹೆಚ್ಚಾಗಿ ಮಕ್ಕಳನ್ನು ಸುಲಭವಾಗಿ ಆಕರ್ಷಿಸುತ್ತಿದ್ದವು. ಹಲವಾರು ರೇಖಾಚಿತ್ರಗಳನ್ನು ಕೊಟ್ಟು ಅವುಗಳಿಗೆ ಬಣ್ಣವನ್ನು ತುಂಬಿಸಲಾಗುತ್ತಿತ್ತು. ಕಾರಂತರು ಕಾಲೇಜು ವ್ಯಾಸಂಗವನ್ನು ಬಿಟ್ಟ ಮೇಲೂ ಹಲವಾರು ಪುಸ್ತಕಗಳನ್ನು ನೋಡಿ ಅಧ್ಯಯನ ಮಾಡಿದ್ದರು. ಅವೆಲ್ಲವೂ ಆಂಗ್ಲಭಾಷೆಯಲ್ಲಿ ರಚಿಸಿಲಾದ ಮಕ್ಕಳ ಪುಸ್ತಕಗಳಾಗಿದ್ದವು.

> ಇಂಗ್ಲೆಂಡಿನಲ್ಲಿದ್ದ ಹ್ಯಾಮರ್ಟನ್ಸ್, ಅಮಾಲ್ಗಮೇಟೆಡ್, ಪ್ರೆಸ್, ಜಾರ್ಜ್ ನ್ಯೂಸ್ ಇತ್ಯಾದಿ ಕಂಪನಿಗಳ ಪ್ರಕಾಶಕರು ವಿಜ್ಞಾನದ ರೂಪುರೇಷೆ, ಬುಕ್ ಆಫ್ ನಾಲೆಡ್ಜ್, ವರ್ಲ್ಡ್ ಆಫ್ ವಂಡರ್ಸ್, ವಂಡರ್ಸ್ ಆಫ್ ಎನಿಮಲ್ ಲೈಫ್, ಲ್ಯಾಂಡ್ಸ್ ಎಂಡ್ ಪೀಪಲ್ಸ್ ವಿಕ್ಟೋರಿಯಲ್ ನಾಲೆಡ್ಜ್ ಇತ್ಯಾದಿ ಅದ್ಭುತವಾದ ಪುಸ್ತಕಗಳನ್ನು ಪ್ರಕಟಿಸಿದ್ದರು. ಈ ಪುಸ್ತಕಗಳು ಚಿತ್ರಮಯವಾಗಿದ್ದಲ್ಲದೆ ವಿಷಯ ಗರ್ಭಿತ ವಾಗಿದ್ದವು.[೭]

ಹೀಗೆ ಕಾರಂತರು ಆಂಗ್ಲ ಭಾಷೆಯಲ್ಲಿ ಮಕ್ಕಳಿಗಾಗಿ ರಚನೆಯಾಗಿರತಕ್ಕಂತಹ ಹಲವಾರು ಪುಸ್ತಕಗಳನ್ನು ಕಂಡು ಕನ್ನಡದಲ್ಲಿಯೂ ಮಕ್ಕಳಲ್ಲಿ ಕುತೂಹಲ ಆಸಕ್ತಿಕರವಾಗಿರುವಂತಹ ಮಕ್ಕಳ ಪುಸ್ತಕಗಳನ್ನು ಬರೆಯಲು ಆರಂಭಿಸಿದರು. ಇದರಿಂದ ಮಕ್ಕಳಿಗಾಗಿ ಒಂದು ಜ್ಞಾನಕೋಶ ಅಥವಾ ವಿಶ್ವಕೋಶವನ್ನೆ ತರಬೇಕೆಂಬ ಸಾಹಸಕ್ಕೂ ಮುಂದಾದರು ಇದಕ್ಕಾಗಿ ಅನೇಕ ವಿಶ್ವಕೋಶಗಳನ್ನು ಅಧ್ಯಯನ ಮಾಡಿದರು. ಕನ್ನಡದಲ್ಲಿ ಓದುವವರಿಗೆ ಸುಲಭವಾಗಿ ಅರ್ಥವಾಗಲು

ಸರಳವಾದ ಶೈಲಿಯಲ್ಲಿ ಬರೆದರು. ಇದರ ಪ್ರಯತ್ನವೇ ಬಾಲಪ್ರಪಂಚ, ವಿಜ್ಞಾನ ಪ್ರಪಂಚ, ಪ್ರಾಣಿಪ್ರಪಂಚವೆಂಬ ದೊಡ್ಡ ಗ್ರಂಥಗಳು ರಚನೆಯಾದವು.

**ವಸಾಹತು ಶಿಕ್ಷಣ ಕಾರಂತರ ಪ್ರತಿಕ್ರಿಯೆ ಮತ್ತು ಚಿಂತನೆಗಳು**

ಗಾಂಧೀಜಿ, ಠಾಕೂರರ ಆದರ್ಶ, ಮನೋಧರ್ಮಗಳಿಂದ ಸ್ವತಂತ್ರ ವಿಚಾರವಾದಿಯಾಗಿ ಬೆಳೆದ ಕಾರಂತರು ದೇಶವಿದೇಶಗಳ ಪ್ರವಾಸದಿಂದ ಹಲವಾರು ಶೈಕ್ಷಣಿಕ ಸಂಸ್ಥೆಗಳನ್ನು ಕಂಡು ಶಿಕ್ಷಣಕ್ಕೆ ಸಂಬಂಧಿಸಿದಂತೆ ಹಲವಾರು ವಿಷಯಗಳನ್ನು ತಿಳಿದುಕೊಂಡರು. ಸ್ವತಃ ತಾವೇ ಶಾಲೆಗಳಿಗೆ ಭೇಟಿ ನೀಡಿ ಉಪಾಧ್ಯಾಯರ ಕುಂದು-ಕೊರತೆಗಳನ್ನು ಮತ್ತು ಮಕ್ಕಳ ಸಮಸ್ಯೆಗಳನ್ನು ತಿಳಿದುಕೊಳ್ಳುತ್ತಿದ್ದರು. ಅಂದಿನ ಶಿಕ್ಷಣ ಪದ್ಧತಿಯಲ್ಲಿ ಹಲವಾರು ಸಮಸ್ಯೆಗಳನ್ನು ಕಂಡುಕೊಂಡು ಆಳವಾಗಿ ಚಿಂತನೆ ಮಾಡಿದರು. ಶೈಕ್ಷಣಿಕ ಬರಹಗಳು, ಲೇಖನಗಳು, ಮಕ್ಕಳ ಪ್ರಾಥಮಿಕ ಪಠ್ಯ ಪುಸ್ತಕಗಳು, ವಯಸ್ಕರ ಶಿಕ್ಷಣ, ವೈಚಾರಿಕ ಬರಹಗಳು, ವಿಶ್ವಕೋಶಗಳನ್ನು ರಚಿಸಿದರು. 'ಇಂದಿನ ಶಿಕ್ಷಣ ಶಿಕ್ಷಣವಲ್ಲ; ಶಿಶು ಹತ್ಯೆ' ಎಂಬ ಲೇಖನದಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದಂತೆ ಮಕ್ಕಳಿಗೆ ಭಾಷೆಯನ್ನು ಕಲಿಸುವುದು ಹೇಗೆ ಹಾಗೂ ಕಲಿಸುವ ವಸ್ತು ವಿಷಯಗಳ ಯೋಗ್ಯತೆಗಳನ್ನು ಕುರಿತು ಚರ್ಚಿಸುತ್ತಾರೆ. ಯಾವುದೇ ಭಾಷೆಯನ್ನು ಕಲಿಯುವುದಕ್ಕೆ ಅವಕಾಶ ಮಾಡಿಕೊಟ್ಟರೆ ಸಾಕು ಆ ಭಾಷೆಯನ್ನು ಕಡ್ಡಾಯಗೊಳಿಸಬಾರದು ಎನ್ನುವುದು ಕಾರಂತರ ನಿಲುವು. ಹಿಂದೆ ಸಂಸ್ಕೃತ ಭಾಷೆಯನ್ನು ಕಡ್ಡಾಯವಾಗಿ ಕಲಿಯಲೇಬೇಕು ಎಂದು ಯಾರ ಮೇಲೆಯೂ ಹೇರಿರಲಿಲ್ಲ. ಅದರಲ್ಲಿರುವ ವಿಷಯಗಳನ್ನು ತಿಳಿದುಕೊಳ್ಳಬೇಕಾದವರು ಅದನ್ನು ಕಲಿಸುವವರ ಬಳಿಗೆ ಹೋಗಿ ಕಲಿತುಕೊಳ್ಳುತ್ತಿದ್ದರು.

> ಇವತ್ತು, ನಮ್ಮ ಮುಂದಿರುವ ಪ್ರಶ್ನೆ-ಮತಧರ್ಮಗಳ ಮಹಿಮೆ ಮುಖ್ಯವೆಂದು ತಿಳಿಯುವವರು ಸಂಸ್ಕೃತವನ್ನೋ, ಅರಬ್ಬಿ ಭಾಷೇಯನ್ನೋ ಕಲಿಯುತ್ತಾರೆ. ಸಾಂಸ್ಕೃತಿಕ ಪ್ರಭಾವಕ್ಕೆ ಮನ್ನಣೆ ಕೊಡುವವರು ಅದನ್ನು ಕಲಿಯಬೇಕಾಗುತ್ತದೆ. ಅದನ್ನು ಕಲಿಯಲು ಅವಕಾಶವಿದ್ದರೆ ಸಾಕು. ಅದನ್ನು ಕಡ್ಡಾಯಗೊಳಿಸಬೇಕೆ?[೮]

ಎಂದು ಪ್ರಶ್ನಿಸುತ್ತಾರೆ. ಇಲ್ಲಿ ಮಗು ಹುಟ್ಟಿದೊಡನೆಯೇ ಅವರ ಕಿವಿಗೆ ಬೀಳುವ ಶಬ್ದ ಇಂಗ್ಲಿಷ್ ಭಾಷೆಯದಲ್ಲ. ಈ ದೃಷ್ಟಿಯಿಂದ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆಯಲ್ಲಿಯೇ ಕಲಿಸಬೇಕು. ಮುಂದೆ ಬೇರೆ ಪ್ರದೇಶಗಳಿಗೆ ಹೋಗಿ ನೆಲೆನಿಂತರೆ ಅಲ್ಲಿನ ಭಾಷೆಗಳನ್ನು ಕಲಿಯಲೇ ಬೇಕಾಗುತ್ತದೆ. ಹೀಗಿದ್ದಾಗ ಕಡ್ಡಾಯವಾಗಿ ಭಾಷೆಗಳನ್ನು ಹೇರಬೇಡಿ ಎನ್ನುತ್ತಾರೆ. ಈ ರೀತಿ ಭಾಷೆಗಳನ್ನು ಹೇರುವುದರಿಂದ ವಿದ್ಯಾರ್ಥಿಗಳು ಯಾವ ಭಾಷೆಯಲ್ಲೂ ತಮ್ಮ ಮನಸ್ಸನ್ನು ಕೇಂದ್ರಿಕರಿಸಿಕೊಳ್ಳಲಾರದ ಸ್ಥಿತಿಗೆ ಬರುತ್ತಾರೆ. ಪ್ರಸ್ತುತ ಶಿಕ್ಷಣ ವ್ಯವಸ್ಥೆಯಲ್ಲೂ ಇದೇ ಪದ್ಧತಿಯನ್ನು ಕಾಣಬಹುದು.

ಶಿವರಾಮ ಕಾರಂತರು ಪ್ರಾಥಮಿಕ ಮಕ್ಕಳ ಪಠ್ಯಪುಸ್ತಕಗಳ ಭಾಷೆಯನ್ನು ಕುರಿತು ಚಿಂತನೆ ಮಾಡಿದ್ದಾರೆ. ಶಿಕ್ಷಕರು ಪ್ರತಿಯೊಂದು ಶಬ್ದದ ಅರ್ಥ ಪರಿಚಯವನ್ನು ಮಾಡಿಕೊಡಬೇಕು. ಶಬ್ದಗಳ ರಚನೆ, ಧ್ವನಿಯ ಸರಣಿ ಮುಂತಾದವುಗಳನ್ನು ಮಕ್ಕಳ ಮನಸ್ಸಿನಲ್ಲಿ ಪರಿಣಾಮವಾಗುವಂತೆ ಹೇಳಬೇಕು. ಇಲ್ಲದಿದ್ದರೆ ಮಗುವಿಗೆ ಅದರಿಂದ ಏನೂ ಪ್ರಯೋಜನ ವಾಗುವುದಿಲ್ಲ. ಮಕ್ಕಳು ಶಾಲೆಗೆ ಸೇರಿದಾಗ ನೇರವಾಗಿ ಸ್ಲೇಟು ಪುಸ್ತಕಗಳನ್ನು ಕೊಡದೆ ಅವರಲ್ಲಿ ಭಾಷೆಯ ಅಭಿರುಚಿ ಹುಟ್ಟಿ ನೆನಪಿಟ್ಟುಕೊಳ್ಳುವ ಶಕ್ತಿ ಉಂಟಾದ ನಂತರ ಕ್ರಮೇಣ ಸ್ಲೇಟಿನ ಉಪಯೋಗವನ್ನು ಕಲಿಸಿಕೊಡಬೇಕು. ಮಕ್ಕಳನ್ನು ತರಗತಿಗಳಲ್ಲಿ ತೀರಾ ನಿರ್ಬಂಧದಲ್ಲಿಡದೆ ಆಗಾಗ ಪಾಠಗಳನ್ನು ಬದಲಾಯಿಸಿ ಮಗುವಿನ ಮನಸ್ಸು ಯಾವ ಕಡೆಗೆ ಹೆಚ್ಚು ಒಲಿಯುತ್ತದೋ ಆ ವಸ್ತುವಿನಲ್ಲಿ ಮಗುವಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಡಬೇಕೆಂದು ಕಾರಂತರು ಹೇಳುತ್ತಾರೆ. ಶಾಲೆಯಲ್ಲಿ ಮಕ್ಕಳಿಗೆ ಯಾವುದಾದರೂ ಒಂದು ವಿಷಯವನ್ನು ಕುರಿತು ಪ್ರಬಂಧಗಳನ್ನು ಬರೆಯಿಸುವಾಗ ಉಪಾಧ್ಯಾಯರು ತಿದ್ದಿಕೊಳ್ಳಬೇಕಾದ ಕೆಲವೊಂದು ವಿಷಯಗಳನ್ನು ಹೇಳುತ್ತಾರೆ.

> ಮಕ್ಕಳು ಇಂಥಾ ರೀತಿಯಲ್ಲೇ ಎಂದರೆ ಒಂದು ದನದ ವಿಷಯ ಬರೆಯಕೊಟ್ಟಾಗ ಮೊದಲು ಅದರ ವಾಸಸ್ಥಾನ, ಅದರ ರೂಪ, ಆಹಾರ, ಅಂಗ, ಕಣ್ಣು, ಕಾಲು, ಬಾಲ–ಇತ್ಯಾದಿ ಕ್ರಮಗಳನುಸರಿಸಿಯೇ ಬರೆಯಲು ನಿರ್ಬಂಧವಿರಿಸದೆ, ಮಗುವು ಯಾವ ರೀತಿಯಲ್ಲಿ, ಯಾವ ವರ್ಣನೆಗಳನ್ನು ವರ್ಣಿಸ ಬಯಸುತ್ತದೋ, ಅದೇ ರೀತಿ ಬರೆದಾಗ, ಅದರಲ್ಲಿರುವ ತಪ್ಪುಗಳನ್ನಷ್ಟೇ ತಿದ್ದಿ ಕೊಡಬೇಕು–ಉಪಾಧ್ಯಾಯರು. ಅಲ್ಲದೆ, ಒತ್ತಾಯ ಪೂರ್ವಕವಾಗಿ ಇಂಥಾ ಕ್ರಮಗಳನ್ನೆ ಅನುಸರಿಸಿ ಬರೆಯಬೇಕೆಂದು ನಿಯಮವಿರಿಸಿದರೆ, ಆದಷ್ಟು ಬಿಟ್ಟಿ ಕೆಲಸದಂತೆ, ಬಾಯಿಪಾಠ ಕಲಿಸಿದುದನ್ನು ಬರೆದು ಮುಗಿಸುವುದು. ತಾನು ಬರೆದುದು ಸರಿಯೋ, ತಪ್ಪೋ ಎಂಬುದನ್ನು ತಿಳಿಯುವ ಶಕ್ತಿಯೂ ಅದಕ್ಕುಂಟಾಗದು."[5] ಎಂದು ಹೇಳುತ್ತಾರೆ.

ವಸಾಹತು ಕಾಲದ ಪಠ್ಯದ ಪದ್ಯಗಳಲ್ಲಿ ಅರ್ಥ ತಿಳಿಯದೆ ಕಂಠಪಾಠಕ್ಕೆ ಮಾತ್ರ ಸೀಮಿತ ವಾಗಿದ್ದರಿಂದ ಮಕ್ಕಳ ಮನಸ್ಸಿಗೆ ಬೇಸರವನ್ನು ತರಿಸುಂವತಿದ್ದವು. ಮಗುವು ತನ್ನ ಮುಂದೆ ನೋಡುತ್ತಿರುವ, ಆಡುತ್ತಿರುವ ವಿಷಯಗಳನ್ನು ಒಳಗೊಂಡ ಪಠ್ಯಗಳನ್ನು ಕೇಳಲು ಮಗು ಹೆಚ್ಚು ಇಷ್ಟಪಡುತ್ತದೆ. ಮಗುವಿನ ಮನಸ್ಸನ್ನು ಮನರಂಜಿಸುವುದಕ್ಕಾಗಿ ಪದ್ಯಗಳನ್ನು ಕಲಿಸಿ ಅದರ ಅಭಿರುಚಿಯನ್ನು ಮಕ್ಕಳಲ್ಲಿ ಮೂಡಿಸುವುದಾಗಿದೆ. ಮಗುವು ತಾನು ಕಲಿತ ಪದ್ಯವನ್ನು ನಟನೆಯಲ್ಲಿ, ಸ್ವರ ಭಾವದಲ್ಲಿ, ಮುಖಚರ್ಯೆಯಲ್ಲಿ ಅಭಿಪ್ರಾಯವನ್ನು ವ್ಯಕ್ತಪಡಿಸಿ ಸ್ವತಃ ತಾನೇ ಹಾಡಿ ನಟಿಸುವಂತಿರಬೇಕು ಎಂದು ಕಾರಂತರು ತಿಳಿಸುತ್ತಾರೆ. ಇಂತಹ ಹಲವಾರು ಪದ್ಯಗಳನ್ನು ಸ್ವತಃ ಕಾರಂತರೇ ರಚಿಸಿದ್ದಾರೆ. ವಸಾಹತು ಕಾಲದ ಪ್ರಾಥಮಿಕ ಶಾಲೆಗಳಲ್ಲಿ

ಮಕ್ಕಳ ಶಿಕ್ಷಣಕ್ಕೆ ಇರಿಸಿದ ಪಠ್ಯಗಳು ಅತ್ಯಂತ ನೀರಸವಾಗಿದ್ದವು. ಮಕ್ಕಳಲ್ಲಿ ಆಕರ್ಷಣೆಯನ್ನುಂಟು ಮಾಡುತ್ತಿರಲಿಲ್ಲ. ಶಾಲೆಗಳಿಗೆ ಹೋಗಲು ಮಕ್ಕಳು ನಿರಾಕರಿಸುತ್ತಿದ್ದರು. ಶಾಲೆಗಳು ಮಕ್ಕಳ ಪಾಲಿಗೆ ಸೆರೆಮನೆಗಳಂತಿದ್ದವು.

> ಇನ್ನೂ ಶಾಲೆಗಳೆಂದರೆ–ಆಟದ ಮನೆಗಳಾಗಿ ಕಾಣಿಸುವ ಬದಲು, ಕೇವಲ ಜೈಲುಗಳೇ! ಉಪಾಧ್ಯಾಯನಿಗೂ, ಮಕ್ಕಳಿಗೂ ಇರುವ ಸಂಬಂಧ ಕೇವಲ ಬಂಧಿತರಿಗೂ, ಜೈಲು ಅಧಿಕಾರಿ ಗಳಿಗೂ ಇರುವ ಸಂಬಂಧ! ಅವರ ಭವಿಷ್ಯವು ಕತ್ತಲಿಂದ ತುಂಬಿದೆ–ಇವೇ ಹಲವೊಂದು ಆರೋಪಗಳೇ ನನ್ನ ಲೇಖನ ಮಾಲೆಯ ಪ್ರಸ್ತಾವನೆ. ಈ ವಿಷಯವನ್ನು ಬೇರೆ, ಬೇರೆಯಾಗಿ ತರ್ಕಿಸುವುದು ನನ್ನ ಮನಸ್ಸು. ಎಂದಿನ ತನಕ ನಾವು, ಹಲವು ಪಾಶ್ಚಾತ್ಯ ದೇಶದವರಂತೆ ಮಕ್ಕಳ ಜೀವನವನ್ನು ಎಲ್ಲಿಯವರೆಗೆ ಚೆನ್ನಾಗಿ ಪರಿಶೀಲಿಸುವು ದಿಲ್ಲವೋ, ಎಲ್ಲಿಯ ತನಕ ಮಕ್ಕಳು ದೇವತೆಗಳೆಂದು ಆರಾಧಿಸುವುದಿಲ್ಲವೋ ಅಲ್ಲಿಯ ತನಕ ನಮ್ಮ ಶಾಲೆಗಳಿಗೆ ಮೋಕ್ಷವಿಲ್ಲ."[೧೦]

ಅಂದಿನ ಶಾಲೆಗಳು ಮಕ್ಕಳಿಗೆ ಸೆರೆವಾಸಗಳಾಗಿದ್ದವು ಎಂಬುದು ಈ ಮಾತಿನಲ್ಲಿ ಕಾಣಬಹುದು.

ಮಕ್ಕಳಿಗೆ ಹೇಳುವ ವಿಷಯಗಳು ಅವರ ಮನಸ್ಸು ಮತ್ತು ಅನುಭವಕ್ಕೆ ನಿಲುಕುವಂತಿರಬೇಕು. ಅವರ ಆಸಕ್ತಿಗಳನ್ನು ಸೆಳೆಯುವಂತಿರಬೇಕು. ಪ್ರಾಥಮಿಕ ಮಕ್ಕಳಿಗೆ ಶಿಕ್ಷಕರು ನೀತಿ, ಆದರ್ಶ, ಧರ್ಮ ಎಂದು ಬೋಧನೆ ಮಾಡುವುದನ್ನು ಮತ್ತು ಉಪದೇಶ ಮಾಡುವುದನ್ನು ಕಾರಂತರು ವಿರೋಧಿಸುತ್ತಾರೆ. ಮಕ್ಕಳಿಗೆ ಹರುಷವನ್ನುಂಟು ಮಾಡುವ ಪಠ್ಯಗಳ ಬದಲಾಗಿ ಉಪದೇಶದಿಂದ ತುಂಬಿರುತ್ತಿದ್ದವು. ಪಠ್ಯಪುಸ್ತಕಗಳಲ್ಲಿ ತತ್ವಜ್ಞಾನ ಇರುವುದನ್ನು ಕಾರಂತರು ವಿರೋಧಿಸುತ್ತಾರೆ.

> ಪ್ರಾರ್ಥನೆಗೆ ತತ್ವಜ್ಞಾನವಿರಲಿ, ಆದರೆ ಉಳಿದ ಗಳಿಗೆಯಲ್ಲೂ ಅದು ಬೇಡ. ಮಾನವೀ ಜನ್ಮ ವ್ಯರ್ಥ, ಹಿಗ್ಗುವೆ ಯಾಕೋ, ಸಪ್ತಾವಸ್ಥೆಗಳು ಇತ್ಯಾದಿ ಹಾಡುಗಳ ನೈಜ ಪರಿಚಯವು ಮಕ್ಕಳಿಗಾಗುವಂತಿಲ್ಲ. ಅವುಗಳು ಮೊದಲು ಸೊಂಪಾಗಿ ಬೆಳೆಯಲಿ, ನಗಲಿ, ಕುಣಿಯಲಿ–ಬಾಳ್ವೆಯು ನಿರರ್ಥಕವೆಂಬ ಮಾತುಗಳು, ಬದುಕುವ ಮಕ್ಕಳಿಗೆ ಬೇಡ.[೧೧]

ಈ ಮೇಲಿನ ಸಾಲುಗಳು ಅವರು ತತ್ವಜ್ಞಾನದ ವಿರೋಧಿಯಲ್ಲ. ಆದರೆ ಅದನ್ನು ಒಂದೇ ಸಮನೆ ಮಕ್ಕಳಿಗೆ ಹೇಳುವುದು ತಪ್ಪು. ಎನ್ನುತ್ತಾರೆ. ಶಾಲೆಗಳಲ್ಲಿ ಕಲಿಸುವ ಪಾಠಗಳು ಚಟುವಟಿಕೆ ಪ್ರಧಾನವಾಗಿರಬೇಕು. ಆಟದಿಂದ ಪಾಠ ಎಂಬ ತತ್ವವನ್ನು ಅಳವಡಿಸಿಕೊಳ್ಳಬೇಕು ಎನ್ನುತ್ತಾರೆ. ಮಕ್ಕಳಿಗೆ ತಿಳಿಯದ ವಿಷಯಗಳನ್ನು ಹೇಳಬೇಕಾಗಿ ಬಂದಾಗಲೆಲ್ಲಾ ತಿಳಿದ ವಿಷಯಗಳೊಡನೆ ನೇರವಾದ ಸಂಬಂಧವನ್ನು ತೋರಿಸಿಯೇ, ಅವರ ಅನುಭವದ ಪ್ರಯೋಜನ ಪಡೆದುಕೊಂಡು ಮುಂದುವರಿಯಬೇಕು ಎಂಬ ಸೂಕ್ತ ಸಲಹೆಯನ್ನು ನೀಡುತ್ತಾರೆ.

ಶಾಲೆಗಳಲ್ಲಿ ಮಕ್ಕಳಿಗೆ ನಾನಾ ವಿಷಯಗಳನ್ನು ಕಲಿಸುವ ಸಂದರ್ಭದಲ್ಲಿ ಪಠ್ಯಪುಸ್ತಕ ಮಹತ್ವದ ಪಾತ್ರವಹಿಸುತ್ತದೆ. ಪಠ್ಯಪುಸ್ತಕಗಳು ಒಳ್ಳೆಯ ವಿಷಯಗಳನ್ನು ನೀರಸವಾಗಿ ಬೋಧಿಸುವುದನ್ನು ಕಂಡಿದ್ದರು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಯಲ್ಲಿರುವ ಮಕ್ಕಳ ಪಠ್ಯಪುಸ್ತಕಗಳು ಅತ್ಯಂತ ನಿರಾಕರ್ಷವಾಗಿ ಹಲವಾರು ದೋಷಗಳಿಂದ ತುಂಬಿರುವುದನ್ನು ಕಾರಂತರು ವಿರೋಧಿಸುತ್ತಾರೆ. ಮಕ್ಕಳಿಗೆ ಹೇಳುವ ಪಠ್ಯ ಪುಸ್ತಕಗಳು ಹೇಗಿರಬೇಕು ಎಂದು ಕಾರಂತರೇ ಹಲವಾರು ಸಲಹೆಗಳನ್ನು ನೀಡುತ್ತಾರೆ. ಪಠ್ಯಪುಸ್ತಕಗಳಲ್ಲಿ ಮಕ್ಕಳಿಗೆ ಭಯವನ್ನು ಹುಟ್ಟಿಸುವ ವಾಕ್ಯಗಳಿರಬಾರದು, ಕಠಿಣ ಶಬ್ದಗಳಿರಬಾರದು, ಸರಳವಾದ ಭಾಷೆ ಇರಬೇಕು. ನೆನಪಿನಲ್ಲಿ ಇರಿಸಿಕೊಳ್ಳಬಲ್ಲ ಆಸಕ್ತಿಕರ ವಿಷಯಗಳಿರಬೇಕು. ಆರಂಭದಲ್ಲಿ ಒತ್ತಕ್ಷರಗಳು, ಮಹಾಪ್ರಾಣಗಳು, ಉದ್ದ ಶಬ್ದಗಳು, ವಾಕ್ಯಗಳು ಇರಬಾರದು. ಓದಿದ ವಾಕ್ಯ ಇಲ್ಲವೆ ಶಬ್ದ ನೆನಪಿನಲ್ಲಿ ಉಳಿಯಲು ಅದು ಬಿಂಬಿಸುವ ಚಿತ್ರ ಮುಖ್ಯವಾಗುತ್ತದೆ. ಅವರಿಗೆ ಓದಲು ಬರುತ್ತದೆ ಎಂಬ ವಿಶ್ವಾಸ ಮೂಡಿಸುವಂತಹ ಸರಳ ರೀತಿಯಲ್ಲಿ ನಿರೂಪಣೆಯಿರಬೇಕು ಎಂಬ ಅವರ ಸಲಹೆಗಳು ಇಂದಿಗೂ ಮುಖ್ಯವಾಗುತ್ತವೆ.

ಕಾರಂತರು ಪಾಶ್ಚಾತ್ಯ ಗ್ರಂಥಗಳ ಓದಿನಿಂದ ಪ್ರಭಾವಿತರಾದರೂ ಶಿಕ್ಷಣ ಸುಧಾರಣೆಗೆ ಇಲ್ಲಿನ ಸ್ಥಿತಿಗತಿಗಳ ನೆಲೆಯಿಂದಲೇ ವಿವೇಚಿಸಿರುವುದು ಅತ್ಯಂತ ಪ್ರಮುಖ ಅಂಶವಾಗಿದೆ. ಉದಾಹರಣೆಗೆ ವಿವಿಧ ಬೌದ್ಧಿಕ ಮಟ್ಟಗಳ ವಿದ್ಯಾರ್ಥಿಗಳನ್ನು ಅವರವರ ಆಸಕ್ತಿ ಮಟ್ಟಗಳಿಗನುಗುಣವಾಗಿ ಶಿಕ್ಷಣವನ್ನು ಅವರಿಗೆ ಪ್ರತ್ಯೇಕವಾಗಿ ನೀಡಬೇಕೆಂದು ಪಾಶ್ಚಾತ್ಯ ಶೈಕ್ಷಣಿಕ ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಸರಿಯಾದ ಕಟ್ಟಡಗಳು, ಶೌಚಗೃಹಗಳು, ಸಾಕಷ್ಟು ಬೆಂಚು, ಕುರ್ಚಿಗಳು, ಆಟದ ಮೈದಾನ ಮುಂತಾದ ಪ್ರಾಥಮಿಕ ಸೌಲಭ್ಯಗಳೇ ಸರಿಯಾಗಿ ಇಲ್ಲದಿರುವ ನಮ್ಮ ದೇಶದಲ್ಲಿ ವಿದ್ಯಾರ್ಥಿಯ ಆಸಕ್ತಿಗೆ ಅನುಗುಣವಾದ ಶಿಕ್ಷಣ ಎಂಬುದು ಅಸಾಧ್ಯ. ಮುಖ್ಯವಾಗಿ ಶಿಕ್ಷಕನಾದವನು ಕಲಿಕೆಯಲ್ಲಿ ಹಿಂದುಳಿದ ಹುಡುಗರನ್ನು ದೃಷ್ಟಿಯಲ್ಲಿಟ್ಟುಕೊಂಡು ಬೋಧನೆಯ ಮಟ್ಟವನ್ನು ನಿರ್ಧರಿಸಬೇಕೆಂದು ಚರ್ಚಿಸುತ್ತಾರೆ.

ಶಿವರಾಮ ಕಾರಂತರು ಪುತ್ತೂರು ತಾಲೂಕಿನ ಬೇರೆ ಬೇರೆ ಶಾಲೆಗಳಿಗೆ ಭೇಟಿ ನೀಡಿ ವಿದ್ಯಾರ್ಥಿಗಳ ಜೀವನವನ್ನು ತಿಳಿದುಕೊಳ್ಳುತ್ತಿದ್ದರು. ಅಂದಿನ ಪುತ್ತೂರು ತಾಲ್ಲೂಕು ಬೋರ್ಡಿನ ಅಧ್ಯಕ್ಷರಾದ ಶ್ರೀ ಮೊಳಹಳ್ಳಿ ಶಿವರಾಯರ ಪ್ರೋತ್ಸಾಹದಿಂದ ಎಲಿಮೆಂಟರಿ ಶಾಲೆಯ ಅಧ್ಯಾಪಕರೊಂದಿಗೆ ಜಿಲ್ಲೆಯ ಹಲವಾರು ಶಾಲೆಗಳಿಗೆ ಭೇಟಿ ನೀಡಿದಾಗ ಮಕ್ಕಳ ಜೀವನದಲ್ಲಿ ಆಸಕ್ತಿಯುಳ್ಳ ಕಾರಂತರಿಗೆ ಅಂತಹ ಸಂದರ್ಭವನ್ನು ದೊಡ್ಡ ಲಾಭವೆಂದು ತಿಳಿಯುತ್ತಿದ್ದರು. ಕಾರಂತರು ಮುಖ್ಯವಾಗಿ ಮಕ್ಕಳ ನಲಿವು. ಚೆಲುವುಗಳ ಕಡೆಗೆ ಗಮನಹರಿಸಿ ಅವರಲ್ಲಿ ಉತ್ಸಾಹ ಕ್ರಿಯಾಶಕ್ತಿಗಳು ಯಾವ ರೀತಿಯಿಂದ ಬೆಳೆದಿವೆ ಎಂದು ತಿಳಿಯುವುದು ಅವರ ಮುಖ್ಯ ಗುರಿಯಾಗಿತ್ತು. ಅವರ ಶೈಕ್ಷಣಿಕ ಲೇಖನಗಳ ಉದ್ದೇಶ ಅಂದಿನ ವಸಾಹತು ವಿದ್ಯಾಭ್ಯಾಸದ ಟೀಕೆಯೆ

ಹೊರತು ಯಾವುದೊಂದು ಶಾಲೆಯ ವೈಯಕ್ತಿಕ ಟೀಕೆಯಾಗಿರಲಿಲ್ಲ. ಶಿವರಾಮ ಕಾರಂತರು ಶಾಲೆಗಳಿಗೆ ಭೇಟಿ ನೀಡಿದಾಗ ಆ ಶಾಲೆಯ ಅಧ್ಯಾಪಕರಿಗಿಂತ ಮಕ್ಕಳ ಜೊತೆಗೆ ಹೆಚ್ಚು ಸಮಯವನ್ನು ಕಳೆಯುತ್ತಿದ್ದರು.

> ಈ ಪ್ರವಾಸ ಕಾಲದಲ್ಲಿ ನಾನು ಸಂದರ್ಶಿಸಿದ ಶಾಲೆಗಳು ಇವು: ಕಿನ್ನಿಕಂಬಳ, ಅಲೆಟ್ಟಿ, ಮೂಡಬಿದಿರಿ, ಹಿರಿಯಡ್ಕ, ಕಲ್ಯಾಣಪುರ, ಬೆಲ್ಲದಕಟ್ಟೆ, ಕೂರಾಡಿ, ಬಾರ್ಕೂರು, ಹಂಗಾರಕಟ್ಟೆ, ಕಾರ್ಕಡ, ತೆಕ್ಕಟ್ಟೆ, ಕೊಟೇಶ್ವರ, ಗಂಗೊಳ್ಳಿ, ಆದಿಉಡುಪಿ, ಉದ್ಯಾವರ (ಎರಡು), ಕಟ್ಪಾಡಿ, ಕಾಪು, ಎರ್ಮಾಳ, ಮೂಲ್ಕಿ, ತಾಳಪ್ಪಾಡಿ, ಕಟಿಲು, ಬಜಪೆ, ಸುರತಕಲ್ಲು, ಪಣಂಬೂರು, ಬೊಕ್ಕಪಟ್ಣ–ಈ ಸ್ಥಳಗಳಲ್ಲಿ ನನ್ನ ಮಾತು ಕಥೆಗಳ ಕಾಲವೂ ಸಾಧರಣ ಒಂದರಿಂದ, ಎರಡು ತಾಸಿನ ತನಕ ಚಿಕ್ಕಪುಟ್ಟ ಮಕ್ಕಳೊಡನೆಯೇ ನಡೆದಿತ್ತು ವಿನಹ ಉಪಾಧ್ಯಾಯರೊಡನಲ್ಲ.[೮೮]

ಎನ್ನುತ್ತಾರೆ. ಇಷ್ಟೇ ಅಲ್ಲದೆ ಕಾರಂತರು ಮಕ್ಕಳ ನಗು ಮಕ್ಕಳ ಚಟುವಟಿಕೆ, ಮಕ್ಕಳ ಕ್ರಿಯಾಶಕ್ತಿ, ಮಕ್ಕಳ ಆಟಗಳು, ಮಕ್ಕಳಿಗೂ ಸುತ್ತಲಿನ ಸೃಷ್ಟಿಗೂ ಇರುವ ಸಂಬಂಧ ಉಪಾಧ್ಯಾಯ ರಿಗೂ ಇರುವ ಸಂಬಂಧ, ಮಕ್ಕಳ ಶಾಲಾ ಕೆಲಸಗಳು, ಚಿತ್ರ ಪ್ರಬಂಧ ಕಥೆ ಮಕ್ಕಳ ಪಠ್ಯ ಪುಸ್ತಕಗಳು ಮತ್ತು ಆರೋಗ್ಯ, ಮಕ್ಕಳ ಭವಿಷ್ಯ ಈ ಎಲ್ಲಾ ವಿಭಾಗಗಳ ಮೇಲೆ ಹಲವಾರು ಲೇಖನಗಳನ್ನು ಬರೆದಿದ್ದಾರೆ. ಈ ಲೇಖನಗಳನ್ನು ಕಾರಂತರು ಪ್ರತ್ಯಕ್ಷ ಅನುಭವದ ಮೇಲೂ ಹಾಗೂ ಓದಿ ತಿಳಿದುದರ ಮೇಲೂ ಮತ್ತು ಮಕ್ಕಳ ಜೀವನದಿಂದ ಸ್ವತಃ ತಾವೇ ತಿಳಿದ ಹಲವಾರು ವಿಷಯಗಳನ್ನು ಕುರಿತು ಬರೆದಿದ್ದಾರೆ. ಪುತ್ತೂರು ತಾಲ್ಲೂಕಿನ ಬೋರ್ಡ್ ಅಧ್ಯಕ್ಷರ ಸಹಾಯದಿಂದ ತಾಲ್ಲೂಕಿನ ಕೆಲವೊಂದು ಶಾಲೆಗಳಲ್ಲಿ ನಾಲ್ಕರಿಂದ ಹತ್ತು ದಿನಗಳವರೆಗೆ ವಾಸವಾಗಿ ಮಕ್ಕಳೊಡನೆ ಒಂದಾಗಿ ಬೆರೆತು ಅವರ ಒಳ ಹೊರಗುಗಳನ್ನು ತಿಳಿದುಕೊಂಡು ಅವುಗಳನ್ನು ತಿದ್ದುವುದು ಇಲ್ಲವೆ ಸುಧಾರಿಸುವ ಪ್ರಯತ್ನವನ್ನು ಮಾಡುತ್ತಿದ್ದರು. ಅಂದಿನ ಪ್ರತಿ ಶಾಲೆಯಲ್ಲಿಯೂ ದೊರೆಯುವ ವಿದ್ಯಾಭ್ಯಾಸವು ಒಂದೇ ತೆರನಾಗಿದ್ದು ಶಿಕ್ಷಣವು ಕೇವಲ ಯಾಂತ್ರಿಕವಾಗಿ ನಡೆಯುತ್ತಿತ್ತು. ಮಕ್ಕಳ ಮನಸ್ಸನ್ನು ಅರಿಯದವನು ಉಪಾಧ್ಯಾಯನಾಗಲು ಅರ್ಹನಲ್ಲ. ಮಕ್ಕಳ ಶಿಕ್ಷಣ ಎಂದರೆ ನಗುವಿನ ಶಿಕ್ಷಣವಾಗಬೇಕು ಎಂಬುದು ಕಾರಂತರ ಆಶಯವಾಗಿತ್ತು.

> ಆ ಮಗುವಿನ ಕಣ್ಣಿಗೆ ಶಾಲೆಯೊಂದು, ನಗುವನ್ನು ಅಪಹರಿಸುವ ರಕ್ಕಸನಾಗಿ ಕಾಣುವುದು. ಮನೆಯಲ್ಲಿ ಸದಾ ನಗುತ್ತಾ, ಜಿಗಿಯುತ್ತಾ, ಜೀವಿಸಿದ ಮಕ್ಕಳು ಒಂದು ವರುಷ, ವರುಷವೇಕೆ? ಆರು ತಿಂಗಳ ಕಾಲ ಶಾಲೆಗೆ ಹೋದನೆಂದರೆ– ಅವನ ಮುಖವು ಶವದಂತಾಗುವುದು.[೯೩]

ಕಾರಂತರು ಹಲವಾರು ಶಾಲೆಗಳಿಗೆ ಭೇಟಿ ನೀಡಿದಾಗ ಅವರಿಗೆ ಕಂಡ ನೈಜ ಚಿತ್ರಣವಾಗಿತ್ತು. ನಗುವೆಂಬುದು ನವರಸಗಳಲ್ಲಿ ಉತ್ತಮ ರಸ, ಬುದ್ಧಿಶಕ್ತಿಯ ಬೆಳವಣಿಗೆಗೂ ಭಾವಕ್ಕೆ ಸರಿಯಾಗಿ ಮುಖ ಬದಲಿಸುವುದಕ್ಕೂ ಅದು ಅವಶ್ಯ. ಆದರೆ ನಗುವೊಂದನ್ನು ತಡೆಹಿಡಿದು ಒಬ್ಬನ ಜೀವನದಿಂದ ಅಪಹರಿಸಿದರೆ ಮುಂದೆ ಅವನ ಮುಖದಲ್ಲಿ ನವರಸಗಳ ಮೂಡುವಿಕೆಯೇ ಲೋಪವಾಗುವುದು ಎಂದು ಕಾರಂತರು ಎಚ್ಚರಿಸುತ್ತಾರೆ. ನಮ್ಮ ಶಿಕ್ಷಣದ ಹವ್ಯಾಸ ಶಾಲಾ ಉಪಾಧ್ಯಾಯನಂತೆಯೇ ಇದೆ ಎಂದು ಹೇಳುತ್ತಾರೆ. ತೊದಲುವ ಮಕ್ಕಳಿಗೆ ಬರಹ, ಗಣಿತಗಳೇ ಪ್ರಥಮ ಹೆಜ್ಜೆಯಿರಬೇಕೆಂಬ ಭ್ರಾಂತಿ ನಮ್ಮಿಂದ ದೂರುವಾಗಬೇಕು. ಪ್ರತಿದಿನ ನಾಲ್ಕು ಗೋಡೆಗಳ ಮಧ್ಯೆ ಅ, ಆ ಎಂಬುದನ್ನು, ೧x೧ ಎಂದು ಕಂಠಪಾಟ ಮಾಡುವುದನ್ನು ನಿಲ್ಲಿಸಬೇಕು. ಮಕ್ಕಳಿಗೆ ಪ್ರಾಥಮಿಕ ಶಿಕ್ಷಣವು ಕಥೆ, ಆಟಗಳಿಂದಲೇ ಸಾಗಬೇಕು. ಎನ್ನುವುದು ಕಾರಂತರ ನಿಲುವಾಗಿತ್ತು. ಮಕ್ಕಳೊಡನೆ ಅಂಕಿಗಳು ಮಾತನಾಡುವುದಿಲ್ಲ. ಅವುಗಳನ್ನು ಪಠ್ಯಗಳಲ್ಲಿ ಸೇರಿಸಿ ಅವರ ಜೀವನದ ಸವಿಯನ್ನು ಕೆಡಿಸಬಾರದು ಎಂದು ಕಾರಂತರು ಹೇಳುತ್ತಾರೆ.

ಓದಿಗೆ ಬಹಳ ಮುಖ್ಯವಾಗಿ ಬೇಕಾದದ್ದು ಓದುವ ಮನಸ್ಸು ಮತ್ತು ಸಿದ್ಧತೆ. ಇದು ಎಂದಿಗೂ ಇತರರ ಬಲವಂತಕ್ಕೆ ಒಗ್ಗುವುದಿಲ್ಲ. ಓದುವ ಅಭಿರುಚಿಯನ್ನು ಹುಟ್ಟು ಹಾಕುವುದಕ್ಕೆ ಪಂಡಿತರೂ ಕೂಡ ವಿಫಲರಾಗುತ್ತಿರುವುದಕ್ಕೆ ಇದುವೇ ಮುಖ್ಯ ಕಾರಣ. ಮಕ್ಕಳಿಗೆ ಓದಲು ಹೇಳಬಹುದೇ ಹೊರತು ಓದಿದ್ದನ್ನು ಅವರ ತಲೆಗೆ ತುಂಬಲು ಸಾಧ್ಯವಿಲ್ಲ. ಓದುವ ಅಭಿರುಚಿ ಮಕ್ಕಳಲ್ಲಿ ತನ್ನಷ್ಟಕ್ಕೆ ಅದೇ ಮೂಡಬೇಕು. ಅಂತಹ ವಾತವರಣ ಕಲ್ಪಿಸಲು ಪಾಲಕರು ಪ್ರಯತ್ನಿಸಬೇಕು. ಅದರ ಬದಲಿಗೆ ಮಕ್ಕಳಿಗೆ ಹೊಡೆದು ಬಡಿದು ಬಲವಂತವಾಗಿ ಕಲಿಸುತ್ತೇವೆಂದರೆ ಅದು ಸಾಧ್ಯವಾಗುವುದಿಲ್ಲ.

ಶಿವರಾಮ ಕಾರಂತರು ವಸಾಹತು ಶಿಕ್ಷಣ ವ್ಯವಸ್ಥೆಯನ್ನು ಕುರಿತು ಹಲವಾರು ಪ್ರಶ್ನೆಗಳನ್ನು ಎತ್ತುತ್ತಾರೆ. ನಮ್ಮ ಮಕ್ಕಳಿಗೆ ನಾವು ಕೊಡತೊಡಗಿದ ಶಿಕ್ಷಣಕ್ಕೆ ನಿರ್ದಿಷ್ಟವಾದ ಗುರಿ ಇದೆಯೇ? ಶಿಕ್ಷಣಾಲಯಗಳಿಂದ ನಾಳೆ ದಿನ ಆತ ಹೊರಬಿದ್ದ ಮೇಲೆ ತನ್ನ ಅನ್ನಕ್ಕೂ ತಾನೂ ಹುಟ್ಟಿ ಸಾಯುವ ತನಕ ಇದ್ದು ನಡೆಯಿಸಬೇಕಾದ ಜೀವನದ ಹೊರಾಟಕ್ಕೂ ಸಂಬಂಧವಿದೆಯೇ? ಅಂತಹ ಸಂಬಂಧವಿದ್ದರೆ ಅದರ ಗುರಿ, ವ್ಯಕ್ತಿ ಜೀವಕ್ಕೆ ಕೊಡಬೇಕಾದ ಪ್ರಾಶಸ್ತ್ಯವನ್ನು ಕೊಡುತ್ತಲಿದೆಯೇ? ವ್ಯಕ್ತಿಯ ಮನಸ್ಸು ಅರಳುವಂತೆ ಮಾಡಿ ಅವನ ಬುದ್ಧಿಶಕ್ತಿಯನ್ನು ಪ್ರಚೋದಿಸಿ ಆತ ತಾನಾಗಿ ತನ್ನ ಪರಿಸರದೊಡನೆ ಹೊಂದಿಕೊಳ್ಳಬಲ್ಲ ಸಾಮರ್ಥ್ಯವನ್ನು ಅವನಿಗೆ ಕಲಿಸುತ್ತಿದೆಯೇ? ವ್ಯಕ್ತಿಯನ್ನು ನಾವು ಕೇವಲ ಹೊಟ್ಟೆಪಾಡಿಗಾಗಿ ಹೋರಾಡುವ ಪ್ರಾಣಿಯಾಗಿ ತಿಳಿಯುತ್ತೇವೆಯೇ? ಅಥವಾ ಅವನು ಒಬ್ಬ ಮನೋಜೀವಿ ಎಂಬುದನ್ನು ಪರಿಗಣಿಸಿಯೇ ಆತನ ಮನಸ್ಸಿನ ವಿಕಾಸಕ್ಕೆ ನೆರವಾಗುವ ಬಗೆಯಲ್ಲಿ ನಮ್ಮ ಶಿಕ್ಷಣವನ್ನು

ರೂಪಿಸಿದ್ದೇವೆಯೋ ಅಂತಹ ಉದ್ದೇಶವಾದರೂ ನಮಗಿದೆಯೇ ಎಂಬ ಪ್ರಶ್ನೆಗಳನ್ನು ನಮ್ಮ ಮುಂದಿಡುತ್ತಾರೆ. ಈ ಪ್ರಶ್ನೆಗಳು ಇಂದಿಗೂ ಅತ್ಯಂತ ಪ್ರಮುಖವಾಗಿವೆ. ವ್ಯಕ್ತಿಯು ತಾನು ಮುಂದೆ ನಡೆಸಬೇಕಾದ ವೃತ್ತಿಗೂ ಅವನು ಗಳಿಸಿಕೊಂಡ ಶಕ್ತಿಗೂ ಯಾವುದೇ ಸಂಬಂಧವಿಲ್ಲದೆ ಹೋದರೆ ಶಿಕ್ಷಣವೆಂಬುದರ ಉದ್ದೇಶವಾದರೂ ಏನು? ಇಂದು ನಮ್ಮ ನಾಡಿನಲ್ಲಿ ವಿದ್ಯೆಯನ್ನು ಕಲಿತು ಪಾಸಾಗುವಂಥ ಸಾವಿರಾರು ವಿದ್ಯಾರ್ಥಿಗಳು ಆ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಪಡೆದ ಸರ್ಟಿಫಿಕೇಟಿಗೂ, ಡಿಪ್ಲೋಮಾಗಳಿಗೂ ಅವರ ಮುಂದಿನ ಜೀವನಕ್ಕೂ ಸಂಬಂಧ ಇಲ್ಲ. ಹಾಗೇನಾದರೂ ಕಂಡು ಬಂದರೆ ಅದು ನೂರು ಪದವೀಧರರಲ್ಲಿ ಹತ್ತು ಮಂದಿಗಿಂತಲೂ ಕಡಿಮೆ ಜನಕ್ಕೆ ಲಭಿಸಿದೆ. ಉಳಿದವರಿಗೆ ತಮ್ಮ ಜೀವಮಾನದಲ್ಲಿ ಅತ್ಯಂತ ಪ್ರಾಮುಖ್ಯವಾದ ಬಾಲ್ಯ, ತಾರುಣ್ಯಗಳನ್ನು ವ್ಯರ್ಥ ಹೋರಾಟದಲ್ಲಿ ಕಳೆದಂತಾಗುತ್ತದೆ. ಈ ಪ್ರಶ್ನೆಗೆ ಇಂದಿಗೂ ಉತ್ತರವನ್ನು ಕಂಡುಕೊಳ್ಳಲು ಆಗಿಲ್ಲ. ದಿನೇ ದಿನೇ ನಿರುದ್ಯೋಗದ ಸಮಸ್ಯೆ ಹೆಚ್ಚಾಗುವುದನ್ನು ಪ್ರಸ್ತುತ ಸಮಾಜದಲ್ಲಿ ಕಾಣಬಹುದು.

ಕಾರಂತರು ಮಾತು ಮತ್ತು ಬರವಣಿಗೆಗಳೆರಡರಲ್ಲೂ ಶಿಕ್ಷಣ ಎಂದರೆ ಏನು? ಎನ್ನುವ ಪ್ರಶ್ನೆ ಕೇಳುತ್ತಾರೆ. ಅಲ್ಲದೆ ಯಾವುದು ಶಿಕ್ಷಣ? ಶಿಕ್ಷಣ ಹೇಗಿರಬೇಕು? ತರಗತಿಯ ಒಳಗಿನ ಶಿಕ್ಷಣ ಮತ್ತು ನಿತ್ಯ ಜೀವನದಲ್ಲಿ ಉಪಯೋಗ ಮೊದಲಾದ ವಿಷಯಗಳನ್ನು ಮತ್ತೆ ಮತ್ತೆ ಪರಿಷ್ಕರಿಸುತ್ತಾ, ಸ್ಪಷ್ಟಗೊಳಿಸುತ್ತಾ ಚಿಂತನೆಗಳನ್ನು ಸಮಕಾಲೀನಗೊಳಿಸುತ್ತಿದ್ದರು. ಶಿಕ್ಷಣ ಎನ್ನುವುದು ಕೇವಲ ಪ್ರತ್ಯೇಕವಾಗಿ ನಿರ್ಮಿಸಲ್ಪಟ್ಟ ಶಾಲಾ ಕಾಲೇಜುಗಳಲ್ಲಿ ಸಾಗುವುದಷ್ಟೇ ಅಲ್ಲ ಬದಲಾಗಿ ಮಕ್ಕಳು ತಮ್ಮ ಸುತ್ತಮುತ್ತಲಿರುವ ಪರಿಸರವನ್ನು ನೋಡುತ್ತಾ ನಲಿಯುತ್ತಾ ಕಲಿಯಬೇಕು ಎನ್ನುತ್ತಾರೆ. ಶಾಲೆಯಲ್ಲಿ ಕಲಿತ ಗಣಿತ, ನಾಳೆ ನಡೆಸುವ ವಿವಿಧ ವ್ಯವಹಾರಗಳಲ್ಲಿ ಅನಿವಾರ್ಯ ಎಂಬ ಭಾವನೆಗೆ ಪೀಠಿಕೆ ಹಾಕಬೇಕು. ಮಕ್ಕಳಿಗೆ ಕಲಿಸುವ ವಿಜ್ಞಾನ, ಸಾಮಾಜಶಾಸ್ತ್ರ, ಚರಿತ್ರೆ, ಭೂಗೋಳದಂತಹ ವಿಷಗಳು ಮುಂದಿನ ಜ್ಞಾನ ಬೆಳವಣಿಗೆಗೆ ಅವಶ್ಯಕವಾದ ವಾತವರಣವನ್ನು ನಿರ್ಮಿಸಬೇಕು.

ಕಾರಂತರು ಪ್ರಾಥಮಿಕ ಮಕ್ಕಳ ಭಾಷೆಯ ಕಲಿಕೆ ಹೇಗಿರಬೇಕು, ಕಲಿಕೆಯನ್ನು ಆಕರ್ಷಕ ಗೊಳಿಸುವುದು ಹೇಗೆ ಎಂಬುದಕ್ಕೆ ತಮ್ಮ ಕಾಲದ ಶಿಕ್ಷಣ ಕ್ರಮವನ್ನು ಎದುರಿಗಿಟ್ಟುಕೊಂಡೇ ಯೋಚಿಸುತ್ತಿದ್ದರು. ಅದು ಹೇಗೆಂದರೆ– ಮಕ್ಕಳ ವಯಸ್ಸಿಗನುಗುಣವಾಗಿ ಕಲಿಸಬೇಕು. ಮಕ್ಕಳ ಮನಸ್ಸಿನ ಅರಿವಿಲ್ಲದೆಯೇ ಯಾವುದೋ ಪಠ್ಯಪುಸ್ತಕವನ್ನು ಮಕ್ಕಳಿಗೆ ಪಠ್ಯವಾಗಿಟ್ಟು ಕಂಠಪಾಠ ಮಾಡಿಸಿ, ಸಂಧಿ ವಿಂಗಡಿಸಿ, ವ್ಯಾಕರಣವನ್ನು ಪ್ರತ್ಯೇಕಗೊಳಿಸಿ, ಮಕ್ಕಳಲ್ಲಿ ಆಸಕ್ತಿ ಉತ್ಸಾಹ ಬತ್ತಿ ಹೋಗುವಂತೆ ಮಾಡುವ ಶಿಕ್ಷಣಕ್ರಮದಿಂದ ಯಾವ ಪ್ರಯೋಜನವೂ ಇಲ್ಲ. ಪಠ್ಯದ ಮೂಲಕ ಮಕ್ಕಳ ಅಭಿರುಚಿಯನ್ನು ಬೆಳೆಸಬೇಕು. ಮಕ್ಕಳಲ್ಲಿ ಅಭಿರುಚಿಯನ್ನು ಬೆಳೆಸಲಾರದ

ಶಿಕ್ಷಣ ವ್ಯರ್ಥವೆಂದೇ ತಿಳಿದಿದ್ದರು. ಕಾರಂತರಿಗೆ ತಮ್ಮ ಬಾಲ್ಯದ ಶಿಕ್ಷಣಕ್ರಮವು ಆಕರ್ಷಣೆಯ ವಿಷಯವಾಗಿ ಉಳಿದಿರಲಿಲ್ಲ. ಕೆಲವೇ ಶಿಕ್ಷಕರನ್ನು ಹೊರತು ಪಡಿಸಿದರೆ ಬೇರೆ ಶಿಕ್ಷಕರು ತಮ್ಮ ಮೇಲೆ ಪ್ರಭಾವ ಬೀರಲಿಲ್ಲವೆಂಬುದನ್ನು ತಮ್ಮ ಆತ್ಮಕಥನದಲ್ಲಿ ಹೇಳಿದ್ದಾರೆ. ಅವರ ಶಿಕ್ಷಣದ ಕುರಿತು ಎಲ್ಲಾ ಮಾತುಗಳು ವಸಾಹತು ಕಾಲದ ಶಿಕ್ಷಣಕ್ರಮವನ್ನು ಖಂಡಿಸುತ್ತಲೇ ಹೊಸದನ್ನು ನಿರೂಪಿಸುವ ಮಾದರಿಯದ್ದಾಗಿದೆ.

ಜ್ಞಾನದಮೋಹ ವಿದ್ಯಾರ್ಥಿಗಳಲ್ಲಿ ಹುಟ್ಟಬೇಕೆಂಬ ದೃಷ್ಟಿಯಿಂದ ಶಿಕ್ಷಣಕ್ರಮ ರೂಪುಗೊಂಡಿಲ್ಲ ಎನ್ನುತ್ತಾರೆ. ಕಾರಂತರು ತಮ್ಮ ಜಿಲ್ಲೆಯ ಇತರೆ ಪ್ರಾಥಮಿಕ ಶಾಲೆಗಳಿಗೆ ಭೇಟಿ ನೀಡಿದಾಗ ಹಲವಾರು ತರಗತಿಗಳಲ್ಲಿ ಬೇರೆ ಬೇರೆ ವಯಸ್ಸಿನ ಮಕ್ಕಳು ಪ್ರತಿದಿನ ಒಂದೇ ಸ್ಥಳದಲ್ಲಿ ಕೇವಲ ನಾಲ್ಕು ಗೋಡೆಗಳ ಮಧ್ಯೆ ನಿರಾಸಕ್ತಿಯ ಪಾಠ ಕೇಳುವಾಗ ಮಕ್ಕಳನ್ನು ಕಂಡ ಕಾರಂತರು ಹೀಗೆ ಹೇಳುತ್ತಾರೆ.

> ಇಂದಿನ ಶಾಲೆಗಳನ್ನು ಅಲಕ್ಷಿಸುವುದಾದರೆ ಅದನ್ನೇ. ಮಕ್ಕಳಿಗೆ ನಗುವೆ ಜೀವ-ಎಂದು ತಿಳಿಯದಿರುವ ತನಕ, ನಾವು ವಿದ್ಯಾಭ್ಯಾಸಕ್ಕಾಗಿ ಹೋರಾಡುವುದು. ವ್ಯರ್ಥ. ನಗುಮೊಗದ ಮಕ್ಕಳಿರುವ ಶಾಲೆಯೇ, ಅರಳಿದ ಹೂಗಳ ಉದ್ಯಾನ, ಬಾಡಿರುವ ಮೋರೆಯ ಮಕ್ಕಳಿರುವ ಸ್ಥಳವೇ ಮಸಣ. ಈಗ ನಾವ್ಯಾವ ಶಾಲೆಯಲ್ಲಿ ಕಾಲಿಟ್ಟರೂ, ಮಸಣದ ಛಾಯೆಯೇ ಒಡೆದು ಕಾಣುವುದಲ್ಲದೇ-ಉದ್ಯಾನದ ಕಳೆಯು ಅದರಲಿಲ್ಲ.[೧೪]

ಪ್ರತಿಯೊಂದು ಶಾಲೆಯಲ್ಲಿ ಮಕ್ಕಳನ್ನು ಹೀಗೆ ಬೆಳಗ್ಗೆಯಿಂದ ಸಂಜೆಯವರೆಗೆ ಬಲವಂತದ ಕಲಿಕೆಗೆ ಗುರಿಪಡಿಸಿ ಕೊನೆಗೆ ಆರೇಳು ವರ್ಷಗಳ ಕೊನೆಯಲ್ಲಿ ಸಾಧಿಸುವುದೇನು ಎಂಬ ವಿಷಯವನ್ನು ಕುರಿತು ದೀರ್ಘವಾಗಿ ಯೋಚನೆ ಮಾಡುತ್ತಿದ್ದರು. ಕೇವಲ ಮಕ್ಕಳಿಗೆ ಓದುವುದು ಬರೆಯುವುದನ್ನು ಕಲಿಸಲು ಇಷ್ಟೊಂದು ಶ್ರಮ ಯಾಕೆ ಎನ್ನುವಂತಹ ಪ್ರಶ್ನೆಗಳು ಅವರನ್ನು ಯಾವಾಗಲೂ ಕಾಡುತ್ತಿದ್ದವು. ಮುಖ್ಯವಾಗಿ ಶಿಕ್ಷಣದ ಉದ್ದೇಶದ ಸಂದರ್ಭದಲ್ಲಿ ಬಹಳ ಪ್ರಮುಖವಾಗಿ ಕಂಡುಬರುವ ಎರಡು ಉದ್ದೇಶಗಳೆಂದರೆ ಜೀವನವನ್ನು ರೂಪಿಸುವ ವೃತ್ತಿ ಮತ್ತು ಮನೋವಿಕಾಸವನ್ನುಂಟು ಮಾಡುವುದು. ಹೊಟ್ಟೆಪಾಡಿನ ದೃಷ್ಟಿಯಿಂದ ನೋಡಿದಾಗ ಶಿಕ್ಷಣ ಸ್ವಾವಲಂಬನೆಯನ್ನು ಬೆಳೆಸುತ್ತಿಲ್ಲ. ಅದು ಬದುಕಿಗೂ ಮನೋವೃತ್ತಿಗೂ ಸಂಬಂಧಿಸಿದ ಒಂದು ವ್ಯರ್ಥ ಹೋರಾಟವಾಗಿದೆ. ಬದುಕನ್ನು ಹೊಟ್ಟೆಯ ಪಾಡಿನ ಹೋರಾಟವನ್ನು ಎದುರಿಸುವ ದಿಟ್ಟತನವನ್ನು ನಮ್ಮ ಶಿಕ್ಷಣ ಪದವಿ ಗಳಿಸಿದವರಿಗೆ ಒದಗಿಸುತ್ತಿಲ್ಲ. ಸುಲಭ ಜೀವನದ ಆದರ್ಶಗಳನ್ನು ಮಾತ್ರ ಶಿಕ್ಷಣಾಲಯಗಳು ಸಾಧಿಸಿಕೊಂಡು ಬಂದಿವೆ ಎಂದು ಕಾರಂತರು ಕೊರಗುತ್ತಾರೆ.

ಶಿವರಾಮ ಕಾರಂತರ ಶಿಕ್ಷಣದ ಮುಖ್ಯ ಅಂಶಗಳನ್ನು ಹೇಳುವುದಾದರೆ, ವ್ಯಕ್ತಿವಿಕಾಸ, ವೃತ್ತಿ ವಿಕಾಸ ಹಾಗೂ ಸಾಮಾಜಿಕ ಹೊಂದಾಣಿಕೆ ಈ ಮೂರು ಅಂಶಗಳು ಶಿಕ್ಷಣದ ಮುಖ್ಯ ಗುರಿಯಾಗಬೇಕು ಎನ್ನುತ್ತಾರೆ. ವ್ಯಕ್ತಿಯಾದವನು ಆಂತರಿಕ ವಿಕಾಸ ಶಿಕ್ಷಣದ ಮೂಲ ಉದ್ದೇಶ ವೆನಿಸುತ್ತದೆ. ಶಿಕ್ಷಣವೆಂಬುದು ವ್ಯಕ್ತಿ ವಿಕಸನದಿಂದ ಆತನ ಮತ್ತು ವಿಸ್ತೃತ ಸಮಾಜದ ಹಿತಸಾಧನೆ ಎಂಬುದಾಗಿ ತಿಳಿಯಬಹುದು. ಸ್ವಂತ ಜೀವನಕ್ಕೆ ವ್ಯಕ್ತಿಗೆ ಬೇಕಾದ ವೃತ್ತಿಶಿಕ್ಷಣ ಕೊಡುವುದು, ಶಿಕ್ಷಣದ ಒಂದು ಮುಖವಾದರೆ ಸಾಮಾಜಿಕ ತಿಳುವಳಿಕೆ ಒದಗಿಸುವುದು ಅದರ ಇನ್ನೊಂದು ಮುಖವಾಗಿದೆ. ವ್ಯಕ್ತಿಯು ಸಮಾಜ ಮತ್ತು ದೇಶದೊಡನೆ ಹೊಂದಿ ಕೊಳ್ಳುವುದಕ್ಕೆ ಬೇಕಾದ ಸತ್‌ಶೀಲವನ್ನು ರೂಪಿಸುವುದು ಶಿಕ್ಷಣದ ಮೂರನೆಯ ಮುಖ. ಈ ಮೂರು ಮುಖಗಳುಳ್ಳ ಶಿಕ್ಷಣ ಎಲ್ಲರಿಗೂ ದೊರಕಬೇಕು ಎನ್ನುವುದು ಕಾರಂತರ ಚಿಂತನೆಯಾಗಿತ್ತು.

ಶಿವರಾಮ ಕಾರಂತರ ಶಿಕ್ಷಣದ ಕುರಿತ ಚಿಂತನೆಗಳು ಮತ್ತು ಪ್ರಯೋಗಗಳು ಮುಖ್ಯವಾಗಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತದ ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದ್ದೇ ಹೆಚ್ಚು. ಅವರ ಶೈಕ್ಷಣಿಕ ಬರಹಗಳನ್ನು ಗಮನಿಸಿದರೆ. ಮುಖ್ಯವಾಗಿ ಕಾರಂತರು ಬುದ್ಧಿ ಭಾವನೆಗಳ ವಿಕಾಸಕ್ಕೆ ಹೆಚ್ಚಿನ ಮಹತ್ವ ನೀಡುತ್ತಾರೆ. ಶಿಕ್ಷಣವು ವಿದ್ಯಾರ್ಥಿಗಳಲ್ಲಿ ಬಾಲ್ಯ ಮತ್ತು ತಾರುಣ್ಯದಲ್ಲಿ ಯಾವುದೇ ಅಭಿರುಚಿ ಬೆಳೆಸುವಲ್ಲಿ ವಿಫಲವಾಗುತ್ತಿತ್ತು. ಇದರ ಪರಿಣಾಮ ಶಿಕ್ಷಣವೆನ್ನುವುದು ಶಿಕ್ಷೆಯಾಗುತ್ತದೆ. ಮಕ್ಕಳ ಕಣ್ಣು ಕಿವಿಗಳು ತರಗತಿಗಳಲ್ಲಿ ಉಪಾಧ್ಯಾಯರನ್ನು ಕಾಣುವುದಕ್ಕೆ, ಕೇಳುವುದಕ್ಕೆ ಮಾತ್ರ ಮೀಸಲಾಗಿವೆ. ಶಿಕ್ಷಣಪದ್ಧತಿ ಸಾರ್ಥಕವಾಗಬೇಕಾದರೆ ಮಕ್ಕಳ ಮನಸ್ಸು ಅರಳಲು ಬೇಕಾದ ಆವರಣ ಸಾಧನಗಳನ್ನು ಶಿಕ್ಷಣಕ್ರಮದಿಂದ ಕಳಚಿಬಿಟ್ಟ ಕಾರಣ, ಅವರಲ್ಲಿ ಆಸಕ್ತಿ ಹುಟ್ಟಿಸುವ ಹಾಗೆ ನಮ್ಮ ಶಿಕ್ಷಣಕ್ರಮ ಇಲ್ಲ ಎಂದು ಕಾರಂತರು ಟೀಕಿಸುತ್ತಾರೆ.

ಮಕ್ಕಳ ಆಸಕ್ತಿ, ವಯೋಮಾನ ಕುತೂಹಲ, ಗ್ರಹಣ ಸಾಮರ್ಥ್ಯ ಇತ್ಯಾದಿಗಳ ಬಗೆಗೆ ಯೋಚಿಸದೆ ಪ್ರಾಯ ಪ್ರಬುದ್ಧರ ನಿರೀಕ್ಷೆಗಳನ್ನು ಪಠ್ಯಕ್ರಮದಲ್ಲಿ ಸೇರಿಸುವ ಅವಿವೇಕವನ್ನು ಕಾರಂತರು ತೀವ್ರವಾಗಿ ವಿರೋಧಿಸುತ್ತಾರೆ. ಮಕ್ಕಳ ಪಠ್ಯಪುಸ್ತಕಗಳಲ್ಲಿ ದೇಶಪ್ರೇಮ, ಜನಸಂಖ್ಯಾ ಶಿಕ್ಷಣ ಮುಂತಾದ ವಿಷಯಗಳನ್ನು ಸೇರಿಸುವುದನ್ನು ಕಾರಂತರು ವಿರೋಧಿಸುತ್ತಾರೆ. ಶಾಲಾ ಪಠ್ಯಕ್ರಮ ಪ್ರಾಯೋಗಿಕವಾಗಿರಬೇಕು. ಮಕ್ಕಳ ಬದುಕಿಗೆ ಸುಸಂಗತವಾಗಿರಬೇಕು ಎಂಬುದು ಕಾರಂತರ ಕಾಳಜಿಯಾಗಿತ್ತು. ಪರಿಸರವನ್ನು ಕುರಿತು ಮಕ್ಕಳಲ್ಲಿ ಕುತೂಹಲವನ್ನು ಕೆರಳಿಸಬೇಕು. ಮಕ್ಕಳಲ್ಲಿ ಅಭಿರುಚಿಯನ್ನು ಬೆಳೆಸದ ಶಿಕ್ಷಣ ಸಾರ್ಥಕವಾಗುವುದಿಲ್ಲ. ಮಕ್ಕಳಲ್ಲಿ ಶಿಕ್ಷಣವು ಅಭಿರುಚಿಯನ್ನು ಹುಟ್ಟಿಸದೆ ಹೋದರೆ ಆಸಕ್ತಿಯನ್ನು ಕೆರಳಿಸದೆ ಹೋದರೆ ಶಿಕ್ಷಣವು ಹೊರೆಯಾಗಿ ಶಾಲೆ ಅಥವಾ ಕಾಲೇಜು ಶಿಕ್ಷಣದ ನಂತರ ಮಕ್ಕಳಲ್ಲಿ ಅಧ್ಯಯನಶೀಲತೆಯು ಉಳಿಯುವುದಿಲ್ಲ.

ಬ್ರಿಟಿಷ್ ಶಿಕ್ಷಣವು ತಮ್ಮ ಆಡಳಿತಕ್ಕೆ ಅನುಗುಣವಾಗಿ ಶಿಕ್ಷಣ ವ್ಯವಸ್ಥೆಯನ್ನು ರೂಪಿಸಲಾಗಿತ್ತು. ಇಲ್ಲಿನ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪಠ್ಯಗಳನ್ನು ರಚಿಸಿರಲಿಲ್ಲ. ಕಾರಂತರು ಇದನ್ನು ಸ್ಪಷ್ಟವಾಗಿ ಗಮನಿಸಿದ್ದರು. ಶಿಕ್ಷಣವನ್ನು ಯಾರಿಗೆ ಕೊಡಲಾಗುತ್ತಿದೆ ಮತ್ತು ಯಾಕೆ ಎಂಬ ಉದ್ದೇಶವು ಸ್ಪಷ್ಟವಾಗಿದ್ದರೆ ನಾವು ಕೊಡುವ ಶಿಕ್ಷಣವು ಸಾರ್ಥಕವಾಗುತ್ತದೆ ಎನ್ನತ್ತಾರೆ. ಮಕ್ಕಳಲ್ಲಿರುವ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸಬೇಕು. ಶಾಲೆಗಳಲ್ಲಿ ಕಲಿಸುವ ವಿಷಯಗಳಿಗೆ ತಾನಾಗಿ ತೊಡಗಿಕೊಂಡು ಆನಂದದಿಂದ ನಿರ್ವಹಿಸಲು ಸಾಧ್ಯವಾಗುವಂತೆ ಮಾಡಬೇಕು. ಎನ್ನುವುದು ಕಾರಂತರ ಚಿಂತನೆಯಾಗಿತ್ತು.

**ಕುವೆಂಪು, ಗೋಪಾಲಕೃಷ್ಣ ಅಡಿಗ ಮತ್ತು ತೇಜಸ್ವಿ ಅವರ ಶೈಕ್ಷಣಿಕ ವಿಚಾರಗಳು**

೨೦ನೇ ಶತಮಾನದಲ್ಲಿ ಶಿವರಾಮ ಕಾರಂತರಂತೆ ಕುವೆಂಪು, ಅಡಿಗ ಮತ್ತು ತೇಜಸ್ವಿ ಅವರು ಮಕ್ಕಳ ಶಿಕ್ಷಣವನ್ನು ಕುರಿತು ಚಿಂತನೆಯನ್ನು ಮಾಡಿದ್ದಾರೆ. ಪಾರಂಪರಿಕ ಶಿಕ್ಷಣವನ್ನು ಕುರಿತು ತೀವ್ರವಾಗಿ ಚರ್ಚಿಸಿದ್ದಾರೆ. ಕುವೆಂಪು ಅವರು ಶಿಕ್ಷಕರಾಗಿದ್ದಾಗ ಸಾಮಾನ್ಯವಾಗಿ ಅವರ ದೃಷ್ಟಿಯು ಶಿಕ್ಷಣದ ಕಡೆಗೆ ತಿರುಗಿತು. ಭಾರತೀಯ ಉಜ್ವಲ ಪರಂಪರೆಯ ಹಿನ್ನೆಲೆಯಲ್ಲಿ ಶಿಕ್ಷಣದ ಉದಾತ್ತ ಆಶಯ ಆದರ್ಶಗಳನ್ನು ಕಂಡ ಕುವೆಂಪು ಅವರು ಆಧುನಿಕ ವಿದ್ಯಾಭ್ಯಾಸದ ಇತಿಮಿತಿಗಳನ್ನು ಕುರಿತು ಆಲೋಚಿಸಿದ್ದಾರೆ. ಭಾರತಕ್ಕೆ ಸ್ವಾತಂತ್ರ್ಯ ಬರುವ ಪೂರ್ವದಲ್ಲಿ ವಿದ್ಯಾರ್ಥಿ ಗಳನ್ನು ಉದ್ದೇಶಿಸಿ ಮಾಡಿದ ಕೆಲವು ಭಾಷಣಗಳಲ್ಲಿ ವೈಚಾರಿಕ ಕ್ರಾಂತಿಯ ಕರೆ ಯೊಂದಿಗೆ ಶಿಕ್ಷಣದ ಸ್ವರೂಪವೂ ವ್ಯಕ್ತವಾಗಿದೆ. ವಿದ್ಯಾರ್ಥಿಗಳು ಶಿಕ್ಷಣದಿಂದ ಏನನ್ನು ಪಡೆಯಬೇಕು, ಪಡೆದುದನ್ನು ಹೇಗೆ ಜೀವನದಲ್ಲಿ ಅಳವಡಿಸಿಕೊಂಡು ಬದುಕಬೇಕು ಎಂಬುದನ್ನು ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ ಎಂಬ ಗ್ರಂಥದ ನಾಲ್ಕು ಭಾಷಣಗಳು ತುಂಬಾ ಅರ್ಥವತ್ತಾಗಿ ಪ್ರತಿಪಾದಿಸುತ್ತವೆ. ಶಿಕ್ಷಣದ ಅನೇಕ ಅಂಶಗಳನ್ನು ವಿಚಾರ ಕ್ರಾಂತಿಯ ವಿವೇಚನೆ ಯಲ್ಲಿ ನೋಡಬಹುದು.

ಕುವೆಂಪು ಶಿಕ್ಷಣವೆನ್ನುವುದು ಮಾನವ ಜೀವನದಲ್ಲಿ ಅವನ ಉಸಿರಾಟದಷ್ಟು ಸಹಜವಾಗಿ ಬೆಳೆದು ಆತನ ದೈವೀಸಂಕಲ್ಪವನ್ನು ಪೋಷಿಸಬೇಕಾದ ಆಧ್ಯಾತ್ಮಿಕತೆ ಎಳೆಯ ವಯಸ್ಸಿನಿಂದಲೂ ಆತನ ಸಂಗಾತಿಯಾಗಬೇಕು. ವಿದ್ಯಾರ್ಥಿಗಳ ಶಿಕ್ಷಣ ಕ್ರಮದಲ್ಲಿ ಇದನ್ನು ಅಳವಡಿಸಿ ಅವರ ಮನಸ್ಸು ಅರಳಿಸುವಂತಾಗಬೇಕು ಎನ್ನುತ್ತಾರೆ. ಆದರೆ ಇಂದಿನ ವಿದ್ಯಾಭ್ಯಾಸ ಕ್ರಮದಲ್ಲಿ ಇದಕ್ಕೆ ಯಾವ ಸ್ಥಾನ ದೊರೆತಿದೆ? ಇಂದಿನ ವಿದ್ಯಾಸಂಸ್ಥೆಗಳಲ್ಲಿ ಅದನ್ನು ರೂಪಿಸಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕಾರಾಗು ತ್ತಿರುವವರ ಬದುಕಿನಲ್ಲಿ ಇದಕ್ಕೆ ಯಾವ ಪುರಸ್ಕಾರವಿದೆ? ಎಂಬಂತಹ ಪ್ರಶ್ನೆಗಳನ್ನು ಎತ್ತಿಕೊಂಡು ಇಂದಿನ ವಿದ್ಯಾರ್ಥಿ ಜೀವನದ ಸಾರಸರ್ವಸ್ವವಾದ ಆತ್ಮಶ್ರೀಯಿಂದ ಹೇಗೆ ವಂಚಿತನಾಗುತ್ತಿದ್ದನೆಂಬುದನ್ನು ಎತ್ತಿ ತೋರಿಸುತ್ತಾರೆ.

ಆಧುನಿಕ ಯುಗದಲ್ಲಿ ವಿದ್ಯಾರ್ಥಿಯ ಮೇಲೆ ಅನೇಕ ಶಕ್ತಿಗಳು ಪ್ರಭಾವ ಬೀರುತ್ತವೆ. ಬೌದ್ಧಿಕ ಪರಿಸರ ಶ್ರೀಮಂತವಾಗಿ ಬೆಳೆಯುತ್ತಿದೆ. ಆದರೆ ಇವೆಲ್ಲವುಗಳಿಂದ ವಿದ್ಯಾರ್ಥಿಯು ನಿಜವಾಗಿಯು ತೇಜೋಮಯನಾಗಿ ಬೆಳೆಯಬೇಕಾದರೆ ಅಂತರಂಗದ ಆತ್ಮಶಕ್ತಿಯ ವೀಕ್ಷಣೆ ಅನಿವಾರ್ಯ. ಒಂದು ದೃಷ್ಟಿಯಿಂದ ನೋಡಿದರೆ ಇದೇ ನಿಜವಾದ ವಿದ್ಯೆ ಎನ್ನುತ್ತಾರೆ. ಲೌಕಿಕ ವಿದ್ಯೆಯನ್ನು ಬಿಡದೆ ಇದರ ಜೊತೆಗೆ ಆತ್ಮಸಂಪತ್ತನ್ನು ತಂದುಕೊಡುವಂತಾಗಬೇಕೆಂಬುದನ್ನು ಅತ್ಯಂತ ಕಳಕಳಿಯಿಂದ ನಿರೂಪಿಸಿದ್ದಾರೆ.

ವ್ಯಕ್ತಿ ಸಮಾಜ ಜೀವಿಯಾಗಿ ಇಲ್ಲಿನ ಅನೇಕ ಸಮಸ್ಯೆಗಳನ್ನು ದಿಟ್ಟತನದಿಂದ ಎದುರಿಸಬೇಕು. ಸಾಮಾಜಿಕ ಅನ್ಯಾಯಗಳನ್ನು ಅಂಧಶ್ರದ್ಧೆಗಳನ್ನು ಪ್ರತಿಭಟಿಸಿ ಸಮಷ್ಟಿ ಹಿತಕ್ಕೆ ಕಾರಣವಾಗುವ ವೈಚಾರಿಕ ನಿಲುವನ್ನು ಬೆಳೆಸಿಕೊಳ್ಳಬೇಕು. ಯಾರ ಅಂಜಿಕೆಯು ಇಲ್ಲದೆ ನಿರಂಕುಶ ಮತಿಗಳಾಗಿ ಅದನ್ನು ಆಚರಣೆಗೆ ತಂದು ಆಳವಡಿಸಬೇಕು. ಇದನ್ನು ಕುವೆಂಪು ಅವರು ಬಹಳ ಕಟುವಾಗಿ ಹೇಳುತ್ತಾರೆ. ವಿದ್ಯಾಭ್ಯಾಸವು ನಮಗೆ ಸ್ವತಂತ್ರವಾದ ವಿಚಾರಶೀಲತೆಯು ನಿರಂಕುಶಮತಿಯನ್ನು ತಂದು ಕೊಡಬೆಕು. ಕುವೆಂಪು ವಿದ್ಯಾರ್ಥಿ ಜೀವನವನ್ನು ಒಂದು ತಪಸ್ಸು ಎಂದು ಕರೆದಿದ್ದಾರೆ. ಆದರೆ ಆ ತಪಸ್ಸು ದೇಹ ದಂಡನೆಯಯಾಗಲೀ, ಕಠಿಣವಾದ ಪರಿಶ್ರಮವಾಗಲೀ ಮಾಡುವುದಲ್ಲ. ವಿದ್ಯಾರ್ಥಿಯ ತಪಸ್ಸು ಆತನ ಅಧ್ಯಯನದಲ್ಲಿ ಏಕಾಗ್ರತೆಯಲ್ಲಿ ಸಂಯಮದಲ್ಲಿ ಧ್ಯಾನದಲ್ಲಿ ನಡೆನುಡಿಗಳಲ್ಲಿ ವ್ಯಕ್ತವಾಗಬೇಕು. ಪುಸ್ತಕಗಳಿಂದಲೂ, ವ್ಯಕ್ತಿಗಳಿಂದಲೂ, ಸಂಸ್ಥೆಗಳಿಂದಲೂ ನಾವು ಪಡೆಯುವ ಜ್ಞಾನ ಅನುಭವಕ್ಕೆ ಇಳಿದು ಆಚರಣೆಯಲ್ಲಿ ಆಳವಡಿಸಬೇಕು. ನಿಜವಾದ ಜ್ಞಾನವೆಂದರೆ ಕೇವಲ ಹೊರಗಿನಿಂದ ಪಡೆಯುವ ವಿಷಯ ಸಂಗ್ರಹಣೆಯಷ್ಟೇ ಅಲ್ಲ. ಅವುಗಳ ಮೌಲ್ಯವನ್ನು ಅರಿತು ಅಳವಡಿಸಿಕೊಂಡು ಜೀವನದಲ್ಲಿ ಪುಷ್ಟಿಯನ್ನು ಪಡೆಯುವುದು. ಮಾನವನ ವಿಕಾಸಕ್ಕೆ ನೆರವಾಗುವ ವಿದ್ಯೆಯನ್ನು ಕೊಡುವ ವಿದ್ಯಾಲಯಗಳೇ ನಿಜವಾದ ಜ್ಞಾನ ದೇಗುಲಗಳು. ಇವುಗಳಿಂದ ಹೊರ ಬರುವ ವಿದ್ಯಾರ್ಥಿಗಳು ನಿಜವಾದ ಜ್ಞಾನವನ್ನು ಪಡೆದು ಜೀವನದಲ್ಲಿ ಮುಂದೆ ಬಂದಾಗ ರಾಷ್ಟ್ರದ ಸರ್ವಾಂಗೀಣ ಅಭಿವೃದ್ಧಿ ಸಾಧ್ಯವಾಗುತ್ತದೆ.

ಶಿವರಾಮ ಕಾರಂತರಂತೆ ಕುವೆಂಪು ಅವರು ಶಿಕ್ಷಣ ವ್ಯವಸ್ಥೆಯಲ್ಲಿ ದೇಶೀಯ ಭಾಷೆಗೆ ಹೆಚ್ಚು ಒತ್ತನ್ನು ಕೊಡುತ್ತಾರೆ. ಹಲವಾರು ಭಾಷೆಗಳನ್ನು ಒಳಗೊಂಡ ಭಾರತದಂತಹ ದೇಶದಲ್ಲಿ ರೂಪಿಸಿಕೊಳ್ಳಬೇಕಾಗಿರುವ ಭಾಷಾನೀತಿಯು ಅಂತರಾಷ್ಟ್ರೀಯ ಅಥವಾ ರಾಷ್ಟ್ರೀಯ ಎಂಬ ಭ್ರಮೆಗೆ ಒಳಗಾಗಿ ಸಂಕುಚಿತವಾಗಬಾರದು. ಒಬ್ಬ ವ್ಯಕ್ತಿಯು ತನ್ನ ಪರಿಸರದಲ್ಲಿ ಪೂರ್ಣವಾದ ವಿಕಾಸವನ್ನು ಕಂಡುಕೊಳ್ಳುವಂತಾಗುವುದೇ ರಾಷ್ಟ್ರೀಯತೆಯ ಬೆಳವಣಿಗೆ. ಭಾಷೆ ಒಂದು ಸಾಧನ ಆದರೆ ಅದೇ ಕೊನೆಯ ಗುರಿಯಲ್ಲ. ಕೊನೆಯ ಗುರಿ ಇರುವುದು ವ್ಯಕ್ತಿ ಮತ್ತು ಸಮಾಜದ

ಸರ್ವಾಂಗೀಣ ಹಿತದಲ್ಲಿ, ಸರ್ವೋದಯ, ಸಮನ್ವಯ ದೃಷ್ಟಿಯು ಮತ, ಸಾಹಿತ್ಯ, ಸಾಮಾಜ, ರಾಜಕೀಯ, ಆರ್ಥಿಕ ಎಲ್ಲಾ ಕ್ಷೇತ್ರಗಳಲ್ಲಿ ವ್ಯಾಪಿಸಬೇಕು. ಸಮಾಜದ ಅತ್ಯಂತ ಕೆಳಮಟ್ಟದವನಿಗೂ ಜೀವನದಲ್ಲಿ ಮೇಲೆ ಬರುವ ಅವಕಾಶ ಒದಗಿಬರಬೇಕು. ನಿಜವಾದ ವಿದ್ಯಾಭ್ಯಾಸವು ಮಾನವನಿಗೆ ಪೂರ್ಣ ದೃಷ್ಟಿಯನ್ನು ತಂದು ಕೊಡಬೇಕೆಂದು ಕುವೆಂಪು ಅವರು ಸೂಚಿಸುತ್ತಾರೆ. ಒಟ್ಟಿನಲ್ಲಿ ಶಿಕ್ಷಣವನ್ನು ಕುರಿತ ಕುವೆಂಪು ಅವರ ಪ್ರತಿಪಾದನೆಯಲ್ಲಿ ಭಾಷೆ ವ್ಯಕ್ತಿಯ ವಿಕಾಸದ ಸರ್ವೋದಯಕ್ಕೆ ತಳಹದಿಯಾಗಿ ಶಿಕ್ಷಣವನ್ನು ನೋಡಿದ್ದಾರೆ.

ಶಿಕ್ಷಣಕ್ಕೆ ಸಂಬಂಧಿಸಿದಂತೆ ಗೋಪಾಲಕೃಷ್ಣ ಅಡಿಗರು ಹಲವಾರು ಲೇಖನಗಳನ್ನು ಬರೆದಿದ್ದಾರೆ. ಕನ್ನಡದ ಅಭಿಮಾನ, ನಮ್ಮ ಶಿಕ್ಷಣ ಪದ್ಧತಿಗೆ ಒಂದು ಗುರಿ ಇದೆಯೇ? ಶಿಕ್ಷಣ ಕ್ಷೇತ್ರದಲ್ಲಿ ಸುಧಾರಣೆ ಎಂತು? ಶಿಕ್ಷಣದ ಮಟ್ಟ ಇಳಿಯುತ್ತಿರುವುದಕ್ಕೆ ಕಾರಣವೇನು? ಪ್ರಜಾಪ್ರಭುತ್ವ ದಲ್ಲಿ ಶಿಕ್ಷಣ, ಶಿಕ್ಷಣ ಕ್ಷೇತ್ರದ ಸುಧಾರಣೆಗೆ ಕೆಲವು ಸೂಚನೆಗಳು, ನಮ್ಮ ವಿದ್ಯಾರ್ಥಿ ಪ್ರಪಂಚ ಹೀಗೆ ಮೊದಲಾದ ಲೇಖನಗಳಲ್ಲಿ ಶಿಕ್ಷಣವನ್ನು ಕುರಿತು ಚಿಂತಿಸಿರುವುದನ್ನು ಕಾಣಬಹುದು. ವಸಹಾತುಶಾಹಿ ಶಿಕ್ಷಣದ ಲೋಪದೋಷಗಳನ್ನು ಕುರಿತು ಚರ್ಚೆ ಮಾಡಿದ್ದಾರೆ. 'ಶಿಕ್ಷಣ ಕ್ಷೇತ್ರದ ಸುಧಾರಣೆಗೆ ಕೆಲವು ಸೂಚನೆಗಳು' ಎಂಬ ಲೇಖನದಲ್ಲಿ ಈ ಕುರಿತು ಹಲವಾರು ವಿಷಯಗಳನ್ನು ಚರ್ಚಿಸಿದ್ದಾರೆ. ನಾವು ಮೊಟ್ಟಮೊದಲು ಮಾಡಬೇಕಾಗಿರುವುದು ಶಿಕ್ಷಣ ಸಮಸ್ಯೆಗಳ ಮೇಲೆ ದೇಶದ ಗಮನವನ್ನು ಕೇಂದ್ರೀಕರಿಸುವಂತೆ ಮಾಡಬೇಕು. ಇರುವ ಸಮಸ್ಯೆಗಳೆಲ್ಲದಕ್ಕೂ ಮುಖ್ಯ ಸಮಸ್ಯೆ ಶಿಕ್ಷಣಕ್ಕೆ ಸಂಬಂಧಪಟ್ಟಿದ್ದು ಎಂದು ಮನವರಿಕೆ ಮಾಡುವುದು ಅತ್ಯಗತ್ಯ. ಶಿಕ್ಷಣ ಕ್ಷೇತ್ರದಲ್ಲಿ ನಿಜವಾಗಿ ತೊಡಗಿರುವವರು ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ಈ ಪ್ರಶ್ನೆಯನ್ನು ಎತ್ತಿಕೊಳ್ಳಬೇಕು. ಅನ್ಯಭಾಷೆ ಶಿಕ್ಷಣಕ್ಕೆ ಸಂಬಂಧಿಸಿದ ವಿಚಾರಗಳಿಗಾಗಿ ಮುಷ್ಕರ ಹೂಡುವುದು ಗಲಾಟೆ ನಡೆಸುವ ವಿದ್ಯಾರ್ಥಿಗಳು ಮಾತೃಶಿಕ್ಷಣ ಕ್ಷೇತ್ರದಲ್ಲಿ ಆಗಲೇಬೇಕಾದ ದೋಷಗಳ ನಿವಾರಣೆಗಾಗಿ ಚಳವಳಿಗಳನ್ನು ಮಾಡಬೇಕೆಂದು ಅಡಿಗರು ಹೇಳುತ್ತಾರೆ. ಈ ಪಠ್ಯಪುಸ್ತಕ ತೀರ ಅಪ್ರಬುದ್ಧ ಇದರ ಬದಲು ಒಳ್ಳೆಯ ಪಠ್ಯಪುಸ್ತಕವನ್ನು ಆಯ್ಕೆ ಮಾಡಬೇಕೆಂದು ವಿದ್ಯಾರ್ಥಿಗಳು ಎಲ್ಲಾದರೂ ಗಲಾಟೆ ಎಬ್ಬಿಸಿದ್ದು ಇದೆಯೇ? ಈ ಪುಸ್ತಕ ಭಂಡಾರದಲ್ಲಿ ತಕ್ಕಷ್ಟು ಪುಸ್ತಕಗಳಲ್ಲಿ ಕೂತು ಓದಲು ವ್ಯವಸ್ಥೆ ಇಲ್ಲ. ಅದನ್ನು ಒದಗಿಸುವ ತನಕ ನಾವು ಕಾಲೇಜಿಗೆ ಬರುವುದೇ ಇಲ್ಲ ಅದನ್ನು ಒದಗಿಸುವ ತನಕ ನಾವು ಕಾಲೇಜಿಗೆ ಬರುವುದೇ ಇಲ್ಲ ಎಂದು ಎಲ್ಲಾದರೂ ವಿದ್ಯಾರ್ಥಿಗಳು ಪ್ರತಿಭಟಿಸಿದ್ದು ಉಂಟೋ? ಎಂದು ಪ್ರಶ್ನಿಸುತ್ತಾರೆ. ಅಡಿಗರು ಮುಖ್ಯವಾಗಿ ವಿದ್ಯಾರ್ಥಿಗಳು ಯಾವುದೇ ಪ್ರತಿಭಟನೆಯನ್ನು ಚಳುವಳಿಯನ್ನು ಮಾಡಿದರೂ ಅವು ನಮ್ಮ ಶಿಕ್ಷಣಕ್ಕೆ ಸಂಬಂಧಿಸಿದಂತ ಚಳವಳಿಗಳು ಆಗಬೇಕು. ಸಮಸ್ಯೆಗೆ ಸಂಬಂಧಿಸಿದಂತೆ ಎಲ್ಲರನ್ನು ಅವರ ಗಮನಹರಿಸುವಂತೆ ಮಾಡಿ ಈ ಮೂಲಕ ಸಮಸ್ಯೆಗಳನ್ನು ಬಗೆಹರಿಸಿ ಶೈಕ್ಷಣಿಕ

ವ್ಯವಸ್ಥೆಯಲ್ಲಿ ಬದಲಾವಣೆ ತರಬೇಕೆಂದು ಅಡಿಗರು ಸೂಚನೆಯನ್ನು ನೀಡುತ್ತಾರೆ. ಆದರೆ ಶಿಕ್ಷಣದ ಸಮಸ್ಯೆಗಳನ್ನೇ ಬಗೆಹರಿಸುವ ಪ್ರವೃತ್ತಿಯನ್ನು ನಾವು ಬೆಳೆಸಿಕೊಂಡಿಲ್ಲ. ಅತ್ಯಂತ ನ್ಯಾಯವಾದ ಬೇಡಿಕೆಯು ಈಡೇರಬೇಕಾದರೆ ಗುಂಪು ಗಲಾಟೆ, ಮುಷ್ಕರ, ಹಿಂಸಾಚಾರ, ಸಾರ್ವಜನಿಕ ವಸ್ತುಗಳ ನಾಶ, ಜಾತಿವಾದದ ಉದ್ರೇಕ ಇವು ನಡೆಯದೆ ಸಾಧ್ಯವಾಗುವುದಿಲ್ಲ.

ತೇಜಸ್ವಿಯವರು ಸಹ ಕಾರಂತರಂತೆ ಪ್ರಾಥಮಿಕ ಶಿಕ್ಷಣದಿಂದಲೇ ಮಕ್ಕಳಿಗೆ ಇಂಗ್ಲಿಷ್ ಮಾಧ್ಯಮವನ್ನು ಕಲಿಸುವುದನ್ನು ಕಟುವಾಗಿ ಟೀಕಿಸುತ್ತಾರೆ.

> ಮಗುವಿಗೆ ಒಂದನೇ ತರಗತಿಯಿಂದಲೇ ಆಂಗ್ಲ ಭಾಷೆಯಲ್ಲಿ ಶಿಕ್ಷಣವನ್ನು ಕಲಿಸುವುದರಿಂದ ಆ ಮಗುವಿನ ಮಾನಸಿಕ ಬಗ್ಗೆ ತಜ್ಞ ವೈದ್ಯರಿಂದ ಮಾಹಿತಿ ಪಡೆದುಕೊಳ್ಳಬೇಕು. ಇಂಗ್ಲಿಷ್ ಮೇಲಿನ ವ್ಯಾಮೋಹದಿಂದ ಬಹುತೇಕ ಜನ ಇಂಗ್ಲಿಷ್ ಮಾಧ್ಯಮದ ಬೆನ್ನುಹತ್ತಿದ್ದಾರೆ ಎಂಬುದು ಸರಿ ಅಲ್ಲ. ಇವತ್ತು ಬಹುತೇಕ ಸರ್ಕಾರಿ ಶಾಲೆಗಳು ದುಸ್ಥಿತಿಯಲ್ಲಿವೆ.[೧೫]

ಹಲವಾರು ಜನರು ತಮ್ಮ ಮಕ್ಕಳನ್ನು ಆಂಗ್ಲ ಶಾಲೆಗಳಿಗೆ ಸೇರಿಸುತ್ತಿರುವುದು ಕೇವಲ ಇಂಗ್ಲಿಷ್ ಭಾಷೆಯ ಸರ್ಕಾರಿ ಶಾಲೆಗಳ ದುಸ್ಥಿತಿಯು ಪ್ರಮುಖ ಕಾರಣವಾಗಿದೆ. ಹೆಚ್ಚಿನ ಸರ್ಕಾರಿ ಶಾಲೆಗಳು ಒಳ್ಳೆಯ ವಾತಾವರಣದಿಂದ ಕೂಡಿಲ್ಲ. ಶಿಕ್ಷಕರು ಅಭಾವವು ಇದಕ್ಕೆ ಕಾರಣವಾಗಿದೆ. ಚುನಾವಣೆಯ ಸಂದರ್ಭದಲ್ಲಿ ಮತಗಟ್ಟೆಗಳಲ್ಲಿ ಕೆಲಸ ಮಾಡುವುದು, ಜನರ ಸರ್ವೆ ಮೊದಲಾದ ಕೆಲಸಗಳು, ಶಿಕ್ಷಕರ ಮೇಲೆ ಹಾಕಿರುವುದರಿಂದ ಅವರು ಮಕ್ಕಳಿಗೆ ಸರಿಯಾದ ಪಾಠವನ್ನು ಹೇಳಿಕೊಡುವಲ್ಲಿ ವಿಫಲನಾಗುತ್ತಾರೆ. ಇದಕ್ಕೆ ಸರ್ಕಾರವೇ ಹೊಣೆಯಾಗಿದೆ.

ಇಂದಿನ ಶಿಕ್ಷಣವು ಕೇವಲ ಯಾಂತ್ರಿಕವಾಗಿದೆ. ಮಕ್ಕಳ ಸ್ವಂತಬುದ್ಧಿ, ವಿಚಾರಶೀಲತೆಗೆ ಸ್ಥಾನವೇ ಇಲ್ಲದಂತಾಗಿದೆ. ಪರೀಕ್ಷೆಯಲ್ಲಿ ಉತ್ತೀರ್ಣರಾಗಲು ಮಾಹಿತಿಯ ನೆನಪು ಇಟ್ಟುಕೊಳ್ಳಲು ಮಾತ್ರ ಸೀಮಿತವಾಗಿದೆ. ಮನೆಯಿಂದ ಶಾಲೆಗೆ ಸೇರುವ ವಿದ್ಯಾರ್ಥಿಗಳಿಗೆ ಶಾಲೆಯಲ್ಲಿ ಕಲಿಸುವ ವಿಷಯಗಳೆಲ್ಲವು ಹೊಸತೇ ಆಗಿರುತ್ತವೆ. ಹೀಗಿರುವಾಗ ಸಾಮಾನ್ಯವಾಗಿ ವಿದ್ಯಾರ್ಥಿಗೆ ಬೇಸರ, ಜಿಗುಪ್ಸೆ, ಉಂಟಾಗುತ್ತದೆ. ಇಂದು ಸಾಮಾಜಿಕ ಪಿಡುಗಿನಂತೆ ಕಾಣಿಸುವ ವಿದ್ಯಾರ್ಥಿಗಳ ಅಶಿಸ್ತು ಮತ್ತು ಕಲಿಕೆಯ ನಿರಾಸಕ್ತಿಗೆ ಮೂಲಕಾರಣ ಮಕ್ಕಳಲ್ಲಿ ಶಿಕ್ಷಣದ ಕುರಿತು ಆಸಕ್ತಿ ಬೆಳೆಯದೆ ಇರುವುದು ಮುಖ್ಯ ಕಾರಣವಾಗಿದೆ. ಮಕ್ಕಳ ಶಿಕ್ಷಣವು ಪ್ರಾಥಮಿಕ ಹಂತದಿಂದಲೇ ಆರಂಭವಾಗುವುದರಿಂದ ಇಲ್ಲಿ ಕಲಿಸುವ ಶಿಕ್ಷಣವನ್ನು ಕುರಿತು ಕಾರಂತರು ಹಲವಾರು ಸಲಹೆಗಳನ್ನು ನೀಡುತ್ತಾರೆ.

ಪಠ್ಯಕ್ರಮವು ಆಯಾ ವಯಸ್ಸಿನ ಬಾಲಕರಿಗೆ, ಬಾಲಕಿಯರಿಗೆ ಅರ್ಥವಾಗುವಂತಿರಬೇಕು. ಬೆಳೆದ ಮೇಲೆ ಬೇಕಾಗಬಹುದೆಂಬುದನ್ನು ಚಿಕ್ಕವಯಸ್ಸಿನಲ್ಲಿಯೇ ಮಕ್ಕಳಿಗೆ ಹೇಳುವ ಪ್ರಯತ್ನ ಮಾಡಬಾರದು. ಮನಶ್ಶಾಸ್ತ್ರದ ದೃಷ್ಟಿಯಿಂದ ಪ್ರಾಥಮಿಕ ಪಠ್ಯವಿಷಯಗಳ ರೂಪ ನಿರ್ಧಾರ ವಾಗಬೇಕು. ವಿದ್ಯಾರ್ಥಿಯ ಅಲ್ಪಾನುಭವಾದ ಮಿತಿಯನ್ನರಿತು ಅವನ ಅನುಭವದ ಸೀಮೆಯನ್ನು, ಅನುಭವವಿಲ್ಲದ ಕ್ಷೇತ್ರಕ್ಕೆ ಜತೆಗೊಳಿಸಬೇಕು. ಆ ಕ್ಷೇತ್ರದ ಕುತೂಹಲವನ್ನು ಮಕ್ಕಳಲ್ಲಿ ಹೆಚ್ಚಿಸಬೇಕು. ತನಗೆ ತಿಳಿಯದ್ದನ್ನು ತಾನು ತಿಳಿಯಬೇಕು ಎಂಬ ಆಸಕ್ತಿ ಪ್ರೇರಣೆ ಶಿಕ್ಷಣಕ್ರಮದಿಂದ ಬರಬೇಕು. ಮನಶ್ಶಾಸ್ತ್ರ ತಜ್ಞರಿಂದ ಸಲಹೆಗಳನ್ನು ಪಡೆದು ಸೂಕ್ಷ್ಮವಾಗಿ ಪರಿಶೀಲಿಸಿ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೆ ತರಬೇಕು. ಆ ರೀತಿಯ ಪ್ರಯತ್ನಗಳು ಎಲ್ಲಿ ಆಗಿವೆ ಮತ್ತು ಹೇಗೆ ಆಗಿವೆ ಎಂಬುದನ್ನು ಗಮನಿಸಿ ನಮ್ಮ ಪರಿಸ್ಥಿತಿಯಲ್ಲಿ ಅವನ್ನು ಬಳಸುವ ಸಾಧ್ಯತೆಯೆಷ್ಟು ಎಂಬ ವಿಚಾರಗಳು ಬೇಕು. ಅಂಥ ವಿಚಾರಗಳನ್ನು ಪ್ರಯೋಗಕ್ಕೆ ಇಳಿಸುವ ಮನೋಧೈರ್ಯ ಬೇಕು. ಶಿಕ್ಷಣಕೊಡುವ ಉಪಾಧ್ಯಾಯರು ಮಕ್ಕಳನ್ನು ಪ್ರಚೋದಿಸಬೇಕು ಪಠ್ಯಪುಸ್ತಕದಲ್ಲಿರುವುದ ಕ್ಕಿಂತಲೂ ಹೆಚ್ಚಿನ ಬುದ್ಧಿ ವಿಕಾಸ ಸಂಪತ್ತು ಶಿಕ್ಷಕರು ಬೆಳೆಸಿಕೊಳ್ಳಬೇಕು. ಜ್ಞಾನವನ್ನು ಬೆಳೆಯಿಸಬಲ್ಲ ಗ್ರಂಥಗಳೂ, ವಿವಿಧ ಸಲಕರಣೆಗಳನ್ನೂ, ಮುಕ್ತವಾಗಿ ಕಲಿಯುವ ವಾತಾವರಣವನ್ನು ನಿರ್ಮಾಣ ಮಾಡಬೇಕು.

ಪ್ರಾಥಮಿಕ ಶಿಕ್ಷಣವೆಲ್ಲವೂ ಪಠ್ಯಪುಸ್ತಕಗಳ ಮೂಲಕ ಸಾಗಬೇಕಾಗಿದೆ. ಅಂತಹ ಪುಸ್ತಕ ಗಳಲ್ಲಿರುವ ಭಾಷೆ ನಿರಾಕರ್ಷವಾಗಿದೆ. ಪಾಠವನ್ನು ವಿವರಿಸುವುದೆಂದರೆ ವಿಷಯಗಳನ್ನು ಹೆಸರಿಸಿ ಬರೆದವನ ತೀರ್ಮಾನ ಹೇಳುವುದು. ಕಷ್ಟದ ಶಬ್ದಗಳಿಗೆ ಅರ್ಥವನ್ನು ಹೇಳುವುದು ಪ್ರಸ್ತುತ ಶಿಕ್ಷಣ ವ್ಯವಸ್ಥೆಯಲ್ಲಿ ಕಾಣಬಹುದು. ಉಪಾಧ್ಯಾಯರ ಪಾಲಿಗೆ ಯೋಗ್ಯ ಪಠ್ಯಪುಸ್ತಕಗಳ ಆಯ್ಕೆಯ ಪ್ರಶ್ನೆಯೇ ಉಳಿದಿಲ್ಲ. ವಿದ್ಯಾ ಇಲಾಖೆಯವರು ಹೊರಡಿಸುವ ಪಠ್ಯಪುಸ್ತಕಗಳೇ ವೇದ ಗ್ರಂಥಗಳಾಗಿವೆ. ಪುಸ್ತಕದಲ್ಲಿರುವ ವಿಷಯಗಳನ್ನು ಕಂಠಪಾಠ ಮಾಡಿ ನೆನಪಿಗೆ ಬಂದದ್ದನ್ನು ಪರೀಕ್ಷೆಯ ವೇಳೆಯಲ್ಲಿ ವಿದ್ಯಾರ್ಥಿಗಳಿಂದ ಬರೆಸಿ ತಪ್ಪು ಸರಿ ಎಂದು ಎಣಿಕೆ ಹಾಕುವುದಷ್ಟೇ ನಮ್ಮ ಇಂದಿನ ಶಿಕ್ಷಣ ಕ್ರಮವಾಗಿದೆ. ಪಠ್ಯಪುಸ್ತಕಗಳಲ್ಲಿ ಬರೆದ ತಪ್ಪನ್ನು ಸಹ ವಿದ್ಯಾರ್ಥಿಗಳು ಇದ್ದಕ್ಕಿದ್ದಂತೆ ಒಪ್ಪಿಸಿದರೆ ನೂರಕ್ಕೆ ನೂರು ಅಂಕಗಳನ್ನು ಗಳಿಸಬಹುದು. ವಿಶ್ವವಿದ್ಯಾಲಯಗಳು ಅವುಗಳ ನೇತೃತ್ವದಲ್ಲಿ ನಡೆಯುವ ಕಾಲೇಜುಗಳೂ ಕೂಡ ಪ್ರಾಥಮಿಕ ಮತ್ತು ಹೈಸ್ಕೂಲು ವಿದ್ಯಾಭ್ಯಾಸದ ಸ್ವರೂಪವನ್ನು ಮುಂದುವರಿಸದಂತೆ ಕಾಣುತ್ತದೆ. ಕಾಲೇಜಿನಲ್ಲಿ ತಮಗೆ ಬೇಕಾಗು ವಷ್ಟು ಗ್ರಂಥಗಳು ಸಿಕ್ಕರೂ ವಿದಾರ್ಥಿಗಳಲ್ಲಿ ಓದುವ ಅಭಿರುಚಿ ಬೆಳೆದಿಲ್ಲ. ಶಿಕ್ಷಣದ ಗುಣಮಟ್ಟ ತಗ್ಗಲು ಇದು ಒಂದು ಕಾರಣವಾಗಿದೆ. ಇಂದು ಕಲಿಯುವ ವಿದ್ಯಾರ್ಥಿ ಮುಂದೆ ತನ್ನ ಜೀವನದಲ್ಲಿ ಬದುಕನ್ನು ನಿರ್ವಹಿಸಲು ಸಮರ್ಥನಾಗಬೇಕು ಅವನ ಬದುಕು

ನಡೆಯುವುದಕ್ಕೆ ಬೇಕಾದಂಥ ಸಂಪಾದನೆ ಮಾಡಬೇಕು. ಈ ವಿಷಯದ ಯೋಚನೆ ನಮಗೆ ಬೇಡವೆ ಎಂದು ಕಾರಂತರು ಪ್ರಶ್ನಿಸುತ್ತಾರೆ. ಹೈಸ್ಕೂಲು ಶಿಕ್ಷಣದ ಮುಂದಿನ ಕ್ಷೇತ್ರ ವಿಶ್ವವಿದ್ಯಾಲಯದ ಕ್ಷೇತ್ರ; ಹೀಗಿರುವಾಗ ಒಬ್ಬ ವಿದ್ಯಾರ್ಥಿಯು ವಿಶ್ವವಿದ್ಯಾಲಯಕ್ಕೆ ಬರುವ ತನಕ ಏನು ಮಾಡಬೇಕು ಎಂಬುದನ್ನು ಯೋಚಿಸಬೇಕು. ಮುಂದಿನ ಶತಮಾನ ಹೇಗೆ ರೂಪುಗೊಳ್ಳುತ್ತಿದೆ ಅದರಲ್ಲಿ ಏನೆಲ್ಲಾ ಬದಲಾವಣೆಗಳು ನಡೆಯಲಿವೆ. ವಿಜ್ಞಾನ ತಂತ್ರಜ್ಞಾನ ಕ್ಷೇತ್ರಗಳು ಹೇಗೆ ವಿಸ್ತರಿಸುತ್ತಿವೆ ಎಂಬ ವಿಷಯಗಳನ್ನು ಕುರಿತು ವಿಸ್ತಾರವಾದ ಸ್ಪಷ್ಟವಾದ ಪರಿಚಯವನ್ನು ನಾವು ಮಾಡಿಕೊಂಡು ಪ್ರಾಥಮಿಕ ಹಂತಂದಿದಲೇ ತಯಾರಿ ಮಾಡಿಕೊಳ್ಳದೆ ಹೋದರೆ ನಮ್ಮಿಂದ ಮುಂದೆ ಏನು ಸಾಧನೆ ಮಾಡಲು ಸಾಧ್ಯವಾಗುವುದಿಲ್ಲ.

ಅಂದಿನ ಬ್ರಿಟಿಷ್ ಮಾದರಿಯ ಶಾಲೆಗಳು ನಮ್ಮ ದೇಶಕ್ಕೆ ಬರುವ ಮುಂಚೆ ಶಿಕ್ಷಣ ಕ್ರಮದಲ್ಲಿ ವಿಷಯಗಳ ಸಂಖ್ಯೆ ಮಿತವಾಗಿತ್ತು. ಗುರುಗಳು ಹೇಳುವ ಪ್ರತಿಯೊಂದು ವಿಷಯವನ್ನು ಕಂಠಪಾಠ ಮಾಡುವುದು ಶಿಕ್ಷಣದ ವಿಧಾನವಾಗಿತ್ತು. ಇಂತಹ ಶಿಕ್ಷಣ ಕ್ರಮದಿಂದ ವಿದ್ಯಾರ್ಥಿಯ ಸ್ಮರಣ ಶಕ್ತಿ ಬೆಳೆಯಬಹುದೆ ಹೊರತು ಅವರ ಮನಸ್ಸು ವಿಕಾಸಗೊಳ್ಳಲಾರದು. ವಸಾಹತು ಶಿಕ್ಷಣ ಬಂದ ಮೇಲೆ ಕಲಿಯುವ ವಿಷಯಗಳ ಸಂಖ್ಯೆ ಹೆಚ್ಚಾಯಿತು. ಆದರೂ ಶಿಕ್ಷಣದ ಕ್ರಮ ಬದಲಾಗಿಲ್ಲ. ಪಠ್ಯಪುಸ್ತಕಗಳಲ್ಲಿ ಇರುವ ಮಾಹಿತಿಯನ್ನು ಕಂಠಪಾಟ ಮಾಡಿ ಒಪ್ಪಿಸುವ ಪದ್ಧತಿಯು ಇಂದಿಗೂ ಮುಂದುವರಿದಿದೆ. ಸ್ವಾತಂತ್ರ್ಯ ಬಂದು ಹಲವಾರು ವರ್ಷಗಳು ಕಳೆದರೂ ಶಿಕ್ಷಣ ಸಂಪೂರ್ಣವಾಗಿ ಬದಲಾಗಿಲ್ಲ. ಹಳೆಯ ಪದ್ಧತಿಯನ್ನು ಶಿಕ್ಷಣದಲ್ಲಿ ಈಗಲೂ ಮುಂದುವರಿಸುತ್ತಿದ್ದಾರೆ. ಇಲ್ಲಿ ಸ್ಮರಣ ಶಕ್ತಿಯೊಂದೇ ಶಿಕ್ಷಣದಕ್ರಮವಾಗಿದೆ. ಶಿವರಾಮ ಕಾರಂತರು ಈ ಪದ್ಧತಿಯನ್ನು ಖಂಡಿಸುತ್ತಾರೆ. ಇಂತಹ ಶಿಕ್ಷಣ ವ್ಯವಸ್ಥೆಯ ವಿರುದ್ಧವಾಗಿ ಕಾರಂತರೇ ಪಠ್ಯಪುಸ್ತಕಗಳನ್ನು ಬರೆಯುತ್ತಾರೆ ಹಲವಾರು ಶೈಕ್ಷಣಿಕ ಪ್ರಯೋಗಗಳನ್ನು ಕೈಗೊಂಡರು. ಈ ಪ್ರಯೋಗಗಳನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಶಿವರಾಮ ಕಾರಂತ, ಸ್ಮೃತಿ ಪಟಲದಿಂದ, ಭಾಗ-೧, ೨೦೧೦, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ಪು. ೩೭೭

೨. ಶಿವರಾಮ ಕಾರಂತ, ಹುಚ್ಚು ಮಸ್ಸಿನ ಹತ್ತು ಮುಖಗಳು, ೧೯೮೪, ಅಕ್ಷರ ಪ್ರಕಾಶನ, ಸಾಗರ, ಪು. ೨೧

೩. ಶಿವರಾಮ ಕಾರಂತ, ಸ್ಮೃತಿ ಪಟಲದಿಂದ, ಭಾಗ-೧, ೨೦೧೦, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ಪು. ೩೮೨

೪. ಶಿವರಾಮ ಕಾರಂತ, ಹುಚ್ಚು ಮನಸ್ಸಿನ ಹತ್ತು ಮುಖಗಳು, ೧೯೮೪, ಅಕ್ಷರ ಪ್ರಕಾಶನ, ಸಾಗರ, ಪು. ೨೩

೫. ಶಿವರಾಮ ಕಾರಂತ, ಸ್ಮೃತಿ ಪಟಲದಿಂದ, ಭಾಗ-೧, ೨೦೧೦, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ಪು. ೩೯೦

೬. ಮಾಲಿನಿ ಮಲ್ಯ ಬಿ., ಶಿವರಾಮ ಕಾರಂತರ ಲೇಖನಗಳು, ಭಾಷೆ, ಶಿಕ್ಷಣ, ಸಂಸ್ಕೃತಿ, ಸಂಶೋಧನೆ ಸಂಪುಟ–೨, ೧೯೯೪, 'ಇಂದಿನ ಶಿಕ್ಷಣ' ಪು. ೬೭

೭. ಅದೇ., 'ಮಕ್ಕಳ ಸಾಹಿತ್ಯ' ಪು. ೧೫೫

೮. ಅದೇ., 'ಇಂದಿನ ಶಿಕ್ಷಣವಲ್ಲ; ಶಿಶು ಹತ್ಯೆ' ಪು. ೭೧

೯. ಅದೇ., ಕನ್ನಡ ಭಾಷಾಪಾಠಗಳು, ಪು. ೭೭

೧೦. ಅದೇ., 'ನಮ್ಮ ಶಾಲೆಗಳು' ಪು. ೮೧

೧೧. ಅದೇ., 'ಮಕ್ಕಳ ನಗು' ಪು. ೮೩

೧೨. ಅದೇ., 'ನಮ್ಮ ಶಾಲೆಗಳು' ಪು. ೭೯

೧೩. ಅದೇ., 'ಮಕ್ಕಳ ನಗು' ಪು. ೮೧

೧೪. ಅದೇ., 'ಇಂದಿನ ಶಿಕ್ಷಣ' ಪು. ೮೧

೧೫. ಪೂರ್ಣಚಂದ್ರ ತೇಜಸ್ವಿ, ೨೦೧೨, ಹೊಸ ವಿಚಾರಗಳು, ಪುಸ್ತಕ ಪ್ರಕಾಶನ, ಮೈಸೂರು. ಪು. ೨೯೩

ಅಧ್ಯಾಯ ನಾಲ್ಕು

# ಶಿವರಾಮ ಕಾರಂತರ ಶೈಕ್ಷಣಿಕ ಪ್ರಯೋಗಗಳು

೪.೧. ಮಕ್ಕಳ ಕೂಟ

೪.೨. ಬಾಲವನ

೪.೩. ಮಕ್ಕಳ ಪಠ್ಯಪುಸ್ತಕಗಳು

೪.೪. ಮಕ್ಕಳ ನಾಟಕಗಳು

೪.೫. ಮಕ್ಕಳ ಗದ್ಯಕೃತಿಗಳು

೪.೬. ವಯಸ್ಕರ ಶಿಕ್ಷಣ

೪.೭. ಪ್ರವಾಸ ಸಾಹಿತ್ಯ

೪.೮. ವಿಶ್ವಕೋಶಗಳು

## ಅಧ್ಯಾಯ ನಾಲ್ಕು

# ಶಿವರಾಮ ಕಾರಂತರ ಶೈಕ್ಷಣಿಕ ಪ್ರಯೋಗಗಳು

ಶಿವರಾಮ ಕಾರಂತರು ತಮ್ಮ ಕಾಲದ ವಿದ್ಯಾಭ್ಯಾಸವನ್ನು ಪಡೆದುಕೊಂಡು ಅದರ ಕುಂದುಕೊರತೆಗಳನ್ನು ತಿಳಿದಿದ್ದರು. ಹಲವಾರು ಕೃತಿಗಳನ್ನು ಓದುವುದರ ಮೂಲಕ, ಮತ್ತು ದೇಶ ವಿದೇಶಗಳ ಸುತ್ತಾಟದಿಂದ ಹಲವಾರು ಶೈಕ್ಷಣಿಕ ಸಂಸ್ಥೆಗಳ ಪ್ರಭಾವದಿಂದ, ಶಿಕ್ಷಣ ಚಿಂತನೆಯ ಸತತ ಅಭ್ಯಾಸದಿಂದ ಕೆಲ ಪ್ರಯೋಗಗಳನ್ನು ನಡೆಸಿದರು. ಬಾಲವನ, ದಸರಾ ನಾಡಹಬ್ಬ, ಮಕ್ಕಳ ಕೂಟ ವಿವಿಧ ಶೈಕ್ಷಣಿಕ ಪ್ರಯೋಗಗಳನ್ನು ಕೈಗೊಂಡರು. ಈ ಪ್ರಯೋಗ ಶೀಲತೆ ಮುಂದುವರಿದು ಅದು ಮಕ್ಕಳ ಮತ್ತು ವಯಸ್ಕರ ಶಿಕ್ಷಣಕ್ಕೂ ಪಠ್ಯಪುಸ್ತಕಗಳನ್ನು ರೂಪಿಸುವವರೆಗೆ ಕ್ರಿಯಾಶೀಲವಾಗಿತ್ತು. ಕನ್ನಡದಲ್ಲಿ ವೈಜ್ಞಾನಿಕ ವಿಚಾರ ಬರವಣಿಗೆಗಳಿಗೆ ಅವರು ಸಲ್ಲಿಸಿದ ಕೊಡುಗೆ ಅಪಾರವಾದುದು. ಅವರು ಮಕ್ಕಳಿಗಾಗಿ ಸಿದ್ಧಗೊಳಿಸಿದ ಬಾಲ ಪ್ರಪಂಚ ಮೂರು ಸಂಪುಟ, ವಿಜ್ಞಾನ ಪ್ರಪಂಚ ನಾಲ್ಕು ಸಂಪುಟ, ಗೃಹ ವಿಜ್ಞಾನ, ಸಾಮಾನ್ಯ ವಿಜ್ಞಾನ, ಹೊಸಗನ್ನಡ ಪಾಠ ಮಾಲೆ (ಎಂಟು ಭಾಗಗಳು), ಸಿರಿಗನ್ನಡ ಪಾಠಮಾಲೆ (ಏಳು ಭಾಗಗಳು), ಚಿತ್ರಮಯ ದಕ್ಷಿಣ ಕನ್ನಡ, ಚಿತ್ರಮಯ ದಕ್ಷಿಣ ಹಿಂದೂಸ್ಥಾನ, ಜನಪ್ರಿಯ ಭೂಗೋಳ ಗ್ರಂಥಗಳನ್ನು ಮತ್ತು ಮಕ್ಕಳ ಪಠ್ಯ ಪುಸ್ತಕಗಳನ್ನು ಬರೆದಿದ್ದಾರೆ.

ಶಿವರಾಮ ಕಾರಂತರ ಮಹತ್ವದ ಚಟುವಟಿಕೆಗಳಲ್ಲಿ ಶಿಕ್ಷಣ ರಂಗದ ಪ್ರಯೋಗಗಳು ವಿಶೇಷವಾಗಿವೆ. ಸುಮಾರು ಮೂವತ್ತರ ದಶಕದಲ್ಲಿ ಹಲವಾರು ಶೈಕ್ಷಣಿಕ ಪ್ರಯೋಗಗಳನ್ನು

ಮಾಡಿದ್ದಾರೆ. ಪ್ರಪ್ರಥಮವಾಗಿ ೧೯೩೧ರಲ್ಲಿ ಉಪ್ಪಿನಂಗಡಿಯಲ್ಲಿ ನಡೆಸಿದ ಮಕ್ಕಳ ಕೂಟವು ಮಕ್ಕಳ ಕೂತುಹಲ, ಆಸಕ್ತಿ, ಪ್ರತಿಭೆಗಳ ಮುಕ್ತ ಪ್ರದರ್ಶನಕ್ಕೆ ಅವಕಾಶ ಒದಗಿಸಿತು. ಆಗಿನ ಕಾಲದಲ್ಲಿ ಇದು ವಿಶಿಷ್ಟವಾದ ಸಮ್ಮೇಳನವಾಗಿತ್ತು. ಮಕ್ಕಳ ಕೂಟ, ಮಕ್ಕಳ ಉತ್ಸವ, ಮಕ್ಕಳೊಂದಿಗಿನ ನಿಕಟ ಸಂಪರ್ಕ, ಅಧ್ಯಾಪಕರೊಂದಿಗಿನ ನಿಕಟ ಸಂಪರ್ಕ ಮುಂತಾದವುಗಳಿಂದ ದೊರೆತ ಪ್ರತಿಕ್ರಿಯೆಗಳಿಂದ ಉತ್ತೇಜಿತರಾದ ಕಾರಂತರು, ೧೯೩೫ರಲ್ಲಿ ಬಾಲವನ ಎಂಬ ಮಾದರಿ ಶಾಲೆಯನ್ನು ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರಿನಲ್ಲಿ ಸ್ಥಾಪಿಸಿದರು. ಆಟದ ಮೂಲಕ ಪಾಠವನ್ನು ಕಲಿಸುವ ಯೋಜನೆ ಇದಾಗಿತ್ತು. ಈ ಶಾಲೆಯಲ್ಲಿ ಮಕ್ಕಳಿಗೆ ಅನ್ನ ಬಟ್ಟೆಯನ್ನು ಕೊಟ್ಟು ವಸತಿ ಸೌಕರ್ಯಗಳನ್ನು ಒದಗಿಸಿ ಶಿಕ್ಷಣವನ್ನು ನೀಡಲಾಗುತ್ತಿತ್ತು. ಕಾರಂತರು, ಮಕ್ಕಳ ಮನಸ್ಸಿನ ಲವಲವಿಕೆಯನ್ನು ಹೆಚ್ಚಿಸಲು ಶಾಲೆಯ ಆವರಣದಲ್ಲಿಯೇ ಪ್ರಾಣಿ ಸಂಗ್ರಹಾಲಯವನ್ನು ಸ್ಥಾಪಿಸಿದ್ದರು. ಇಲ್ಲಿ ವಾಕ್ಯವನ್ನು ಓದುವುದರಿಂದ ಶಬ್ದ ಮತ್ತು ಅರ್ಥಗಳ ಜ್ಞಾನವುಂಟಾಗುವುದಕ್ಕೆ ಬೇಕಾಗುವ ಚಿತ್ರ ಮತ್ತು ಬರಹಗಳನ್ನು ಒದಗಿಸಿದರು. ಮಕ್ಕಳ ಆಟಕ್ಕಾಗಿ ಇಳಕಲು ರೈಲು ಮೊದಲಾದವನ್ನು ಹಾಕಿಸಿದ್ದರು. ವಸತಿ ಗೃಹವನ್ನು ಏರ್ಪಾಟು ಮಾಡಿಸಿದ್ದರು.

ಪುತ್ತೂರಿನ ಸುತ್ತ ಮುತ್ತಲಿರುವ ಹಳ್ಳಿಗಳಲ್ಲಿ ಮಾತ್ರ ಪ್ರಯೋಗಗಳನ್ನು ಕೈಗೊಳ್ಳುವ ಕಾರಂತರನ್ನು ಮಂಗಳೂರಿನ ಶಾಲೆಯವರು ತಮ್ಮ ಶಾಲೆಗೆ ಬಂದು ಶಿಕ್ಷಣ ಪ್ರಯೋಗಗಳನ್ನು ಮಾಡಲು ಆಮಂತ್ರಣ ಕೊಟ್ಟರು. ಇದರಿಂದ ಹಲವಾರು ವಿದ್ಯಾರ್ಥಿಗಳಿರುವ ಶಾಲೆಯಲ್ಲಿ ಏನಾದರೂ ಹೊಸ ಹೊಸ ಪ್ರಯೋಗಗಳನ್ನು ಮಾಡಬಹುದೆಂದು ಮಂಗಳೂರಿನ ಪ್ರೌಢಶಾಲೆಗೆ ಪ್ರತಿ ವಾರಕ್ಕೆ ಎರಡು ಮೂರು ದಿನಗಳು ಕಾಲ ಭೇಟಿ ನೀಡಿ ಉಪಾಧ್ಯಾಯರಿಗೆ ಶಿಕ್ಷಣದ ಹೊಸ ದಾರಿಗಳನ್ನು ತೋರಿಸುತ್ತಿದ್ದರು. ನಮ್ಮ ದೇಶದ ಇತಿಹಾಸವನ್ನು ಸಂಸ್ಕೃತಿಯಲ್ಲಿ ತೋರಿಸುವ ಪ್ರಯತ್ನವನ್ನು ಮಾಡಿದರು. ಅದಕ್ಕೆ ಬೇಕಾದ ಪುಸ್ತಕಗಳನ್ನು, ಚಿತ್ರಗಳನ್ನು ಕಲ್ಪಿಸಿಕೊಟ್ಟರು.

ಭೂಗೋಳ, ಗಣಿತ, ವಿಜ್ಞಾನ, ಭಾಷಾ ಪಾಠ ಮೊದಲಾದವನ್ನು ಹೊಸ ಮಾದರಿಯಲ್ಲಿ ಹೇಳಲು ಹಲವಾರು ಪ್ರಯೋಗಗಳನ್ನು ನಡೆಸಿದರು. ಈ ಪ್ರಯೋಗಕ್ಕೆ ಮುಖ್ಯವಾಗಿತ್ತು. ಉಪಾಧ್ಯಾಯರ ಶ್ರಮ ಮತ್ತು ಉತ್ಸಾಹ ಮಕ್ಕಳಲ್ಲಿ ಜ್ಞಾನದ ಕುತೂಹಲವನ್ನು ಹೆಚ್ಚಿಸಿ ಶಿಕ್ಷಣ ಕೊಡುವುದು ಅತೀ ಮುಖ್ಯವಾದ ಮಾರ್ಗವಾಗಿತ್ತು. ಸುತ್ತಲಿನ ಪ್ರಕೃತಿಯನ್ನು ನೋಡುವ ಅರ್ಥಮಾಡಿಕೊಳ್ಳುವ ಅದರ ಮೂಲಕವಾಗಿಯೇ ಕಲಿಯುವ ಅವಕಾಶಗಳನ್ನು ಕಾರಂತರು ಕಲ್ಪಿಸಿದ್ದರು.

ವಸಾಹತುಶಾಹಿ ಕಾಲದ ನೀರಸವಾದ ಶಿಕ್ಷಣವು ಬುದ್ಧಿವಂತ ಮಕ್ಕಳನ್ನೂ ಸಹ ಅಪ್ರಯೋಜಕರನ್ನಾಗಿ ಮಾಡುವ ಶಾಲೆಗಳನ್ನು, ಅಧ್ಯಾಪಕರನ್ನು ಕಂಡ ಕಾರಂತರ ಅತೃಪ್ತಿಯೇ ಶೈಕ್ಷಣಿಕ ಕ್ಷೇತ್ರದಲ್ಲಿ ಹೊಸ ಯೋಜನೆಗಳನ್ನು ಪ್ರಯೋಗಗಳನ್ನು ಕೈಗೊಳ್ಳಲು ಕಾರಣವಾಯಿತು. ಶಿವರಾಮ ಕಾರಂತರು ಪುತ್ತೂರು ತಾಲ್ಲೂಕಿನ ಹಲವಾರು ಶಾಲೆಗಳಿಗೆ ಭೇಟಿ ನೀಡಿ ಮಕ್ಕಳೊಂದಿಗೆ ಕಾಲವನ್ನು ಕಳೆಯುತ್ತಿದ್ದರು. ಇಂತಹ ಸಂದರ್ಭದಲ್ಲಿ ಮಕ್ಕಳಿಗೆ ಕಥೆ, ಒಗಟು, ಗಾದೆಗಳನ್ನು ಹೇಳುತ್ತಿದ್ದರು. ಮಕ್ಕಳಿಂದ ಹಲವಾರು ಕಥೆಗಳನ್ನು ಹೇಳಿಸುತ್ತಿದ್ದರು. ಮಕ್ಕಳು ಕಥೆಯನ್ನು ಹೇಳಲು ಆರಂಭ ಮಾಡಿದ ಕೂಡಲೇ ಅವರಿಗೆ ಶಾಲೆಯಲ್ಲಿ ಕಲಿಸಿರುವುದಕ್ಕಿಂತ ಬಿನ್ನವಾಗಿರುವ ಕಥೆಗಳನ್ನು ಹೇಳಿಸುತ್ತಿದ್ದರು.

> ವಾಕ್ಯ ಶುದ್ಧವಾಗಿ, ಪೂರ್ಣ ವಿರಾಮ, ಅರ್ಧ ವಿರಾಮ, ಬಿಡದೆ ಮಕ್ಕಳು ಕಥೆಗೆ ತೊಡಗುತ್ತಲೇ ಆ ಕಥೆ ಸಾಕು, ನಿನ್ನ ಅಜ್ಜಿ ನಿನಗೆ ಕಥೆ ಹೇಳುವ ರೀತಿಯಲ್ಲಿ, ಅಥವಾ ನೀನು ನಿನ್ನ ದೊಸ್ತಿಗೆ ಹೇಳುವ ರೀತಿಯಲ್ಲಿ ಕಥೆ ಹೇಳಿದರೆ ಕೇಳುತ್ತೇನೆ. ಇಲ್ಲವಾದರೆ ಬೇಡ[೧] ಎಂದು ಹೇಳುತ್ತಿದ್ದರು.

ಕಾರಂತರು ಹೀಗೆ ಹೇಳಿದಾಗ ಮಕ್ಕಳು ಉತ್ಸಾಹದಿಂದ ಕಥೆಯನ್ನು ಹೇಳುತ್ತಿದ್ದರು. ಇಂತಹ ಸಂದರ್ಭದಲ್ಲಿ ಮಕ್ಕಳು ಕಥೆ ಹೇಳುವ ರೀತಿ, ಅವರ ಧ್ವನಿಯ ಏರಿಳಿತಗಳು ಮುಖದ ಭಾವಗಳನ್ನು ಕಾರಂತರು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದರು.

೧೯೩೧ರಲ್ಲಿ ಪೂತ್ತೂರಿನಲ್ಲಿ ಆರಂಭವಾದ ಶೈಕ್ಷಣಿಕ ಪ್ರಯೋಗಗಳು ನಾಲ್ಕು ಗೋಡೆಗಳ ಮಧ್ಯದಲ್ಲಿ ಪಠ್ಯಪುಸ್ತಕದಲ್ಲಿರುವ ಮಾಹಿತಿಯನ್ನು ವಿದ್ಯಾರ್ಥಿಗಳಿಗೆ ಕಂಠಪಾಠ ಮಾಡಿಸುವ ಶಿಕ್ಷಣ ಕ್ರಮಕ್ಕಿಂತ ಇವರ ಪ್ರಯೋಗಗಳು ಒಂದು ಹೊಸ ರೀತಿಯದಾಗಿದ್ದವು. ಮಕ್ಕಳನ್ನು ಹೊರಬಯಲ ಶಿಬಿರದಲ್ಲಿ ಒಗ್ಗೂಡಿಸಿ ಹಾಡು ಅಭಿನಯ, ಆಟ-ಪಾಠ ನೃತ್ಯಗಳ ಮೂಲಕ ಮಕ್ಕಳ ಚಟುವಟಿಕೆಗಳಿಂದಲೇ ಪಾಠಗಳನ್ನು ರಸವತ್ತಾಗಿ ಮಾಡಿ ತೋರಿಸುತ್ತಿದ್ದರು. ಇಂತಹ ಪ್ರಯೋಗಗಳು ಮಕ್ಕಳನ್ನು ತುಂಬಾ ಆಕರ್ಷಿಸುತ್ತಿದ್ದವು.

**ಮಕ್ಕಳ ಕೂಟ ೧೯೩೧**

೧೯೩೧ರಲ್ಲಿ ಮೊಟ್ಟ ಮೊದಲಬಾರಿಗೆ ಪುತ್ತೂರಿನ ಸಮೀಪದ ಉಪ್ಪಿನ ಅಂಗಡಿಯಲ್ಲಿ ಮೊಳಹಳ್ಳಿ ಶಿವರಾಯರ ಸಹಕಾರ ಪ್ರೋತ್ಸಾಹದೊಂದಿಗೆ ೫ ರಿಂದ ೧೬ ವರ್ಷಗಳ ಮಕ್ಕಳಿಗಾಗಿ ಮಕ್ಕಳ ಕೂಟ ಏರ್ಪಡಿಸಿದರು. ಇದು ಮಕ್ಕಳ ಸೃಜನಶೀಲ ಬೆಳವಣಿಗೆಗಾಗಿ ನಡೆಸಿದ ಮೊದಲ ಪ್ರಯತ್ನವಾಗಿ ಕಂಡುಬರುತ್ತದೆ. ಶಾಲೆಗಳಲ್ಲಿ ಮಕ್ಕಳನ್ನು ನಾಲ್ಕು ಗೋಡೆಗಳ ಮಧ್ಯೆ ಕೂಡಿ ಹಾಕಿ ಮಕ್ಕಳ ಉತ್ಸಾಹವನ್ನು ಅಪಹರಿಸುವ ಶಾಲೆಗಳಿಗಿಂತ ಬಿನ್ನವಾಗಿ ಮಕ್ಕಳ

ಕೂಟವನ್ನು ಏರ್ಪಡಿಸಿದರು. ಮಕ್ಕಳ ನಗುವನ್ನು ಹೆಚ್ಚಿಸಲು ಹಾಗೂ ಬಾಲ್ಯಜೀವನದ ರಸಹೀನತೆಯನ್ನು ತೊಲಗಿಸಿ ಆನಂದಮಯವಾಗುವಂತೆ ಪ್ರೇರೆಪಿಸುವುದೇ ಮಕ್ಕಳ ಕೂಟದ ಮುಖ್ಯ ಉದ್ದೇಶವಾಗಿತ್ತು. ಹಳ್ಳಿಗಳಿಂದಲೇ ಹೆಚ್ಚಾಗಿ ಮಕ್ಕಳು ಈ ಕೂಟದಲ್ಲಿ ಭಾಗವಹಿಸುವುದರಿಂದ ಮಕ್ಕಳಿಗೆ ತಮ್ಮ ಸುತ್ತಲಿನ ನಿಸರ್ಗದ ಜತೆಗೆ ಕಲಿಯುವಂತಾಗಬೇಕು. ಮಕ್ಕಳನ್ನು ಉತ್ಪಾದಕ ಶಕ್ತಿಯಾಗಿ ಬೆಳಸಬೇಕು. ಎಂಬ ಗುರಿಯನ್ನು ಹೊಂದಿದ್ದರು.

ಅಂದಿನ ಶಾಲೆಗಳಲ್ಲಿ ಪಠ್ಯಪುಸ್ತಕಗಳು ಮಕ್ಕಳ ವಯಸ್ಸಿನ ಮನೋಧರ್ಮಕ್ಕೆ ಅನುಗುಣವಾಗಿ ರಚನೆಯಾಗದಿರುವುದನ್ನು ಗಮನಿಸಿದ ಕಾರಂತರು ಸ್ವತಃ ಅವರೇ ಹಾಡುಗಳನ್ನು ರಚಿಸಿ ಹಾಡಿ ಅಭಿನಯಿಸುತ್ತಿದ್ದರು. ವಿದ್ಯಾರ್ಥಿಗಳಿಗೂ ಹಾಡಲು ಹೇಳುತ್ತಿದ್ದರು. ಆದರೆ ಅವರಿಗೆ ಶಾಲೆಯಲ್ಲಿ ಕಲಿಸಿದ ಹಾಡುಗಳನ್ನು ಬಿಟ್ಟು ತಿಳಿದಿರುವ ಹಾಡುಗಳನ್ನು ಹೇಳಿಸುತ್ತಿದ್ದರು. ಮಕ್ಕಳು ತಮಗೆ ಗೊತ್ತಿದ್ದ ಹಲವಾರು ಜಾನಪದ ಗೀತೆಗಳನ್ನು ಹಳ್ಳಿಯ ಧಾಟಿಯಲ್ಲಿ ಸೊಗಸಾಗಿ ಹಾಡಿ ಅಭಿನಯಿಸುತ್ತಿದ್ದರು. ಹೀಗೆ ಕಾರಂತರು ಮಕ್ಕಳಲ್ಲಿ ಅಡಗಿದ ಸುಪ್ತ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸುತ್ತಿದ್ದರು. ಚಿತ್ರಕಲೆಯಲ್ಲಿಯೂ ಮಕ್ಕಳಿಗೆ ಆಸಕ್ತಿಯಿಲ್ಲದಿರುವುದನ್ನು ಗಮನಿಸಿದ ಕಾರಂತರು ಮಕ್ಕಳೊಂದಿಗೆ ನಿಮಗೆ ಶಿಕ್ಷಕರು ಹೇಳಿಕೊಟ್ಟ ಚಿತ್ರಗಳನ್ನು ಬರೆಯಬೇಕಾಗಿಲ್ಲ. ನಿಮಗೆ ಇಷ್ಟವಾಗಿರುವ ವಸ್ತುಗಳ, ಪ್ರಾಣಿಗಳ ಚಿತ್ರಗಳನ್ನು ಬರೆಯಿರಿ, ಎಂದು ಪ್ರೋತ್ಸಾಹಿ ಸುತ್ತಿದ್ದರು. ಬಣ್ಣದ ಪೆನ್ಸಿಲ್‌ಗಳ ಬದಲು ಬಣ್ಣ ಬಣ್ಣದ ಮಣ್ಣಿನಿಂದ ನೆಲದ ಮೇಲೆ ಚಿತ್ರ ಗಳನ್ನು ಬರೆಯಲು ಕಲಿಸುತ್ತಿದ್ದರು. ಬಣ್ಣದ ಕಾಗದಗಳನ್ನು ಕೊಟ್ಟು ಅವುಗಳನ್ನು ಕತ್ತರಿಸಿ ಚಿತ್ರಗಳನ್ನು ಮಾಡಿ ವಿವಿಧ ರೀತಿಯ ಹೂವು, ಎಲೆಗಳನ್ನು ತಯಾರಿಸಲು ಹೇಳಿದಾಗ ಮಕ್ಕಳಲ್ಲಿ, ಉತ್ಸಾಹ, ಆಸಕ್ತಿಯು ಬರುತ್ತಿತ್ತು. ಇಂತಹ ವಿವಿಧ ವಸ್ತುಗಳಿಂದ ಚಿತ್ರಗಳನ್ನು ಮಾಡಿ ತೋರಿಸುತ್ತಿದ್ದರು. ಯಾವ ಮಕ್ಕಳಲ್ಲಿ ಎಂತಹ ಕಲ್ಪನೆಯಿದೆ, ಪ್ರತಿಭೆಯಿದೆ ಎಂದು ತಿಳಿದುಕೊಳ್ಳುತ್ತಿದ್ದರು. ಇಲ್ಲಿ ಹಲವಾರು ವಿಧಗಳಲ್ಲಿ ಚಿತ್ರಗಳನ್ನು ಬಿಡಿಸುವುದು ಮಕ್ಕಳಿಗೆ ಕಲಿಸಲಾಗುತ್ತಿತ್ತು. ಒಂದೊಂದು ಸಹ ಒಂದೊಂದು ಬಗೆಯಲ್ಲಿ ಚಿತ್ರಗಳನ್ನು ಬಿಡಿಸಲಾಗುತ್ತಿತ್ತು. ಮಣ್ಣಿನಿಂದ, ಎಲೆಗಳಿಂದ, ಹೂವುಗಳಿಂದ ಚಿತ್ರಗಳನ್ನು ಬಿಡಿಸುತ್ತಿದ್ದರು. ಇದು ಮಕ್ಕಳು ಕಂಠಪಾಟ ಮಾಡಿ ಒಪ್ಪಿಸುವ ಪದ್ಧತಿಗಿಂತ ಮೇಲಾಗಿತ್ತು. ಈ ಕೂಟವೆಂಬುದು ಮಕ್ಕಳ ಪಾಲಿಗೆ ತರಗತಿಯ ಏಕಾಂತತೆಯಿಂದ ಬಿಡುಗಡೆ ಹೊಂದುವ ಮತ್ತು ಶಿಕ್ಷಣದಲ್ಲಿ ಮಕ್ಕಳ ಕ್ರಿಯಾಶಕ್ತಿಯನ್ನು ಬೆಳೆಸಲು ಅವಕಾಶ ಮಾಡಿಕೊಟ್ಟಿತು. ಮಕ್ಕಳಲ್ಲಿ ಅಳಿಸಲಾರದ ಒಂದು ಗುರುತನ್ನು ಈ ಕೂಟ ಏರ್ಪಡಿಸಿತ್ತು. ಈ ಪ್ರಯೋಗದಲ್ಲಿ ಒಂದು ನಾಟಕವನ್ನು ಮಕ್ಕಳಿಂದಲೇ ಮಾಡಿಸಲು ಪ್ರಯತ್ನಿಸಿದರು. ನಾಟಕದಲ್ಲಿ ಮಕ್ಕಳಿಗೆ ಯಾವುದೇ ರೀತಿಯ ನಿರ್ಬಂಧಗಳನ್ನು ಹೇರಲಿಲ್ಲ.

ಕಲಿತ ಮಾತು ಬೇಡ. ನೀವು ಆರಿಸಿದ ಕಥೆ, ಅಥವಾ ನಿವೇ ಕಟ್ಟಿದ ಕಥೆ, ಯಾವುದಾದರೂ ಸರಿಯೇ, ಬಾಯಿ ಪಾಠ ಕಲಿಯದೆ ಆಡಬೇಕು. ವೇಷ ಭೂಷಣ ನೀವೆ ತಯಾರಿಸಬೇಕು ಎಂದೆ. ಕೆಲವು ಮಕ್ಕಳ ಪಾಲಿಗೆ ಯಕ್ಷಗಾನ ಮೆಚ್ಚುಗೆಯಾಯಿತು. ಯುದ್ಧ, ಕುಣಿತ, ರಾಕ್ಷಸ ವೇಷ ಸಿದ್ಧವಾದವು. ಅವರೇ ಭಾಗವತರು, ಚಿಮಣಿ ಡಬ್ಬಿಗಳೇ ಅವರ ಚೆಂಡ ಮದ್ದಳೆಗಳು[3]

ಇಂತಹ ಪ್ರಯೋಗಗಳಿಂದ ಮಕ್ಕಳು ಅಪೂರ್ವ ಉತ್ಸಾಹದಿಂದ ಕಲಿಕೆಯಲ್ಲಿ ಆಸಕ್ತಿಯನ್ನು ತೋರಿಸುವುದು ಕಂಡುಬರುತ್ತಿತ್ತು. ಈ ಮಕ್ಕಳ ಕೂಟಕ್ಕೆ ಒಂದೊಂದು ಶಾಲೆಯಿಂದ ಹತ್ತು ಪ್ರತಿನಿಧಿಗಳನ್ನು ಆರಿಸಿ ಯಾವುದಾದರೂ ಒಂದು ಊರಿನಲ್ಲಿ ಕೂಟವನ್ನು ನಡೆಸುತ್ತಿದ್ದರು. ಈ ಕೂಟದಲ್ಲಿ ಪ್ರತಿ ದಿನ ಸಂಜೆ ಮತ್ತು ಬೆಳಗ್ಗೆ ಕಥೆಗಳನ್ನು ಹೇಳುವುದು, ಗಾದೆಗಳ ಸ್ಪರ್ಧೆ, ಓಟದ ಸ್ಪರ್ಧೆ, ಮಣ್ಣಿನಲ್ಲಿ, ಕಾಗದದಲ್ಲಿ, ಹೂಗಳನ್ನು ಬಿಡಿಸುವುದು. ಚಿತ್ರಗಳನ್ನು ಬಿಡಿಸುವ ಕಲೆಯನ್ನು ಕಲಿಸುವುದು, ನಾಟಕಗಳನ್ನು ಆಡಿಸುವುದು, ಜಾನಪದ ಗೀತೆಗಳನ್ನು ಕಲಿಸುವುದು, ಪಶುಪ್ರಾಣಿಗಳ ಕೂಗುಗಳನ್ನು ಅನುಕರಿಸುವುದು ಇತ್ಯಾದಿ ಕಾರ್ಯಕ್ರಮಗಳನ್ನು ರೂಪಿಸುತ್ತಿದ್ದರು. ಮತ್ತು ಪ್ರತಿ ದಿನ ಸಂಜೆಯ ಕಾರ್ಯಕ್ರಮ ಮುಗಿದ ನಂತರ ಉಪಾಧ್ಯಾಯರಿಂದ ನಾಟಕಗಳನ್ನು, ಚಲನ ಚಿತ್ರಗಳನ್ನು ಪ್ರದರ್ಶಿಸುವ ಏರ್ಪಟನ್ನು ಮಾಡಿಸುತ್ತಿದ್ದರು. ಇಂತಹ ಸಂದರ್ಭದಲ್ಲಿ ಮಕ್ಕಳಿಂದ ವಿವಿಧ ಬಗೆಯ ನೃತ್ಯ, ಸಂಗೀತ, ಕಥೆ, ಗಾದೆ, ಒಗಟುಗಳನ್ನು ಹೇಳಿಸುತ್ತಿದ್ದರು. ನಾಟಕ, ಯಕ್ಷಗಾನ, ಜನಪದ ಕುಣಿತಗಳನ್ನು ಆಡಿಸುತ್ತಿದ್ದರು. ಮಕ್ಕಳ ಕೂಟಕ್ಕಾಗಿಯೇ ಶಿವರಾಮಕಾರಂತರು ಸ್ವಂತ ಹಾಡು, ನಾಟಕ, ಸಂಗೀತ, ರೂಪಕಗಳನ್ನು ರಚಿಸಿದರು. ಮಕ್ಕಳು ತಮಗೆ ಲಭ್ಯವಿರುವ ವಸ್ತುಗಳಿಂದ ತಾವೇ ವೇಷಭೂಷಣಗಳನ್ನು ಸಿದ್ಧಪಡಿಸಲು ಉತ್ತೇಜನ ನೀಡುತ್ತಿದ್ದರು. ಮನರಂಜನೆ ಯೊಂದಿಗೆ ಅರ್ಥಪೂರ್ಣ ಕಲಿಕೆಯ ಅನುಭವಗಳು ಅವರ ಪಾಲಿಗೆ ಒದಗಿ ಬಂದಿತು. ಈ ಕೂಟದ ಮೂಲಕ ಸಹ ಪಠ್ಯ ಚಟುವಟಿಕೆಗಳ ಮಹತ್ವವೇನೆಂಬುದು ಶಿಕ್ಷಕರಿಗೂ ವಿದ್ಯಾರ್ಥಿಗಳಿಗೂ ಮನವರಿಕೆಯಾಯಿತು. ಈ ಕೂಟದಲ್ಲಿ ಶಿಕ್ಷಕರಿಗಾಗಿ ಕಾರ್ಯಕ್ರಮಗಳನ್ನು ಏರ್ಪಡಿಸಿ ಪಠ್ಯವಿಷಯ ಗಳನ್ನು ನೀರಸವಾಗಿ ಬೋಧಿಸದೆ, ನಾಟಕದ ಮೂಲಕ ಪರಿಣಾಮಕಾರಿಯಾಗಿ ಕಲಿಸಲಾಗುತ್ತಿತ್ತು.

ಹೀಗೆ ಸುಮಾರು ಐದಾರು ವರ್ಷಗಳ ಕಾಲ ಪುತ್ತೂರು ತಾಲ್ಲೂಕಿನ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಮಕ್ಕಳ ಕೂಟಗಳನ್ನು ಏರ್ಪಡಿಸಿ ನಡೆಸಿಕೊಟ್ಟರು. ಇಂತಹ ಕೂಟಗಳಿಗೆ ಬರುವ ವಿದ್ಯಾರ್ಥಿಗಳಿಗೆ, ಉಪಾಧ್ಯಾಯರುಗಳಿಗೆ ಮೊಳಹಳ್ಳಿ ಶಿವರಾಯರು ಆರ್ಥಿಕ ಹೊಣೆಯ ಜವಬ್ದಾರಿಯನ್ನು ವಹಿಸಿಕೊಳ್ಳುತ್ತಿದ್ದರು. ಈ ರೀತಿಯ ಕೂಟಗಳಿಂದ ಮಕ್ಕಳಲ್ಲಿರುವ ಪ್ರತಿಭೆಯನ್ನು ಅವರ ಉಪಾಧ್ಯಾಯರು ಗುರುತಿಸುವ ಅವಕಾಶ ದೊರೆಯುತ್ತಿತ್ತು. ಇಂತಹ ಕೂಟಗಳಿಗೆ

ಅತಿಥಿಗಳಾಗಿ, ಪ್ರೇಕ್ಷಕರಾಗಿ, ಹೊಯ್ಸಳ, ರಾಜರತ್ನಂ, ಮತ್ತು ಪಂಜೆ ಮಂಗೇಶರಾಯರಂತಹ ಸಾಹಿತಿಗಳು ಭಾಗವಹಿಸುತ್ತಿದ್ದರು. ಶಿವರಾಮ ಕಾರಂತರು ಈ ಕೂಟದಲ್ಲಿ ಮಕ್ಕಳಿಗೆ ಜಾನಪದ ಹಾಡುಗಳು, ಕಥೆಗಳು, ಹಾಗೂ ಗಾದೆ, ಒಗಟುಗಳನ್ನು ಕಲಿಸಿಕೊಡುತ್ತಿದ್ದರು. ಮಕ್ಕಳಿಂದ ಹಲವಾರು ಗಾದೆಗಳನ್ನು ಒಗಟುಗಳನ್ನು ಹೇಳಿಸುತ್ತಿದ್ದರು.

> ಸಾಲಾಗಿ ಕುಳಿತ ಮಕ್ಕಳಲ್ಲಿ ಮೊದಲನೆಯವನಿಗೆ ಒಂದು ಗಾದೆ ಹೇಳು ಎನ್ನುತ್ತೇವೆ. ಹೇಳಿ ಆತ ಕುಳಿತುಕೊಳ್ಳುತ್ತಾನೆ. ಮರುಕ್ಷಣ ಅವನ ಒತ್ತಿನವನು ಇನ್ನೊಂದೇ ಗಾದೆ ಹೇಳಬೇಕು. ಥಟ್ಟನೆ ಗಾದೆ ನೆನಪಾಗದೆ ಹೋದರೆ ಆತ ನಿಂತಿರಬೇಕು. ಅಲ್ಲಿಂದ ಮುಂದಿನವನು. ಹೀಗೆ ಗಾದೆಯ ಸರದಿ, ಒಬ್ಬನಿಂದ ಇನ್ನೊಬ್ಬನಿಗೆ ಸಾಲಾಗಿ ಹೋಗುತ್ತದೆ. ಒಮ್ಮೆ ಹೇಳಿದ ಗಾದೆಯನ್ನು ಇನ್ನೊಮ್ಮೆ ಹೇಳಕೂಡದು[2]

ಇಂತಹ ಸ್ಪರ್ಧೆಗಳಿಂದ ಹಲವಾರು ಗಾದೆಗಳು ಬೆಳಕಿಗೆ ಬರುತ್ತಿದ್ದವು. ಪುತ್ತೂರು ತಾಲ್ಲೂಕಿನ ಸುತ್ತಮುತ್ತಲಿನ ಪ್ರದೇಶಗಳಲ್ಲಿರುವ ಜಾನಪದ ಗೀತೆಗಳನ್ನು ಹಾಡಿಸುತ್ತಿದ್ದರು. ಇದರಲ್ಲಿ ನಾಟಿಯ ಹಾಡುಗಳು, ಆಭರಣದ ಹಾಡುಗಳು, ಪ್ರಾಣಿ ಪಕ್ಷಿಗಳ ಹಾಡುಗಳು, ಸೋಭಾನೆ ಹಾಡು ಗಳಿರುತ್ತಿದ್ದವು. ಅವುಗಳ ರಾಗ ಧಾಟಿಗಳು ವೈವಿಧ್ಯಪೂರ್ಣವಾಗಿರುತ್ತಿದ್ದವು. ಇಂತಹ ಪ್ರಯೋಗ ಗಳಿಂದ ಹಳ್ಳಿಯಲ್ಲಿ ಯಾವ ಯಾವ ಜನಪದ ಗೀತೆಗಳಿವೆ, ಕುಣಿತಗಳಿವೆ ಎಂಬುದನ್ನು ತಿಳಿದುಕೊಳ್ಳುತ್ತಿದ್ದರು. ಅಷ್ಟೇ ಅಲ್ಲದೆ ಇಂತಹ ಕೂಟಗಳಿಂದ ಮಕ್ಕಳಲ್ಲಿರುವ ಸೃಜನಶೀಲ ಶಕ್ತಿಯನ್ನು ಉತ್ತೇಜನಗೊಳಿಸುತ್ತಿದ್ದರು.

ಕೂಟಗಳಿಗೆ ಬರುವ ಮಕ್ಕಳೆಲ್ಲರೂ ತಮ್ಮ ತಮ್ಮ ಹಳ್ಳಿಗಳಿಂದ ಬಣ್ಣ ಬಣ್ಣದ ಮಣ್ಣುಗಳನ್ನು ತರುತ್ತಿದ್ದರು. ಅವುಗಳಿಂದ ನೆಲದ ಮೇಲೆ ಒಳ್ಳೆಯ ಚಿತ್ರಗಳನ್ನು ಬಿಡಿಸುತ್ತಿದ್ದರು.

> "ಡ್ರಾಯಿಂಗ್ ಪಾಠದಿಂದಾಗಿ ಮಕ್ಕಳ ಚಿತ್ರಕಲೆ ಕುಲಗೆಟ್ಟಿತು ಎಂಬ ಅಭಿಪ್ರಾಯದ ನಾನು ಅದರ ಮುಂದೆ ನೋಡಿ ನಿಮ್ಮ ಮಾಸ್ತರು ಬೋರ್ಡಿನ ಮಏಲೆ ಬರೆಯುವ ಕತ್ತೆ, ಕುದುರೆ, ಆನೆಗಳನ್ನು ನೀವು ಬರೆಯಬೇಕಾಗಿಲ್ಲ. ನಿಮಗೆ ಇಷ್ಟ ಕಂಡ ವಸ್ತುವಿನ ಚಿತ್ರವನ್ನು ಬರೆಯಬೇಕು. ಯಾವುದನ್ನು ಕಂಡರೆ ನಿಮಗೆ ಖುಷಿಯೋ ಅದನ್ನು ಬರೆಯಿರಿ" ಎಂದು ಹೇಳಿದಾಗ

ಹೀಗೆ ಮಕ್ಕಳು ತಮಗೆ ತಿಳಿದಿರುವ ಚಿತ್ರಗಳನ್ನು ಬಿಡಿಸಿ ತೋರಿಸುತ್ತಿದ್ದರು. ಈ ಮೂಲಕ ಕಾರಂತರು ಮಕ್ಕಳಲ್ಲಿರುವ ಸುಪ್ತ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸುತ್ತದ್ದರು. ಇದರಲ್ಲಿ ಎಲ್ಲಾ ವಿದ್ಯಾರ್ಥಿಗಳು ಭಾಗವಹಿಸಲೇಬೇಕೆಂಬ ಕಡ್ಡಾಯವಿರಲಿಲ್ಲ. ಅವರವರಿಗೆ ಇಷ್ಟವಾದ ವಿಷಯಗಳಲ್ಲಿ ಮಾತ್ರ ಭಾಗವಹಿಸುತ್ತಿದ್ದರು. ಇಲ್ಲವೇ ಪ್ರೇಕ್ಷಕರಾಗಿ ವೀಕ್ಷಿಸಬಹುದಾಗಿತ್ತು.

ಮಕ್ಕಳೆ ಸ್ವತಃ ಕಥೆಯನ್ನು ಕಟ್ಟಿ ನಟಿಸುತ್ತಿದ್ದರು. ಇವು ಮಕ್ಕಳ ಸೃಷ್ಟಿ ಕ್ರಿಯೆಗೆ ಧಾರಾಳ ಅವಕಾಶವನ್ನು ಒದಗಿಸುತ್ತಿದ್ದವು. ಕಾರಂತರು ಇಂತಹ ಅವಧಿಯಲ್ಲಿ ಮಕ್ಕಳಿಗೆ ಆದಿವಾಸಿಗಳ ಜೀವನದ ದೃಶ್ಯಗಳನ್ನು ಪ್ರದರ್ಶಿಸಲು ಪ್ರೇರೇಪಿಸುತ್ತಿದ್ದರು. ನಿಗ್ರೋ ಜನಗಳ ಜೀವನದ ರೀತಿ, ಅವರ ಬೇಟೆಯ ವಿಧಾನ ಮತ್ತು ಅವರ ಆಟ ಪಾಟಗಳ ಕಥೆಗಳನ್ನು ವಿವರಿಸುತ್ತಿದ್ದರು. ಇದರಿಂದ ಪ್ರೇರಿತರಾದ ಮಕ್ಕಳು ನಿಗ್ರೋ ಜನರ ಬದುಕಿನ ದೃಶ್ಯವನ್ನು ನಟಿಸಿ ತೋರಿಸುತ್ತಿದ್ದರು. ಕಾರಂತರು ಸುಳ್ಯ ಎಂಬ ಗ್ರಾಮದಲ್ಲಿ ಮಕ್ಕಳ ಕೂಟವನ್ನು ಏರ್ಪಡಿಸಿದ ಸಂದರ್ಭದಲ್ಲಿ ಮಕ್ಕಳಿಗೆ ಎಸ್ಕಿಮೋ ಜನರ ಆಚರಣೆ, ರೂಢಿ ಸಂಪ್ರದಾಯಗಳಲ್ಲಿ ಬೇಟೆಯ ವಿಧಾನ ಮತ್ತು ಆಹಾರ ಉಡುಗೆ ತೊಡುಗೆಗಳ ಮೊದಲಾದ ಜೀವನದ ದೃಶ್ಯಗಳನ್ನು ಪರಿಚಯಿಸುತ್ತಿದ್ದರು. ಅವರ ಜೀವನ ಪದ್ಧತಿಯನ್ನು ನಾಟಕದ ರೂಪದಲ್ಲಿ ತೋರಿಸಬೇಕೆಂಬ ಉದ್ದೇಶದಿಂದ ಮಕ್ಕಳಿಗೆ ಅವರ ವೇಷಭೂಷಣಗಳನ್ನು ಸಿದ್ಧಗೊಳಿಸುತ್ತಿದ್ದರು. ಹೀಗೆ ಸಿದ್ಧಗೊಳಿಸುವ ಸಂದರ್ಭದಲ್ಲಿ ಎಸ್ಕಿಮೋಗಳ ನೆಲ ಹಿಮ ಕವಿದಂತೆ ತೋರಿಸುವ ಸಲುವಾಗಿ ನೆಲದ ಮೇಲೆಲ್ಲಾ ಹತ್ತಿಯನ್ನು ಹರಡಿದ್ದರು. ಆದರೆ ದೃಶ್ಯವನ್ನು ಪ್ರದರ್ಶಿಸುವ ಹೊತ್ತಿಗೆ ರಂಗಸ್ಥಳದ ಮೂಲೆಯಲ್ಲಿ ಯಾರೋ ಎಸೆದ ಬೀಡಿನಿಂದ ಹತ್ತಿಗೆ ಬೆಂಕಿ ಹತ್ತಿಕೊಂಡಿತು. ಗಾಬರಿಯಿಂದ ಕಾರಂತರು ಅಲ್ಲಿರುವ ಮಕ್ಕಳನ್ನೆಲ್ಲಾ ದೂರಕ್ಕೆ ಓಡಿಸಿ ಬೆಂಕಿಯನ್ನು ನಂದಿಸಿದರು. ಮಕ್ಕಳ ಕೂಟಗಳಿಂದಾದ ಇಂತಹ ಅನುಭವಗಳು ಅವರ ಆತ್ಮ ಕಥೆಗಳಿಂದ ತಿಳಿದುಬರುತ್ತದೆ. ಇಂತಹ ಮಕ್ಕಳ ಕೂಟಗಳಿಂದ ಕಾರಂತರಿಗೆ ಮಕ್ಕಳಲ್ಲಿ ಹುದುಗಿದ್ದ ಅನೇಕ ಸುಪ್ತ ಶಕ್ತಿಗಳ ಪರಿಚಯವಾಯಿತು. ಆದರೆ ಈ ಶಕ್ತಿಯ ಉಪಯೋಗ ಶಿಕ್ಷಣ ಕ್ರಮದಲ್ಲಿ ಇಲ್ಲವೆಂಬ ಕೊರಗೂ ಕಾಡುತ್ತಿತ್ತು. ಈ ಕೂಟಗಳಿಂದ ಪುತ್ತೂರು ತಾಲ್ಲೂಕಿನ ಉಪಾಧ್ಯಾಯರಿಗೆ, ಮಕ್ಕಳಿಗೆ ಒಂದು ರೀತಿಯ ಹಬ್ಬದ ವಾತಾವರಣದಂತೆ ಇರುತಿತ್ತು.

ಇಂದಿನ ಪ್ರಾಥಮಿಕ ಶಾಲೆಗಳಲ್ಲಿ ಈ ರೀತಿಯ ಕೂಟಗಳನ್ನು ನಡೆಸುವುದು ಎಲ್ಲಿಯೂ ಕಂಡು ಬರುವುದಿಲ್ಲ. ಈಗಲೂ ಇಂತಹ ಮಕ್ಕಳ ಕೂಟಗಳನ್ನು ಏರ್ಪಡಿಸಿ, ಮಕ್ಕಳಲ್ಲಿರುವ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸಬಹುದಾಗಿದೆ. ಕೆಲ ಸಮಯವಾದರೂ ಮಕ್ಕಳಿಗೆ ತರಗತಿ ಗಳಿಂದ ಬಿಡುಗಡೆ ಹೊಂದಿ ನಿಸರ್ಗದ ಜೊತೆ ಬೆರೆಯುವಂತೆ ಅವಕಾಶವನ್ನು ಕಲ್ಪಿಸಬಹುದು. ಪಠ್ಯಗಳಲ್ಲಿರುವ ವಿಷಯಗಳನ್ನು ಕಲಿಸುವುದರ ಮೂಲಕ ಮಕ್ಕಳಲ್ಲಿರುವ ವಿಶೇಷ ಪ್ರತಿಭೆಯು ಬೆಳಕಿಗೆ ಬರದೆ ಕುಂದುತ್ತದೆ.

**ಬಾಲವನ-ಕಿಂಡರ್ ಗಾರ್ಡನ್**

ಕ್ರಿ.ಶ.೧೮ಮತ್ತು೧೯ನೇ ಶತಮಾನದಲ್ಲಿ ಬಳಕೆಯಲ್ಲಿದ್ದ ಬೋಧನಾ ಪದ್ಧತಿಗಳು ಯಾಂತ್ರಿಕ ವಾಗಿಯೂ, ಮತ್ತು ನೀರಸವಾಗಿಯೂ ನಡೆಯುತ್ತಿದ್ದವು. ಕೆಲ ಶಿಕ್ಷಣ ಸುಧಾರಕರು ಅದನ್ನು

ವಿರೋಧಿಸಿ ಕೆಲವು ಪ್ರಯೋಗಗಳನ್ನು ಮಾಡಿ ಹೊಸ ವಿಧಾನಗಳನ್ನು ಬಳಕೆಗೆ ತರಲು ಪ್ರಯತ್ನಿಸಿದರು. ವಿಕಾಸ ಹೊಂದುತ್ತಿರುವ ಮಗುವಿನ ಆಸೆ, ಆಕಾಂಕ್ಷೆಗಳನ್ನು ಗಮನದಲ್ಲಿಟ್ಟುಕೊಂಡು ಕೆಲವು ನಿರ್ದಿಷ್ಟ ತತ್ವಗಳ ತಳಹದಿಯ ಮೇಲೆ ರಚಿಸಲ್ಪಟ್ಟ ನಿಶ್ಚಿತ ಪದ್ಧತಿಯಂತೆ ಕಲಿಸಿದರೆ ಶಿಕ್ಷಣವು ಫಲಕಾರಿಯಾಗುತ್ತದೆಂದು ಬಾಲೋದ್ಯನವನ್ನು ಸ್ಥಾಪಿಸಲಾಯಿತು. ಜರ್ಮನಿಯ ಶಿಕ್ಷಣ ತಜ್ಞ ಫ್ರೊಬೆಲ್ ಇದರ ಜನಕ. ಇವನ ಕಾಲದಲ್ಲಿ ಪ್ರಾಥಮಿಕ ಮಕ್ಕಳ ಶಿಕ್ಷಣದ ಬಗ್ಗೆ ಹೆಚ್ಚು ಗಮನವನ್ನು ಕೊಡುತ್ತಿರಲಿಲ್ಲ. ಇದ್ದ ಕೆಲವು ಶಾಲೆಗಳು ಸೆರೆಮನೆಯಂತಿದ್ದು ಅಲ್ಲಿ ಕಲಿಯಲು ಮಕ್ಕಳು ಭಯಪಡುತ್ತಿದ್ದರು.

ಫ್ರೊಬೆಲ್ ದೃಷ್ಟಿಯಲ್ಲಿ ಮಕ್ಕಳು ಸ್ವಭಾವತ ಸೃಜನಶೀಲರು ಅವರು ಆಡುವ ಆಟಗಳೆಲ್ಲ ದರಲ್ಲೂ ವಿಶಿಷ್ಟವಾದ ಶೈಕ್ಷಣಿಕ ಮಹತ್ವ ಇದ್ದೇ ಇರುತ್ತದೆ. ಶಾಲೆಯು ಪುಟ್ಟ ಮಕ್ಕಳಲ್ಲಿ ಸಾಹಸ ಪ್ರವೃತ್ತಿಯನ್ನು ಬೆಳೆಸಬೇಕು. ಶಾಲೆಯು ಒಂದು ತೋಟ, ಮಕ್ಕಳು ಅಲ್ಲಿಯ ಸಸಿಗಳು, ಶಿಕ್ಷಕ ತೋಟಗಾರ, ಬೆಳೆಯುವ ಸಸಿಗಳಿಗೆ ಭೂಮಿ, ನೀರು, ಗಾಳಿ, ಬೆಳಕುಗಳೆಲ್ಲದರ ಅನುಕೂಲವನ್ನು ಒದಗಿಸುವುದಲ್ಲದೇ ಕಸಕೀಟಗಳಿಂದ ಸಸಿಗೆ ಕಂಟಕ ಬಾರದಂತೆ ನೋಡಿ ಕೊಳ್ಳುವುದು ತೋಟಗಾರನ ಕೆಲಸ. ಹಾಗೆಯೇ ಶಾಲೆಯೆಂಬ ತೋಟದಲ್ಲಿ ಚಿಕ್ಕ ಮಕ್ಕಳ ಸುಪ್ತ ಶಕ್ತಿ, ಸಾಮರ್ಥ್ಯಗಳು ವಿಕಾಸಗೊಳ್ಳಲು ಸರಿಯಾದ ಸನ್ನಿವೇಶವನ್ನು ಒದಗಿಸುವುದು. ಮಕ್ಕಳ ಮನಸ್ಸು ಆತ್ಮವಿಕಾಸವಾಗಲು ಭಾದೆಯುಂಟು ಮಾಡುವ ವಿರೋಧ ಶಕ್ತಿಗಳನ್ನು ನಿವಾರಿಸುವುದು ಶಿಕ್ಷಕನ ಕೆಲಸ. ಪ್ರತಿಯೊಂದು ಮಗುವನ್ನು ಅವರವರ ಆಸಕ್ತಿ ಸ್ವಭಾವಕ್ಕನು ಗುಣವಾಗಿ ಬೆಳೆಸುವುದೂ ಅವರ ಶರೀರವನ್ನು ರೂಪಿಸುವುದೂ ಅವರು ತಮ್ಮ ಜ್ಞಾನೇಂದ್ರಿಯ ಗಳನ್ನು ಉಪಯೋಗಿಸಿಕೊಂಡು ತಮ್ಮ ಸಂಗಡಿಗರ ಹಾಗೂ ಪ್ರಕೃತಿಯ ಪರಿಚಯವನ್ನು ಮಾಡಿಕೊಳ್ಳುವಂತೆ ಮಾಡುವುದು ಫ್ರೊಬೆಲ್ಲನ ಕಿಂಡರ್ ಗಾರ್ಡನ್ ಪದ್ಧತಿಯ ಮುಖ್ಯ ಉದ್ದೇಶವಾಗಿತ್ತು.

ಶಿವರಾಮ ಕಾರಂತರು ಹಲವಾರು ವರ್ಷಗಳ ಕಾಲ ಮಕ್ಕಳ ಕೂಟಗಳನ್ನು ಏರ್ಪಡಿಸಿ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದರು. ಸ್ವತಃ ಅವರೇ ಶಿಕ್ಷಣ ಕುರಿತ ವಿಚಾರಗಳು, ಚರ್ಚಾ ಕೂಟಗಳು ನಡೆಸುತ್ತಿದ್ದರು. ಇದರಿಂದ ಪ್ರೇರಿತಗೊಂಡು ತಮ್ಮ ಶಿಕ್ಷಣ ಚಿಂತನೆಗಳಿಗೆ ಪ್ರಾಯೋಗಿಕ ರೂಪವನ್ನು ಕೊಡಲು ಒಂದು ಶಾಲೆಯನ್ನು ತೆರೆಯಲು ಯೋಚಿಸಿದರು. ಮಕ್ಕಳ ಬಾಲ್ಯದ ಆಟ ಪಾಟಗಳು ವಿವಿಧ ರೀತಿಯ ಚಟುವಟಿಕೆಗಳು ಮುಂದಿನ ಜೀವನದ ವಿಕಾಸಕ್ಕೆ ಅನಿವಾರ್ಯದ ಅಂಶಗಳೆಂದು ತಿಳಿದ ಕಾರಂತರು ಮಕ್ಕಳ ಆಟ ಪಾಟಗಳ ಜೊತೆಗೆ ವಿದ್ಯಾಭ್ಯಾಸವನ್ನು ಕಲಿಸಲು ಪ್ರಯತ್ನಿಸಿದರು. ಅಂಥಹ ವಾತಾವರಣವನ್ನು ನಿರ್ಮಿಸಿ

ಮಕ್ಕಳಿಗೆ ಆಟಗಳ ಮೂಲಕ, ಪಾಠಗಳನ್ನು ರೂಪಿಸಿ ಕಾರ್ಯರೂಪಕ್ಕೆ ತರಬೇಕೆಂಬ ಹಂಬಲವನ್ನು ಹೊಂದಿದ್ದರು. ಪುತ್ತೂರಿನ ಸಮೀಪ ಆರು ಎಕರೆ ಜಮೀನನ್ನು ಮೊಳಹಳ್ಳಿ ಶಿವರಾಯರು ಕಾರಂತರಿಗೆ ಕೊಡಿಸಿದ್ದರು. ಈ ಜಾಗದ ಎದುರಿಗೆ ಐದುನೂರು ಅಡಿಗಳಷ್ಟು ಉನ್ನತವಾದ **ಬಿರುಮಲೆ** ಎಂಬ ಗುಡ್ಡವಿತ್ತು. ಆ ಜಾಗದಲ್ಲಿ ಗಿಡ ಮರಗಳು ಸಾಕಷ್ಟು ಸಂಖ್ಯೆಯಲ್ಲಿ ಬೆಳೆದಿದ್ದವು. ಬೇಕಾದಷ್ಟು ನೀರು ಇತ್ತು. ಈ ಸ್ಥಳದಲ್ಲಿ ಶಿವರಾಮ ಕಾರಂತರು ತಮ್ಮ ಶಿಕ್ಷಣ ಚಿಂತನೆಯ ವಿಧಾನಕ್ಕೆ ಒಂದು ಪ್ರಾಯೋಗಿಕ ರೂಪವನ್ನು ಕೊಡುವುದರ ಸಲುವಾಗಿ ಶಾಲೆಯನ್ನು ಸ್ಥಾಪನೆ ಮಾಡಿದರು. ಈ ಸ್ಥಳಕ್ಕೆ ಬಾಲವನ ಎಂದು ಹೆಸರಿಟ್ಟರು. **ಕಿಂಡರ್ ಗಾರ್ಡನ್** ಎಂಬ ಪದದ ಅನುವಾದವೇ ಬಾಲವನ.

೧೯೩೬ರಲ್ಲಿ ಬಾಲವನ ಎಂಬ ಈ ಶಾಲೆಯನ್ನು ಆರಂಭ ಮಾಡಿದ ಕಾರಂತರು ಸ್ಥಳೀಯರ ಸಹಕಾರದೊಂದಿಗೆ ದಾನಿಗಳು ನೀಡಿದ ವಸ್ತುಗಳಿಂದ ಕಟ್ಟಡವನ್ನು ನಿರ್ಮಾಣ ಮಾಡಿದರು. ಮುಂದಿನ ದಿನಗಳಲ್ಲಿ ತನ್ನ ಬರವಣಿಗೆಯ ಸಂಭಾವನೆಯಿಂದ ನಡೆಯಿಸಿಕೊಂಡು ಹೋದರು. ಮಕ್ಕಳಿಗೆ ಚಟುವಟಿಕೆಯಿಂದ ಕೂಡಿದ ಶಿಕ್ಷಣ ಕೊಡುವುದೇ ಬಾಲವನದ ಉದ್ದೇಶವಾಗಿತ್ತು. ಮಗುವಿನ ಸಹಜ ಪ್ರವೃತ್ತಿಯ ವಿಕಾಸಕ್ಕೆ ಬೇಕಾದ ಪರಿಸರವನ್ನು ಒದಗಿಸಿ ಕೊಡುವುದು. ಶಿಕ್ಷಣ ಕ್ರಿಯಾತ್ಮಕವಾಗಿರಬೇಕು. ಚಟುವಟಿಕೆಗಳ ಮೂಲಕ ದೊರೆಯುವ ಶಿಕ್ಷಣವೇ ಮಕ್ಕಳಿಗೆ ನಿಜವಾದ ಶಿಕ್ಷಣ. ಸ್ವಾಭಾವಿಕ ಪ್ರವೃತ್ತಿಗಳು ವಿಕಾಸಗೊಳ್ಳಲು ಆಟ ಅವಶ್ಯಕವಾದದ್ದು. ಮಗು ತನ್ನ ಸಹಜ ಪ್ರವೃತ್ತಿಗಳನ್ನು ಆಟದಲ್ಲಿ ವ್ಯಕ್ತಪಡಿಸುವುದರಿಂದ ಆಟವಾಡಲು ಹೆಚ್ಚು ಅವಕಾಶ ಸಿಕ್ಕಿದಲ್ಲಿ ಮಗುವಿನ ಅಭಿರುಚಿ ಪ್ರವೃತ್ತಿಗಳ ಅಧ್ಯಯನ ಮಾಡಿ ಅದಕ್ಕನುಗುಣವಾದ ಶಿಕ್ಷಣ ಕೊಡಲು ಅನುಕೂಲವಾಗುವ ದೃಷ್ಟಿಯಿಂದ ಕಲಿಯುವ ಮಗುವಿಗೆ ಸ್ವಾಭಾವಿಕ ಪ್ರವೃತ್ತಿಗಳು, ವಿಕಾಸಗಳು ಸ್ವತಂತ್ರವಾಗಿ ಬೆಳೆಯುವ ವಾತವರಣವನ್ನು ನಿರ್ಮಿಸಿದರು.

ಮಕ್ಕಳು ಸಂತೋಷದಿಂದ ಆಟವಾಡಲು ಬಾಲವನದಲ್ಲಿ ೨೦೦ ಅಡಿ ಉದ್ದಕ್ಕೆ ಕಬ್ಬಿಣದ ಹಳಿಗಳನ್ನು ಹಾಕಿ ಮಕ್ಕಳ ರೈಲನ್ನು ತಯಾರಿಸಿಕೊಟ್ಟರು. ಹಾಗೆಯೇ ಜಾರು ಬಂಡಿ ಆಟಕ್ಕಾಗಿ ಹತ್ತಿ ಇಳಿಯುವ ಏಣಿಗಳ ಅಟ್ಟಣಿಗೆ ಮಾಡಿದ್ದರು. ಅಲ್ಲೆ ಜಿಂಕೆ, ಕಡವೆಗಳಂತಹ ಪ್ರಾಣಿಗಳ ಒಂದು ಮೃಗಾಲಯವನ್ನು ನಿರ್ಮಾಣ ಮಾಡಿದರು. ಪ್ರಾಣಿಪಕ್ಷಿಗಳು ವಾಸವಾಗಿರಲು ಅನುಕೂಲ ಕರವಾದ ಒಂದು ಹಕ್ಕಿಯ ಮನೆ ತಯಾರಿಸಿದರು. ದೊಡ್ಡ ಪ್ರಾಣಿಗಳಿಗಾಗಿ ಪಂಜರ ತಯಾರು ಮಾಡಿದರು.

ಶಿಕ್ಷಣದ ಚಿಂತನೆ, ಸಿದ್ಧಾಂತಗಳು ಮೂರ್ತರೂಪದ ಪ್ರಯೋಗದಲ್ಲೇ ಅದು ಸಾಕಾರ ಗೊಳ್ಳುವುದು ಮತ್ತು ತನ್ನ ಮಿತಿಯನ್ನು ಕಂಡುಕೊಳ್ಳಲು ಸಾದ್ಯವಾಗುವುದು. ಬಾಲವನದ

ಮೂಲಕ ಕಾರಂತರು ಒಂದು ಪ್ರಯೋಗಶೀಲ ವ್ಯವಸ್ಥೆಯೊಂದನ್ನು ರೂಪಿಸಿದರೂ ಅದು ತನ್ನ ಉತ್ಕೃಷ್ಟ ಫಲಿತಾಂಶವನ್ನು ತೋರಿಸುವಲ್ಲಿ ಒಂದು ಮಾದರಿ ವ್ಯವಸ್ಥೆಯಾಗಿ ನಿಲ್ಲಲಿಲ್ಲ ಎಂಬುದು ಒಂದು ದುರಂತ ಎಂದೇ ಹೇಳಬೇಕು. ಪುತ್ತೂರಿನ ಬಾಲವನವು ಪ್ರಾರಂಭದಲ್ಲಿ ಕಾರಂತರ ಕಲ್ಪನೆ ಆದರ್ಶಗಳನ್ನು ಮೇಳವಿಸಿದ ಶಾಲೆಯಾಗಿತ್ತು. ಇಲ್ಲಿ ಮಕ್ಕಳಿಗೆ ಶಿಕ್ಷಣವನ್ನು ಬಲವಂತವಾಗಿ ಹೇರದೆ ಮನಸ್ಸಿನಲ್ಲೇ ಅರಳುವಂತೆ ಮಾಡುವ ಹಲವಾರು ಕಾರ್ಯಕ್ರಮಗಳನ್ನು ಕೈಗೊಂಡಿದ್ದರು. ಮಕ್ಕಳು ತಮ್ಮ ಸುತ್ತಲಿನ ಪ್ರಕೃತಿಯನ್ನು ನೋಡುವ ಅರ್ಥಮಾಡಿಕೊಳ್ಳುವ ಅವಕಾಶವನ್ನು ಕಾರಂತರು ಇಲ್ಲಿ ಕಲ್ಪಿಸಿದ್ದರು.

ಈ ಬಾಲವನದ ಕಲ್ಪನೆ ಪ್ರಾಚೀನ ಶಿಕ್ಷಣ ವ್ಯವಸ್ಥೆಯ ಆಶ್ರಮ ವ್ಯವಸ್ಥೆ ಅಥವಾ ಗುರುಕುಲ ಮಾದರಿಗಿಂತ ಭಿನ್ನವಾಗಿತ್ತು. ಶಿವರಾಮ ಕಾರಂತರಿಗೆ ಆರಂಭದಲ್ಲಿ ಆಶ್ರಮ ಮಾದರಿಯ ಕಲ್ಪನೆ ಮೂಡಿದ್ದರೂ ಅದು ಕಂಠಪಾಠವನ್ನು ಆಧರಿಸಿದ್ದರಿಂದ ಮಕ್ಕಳಿಗೆ ಕಟ್ಟುನಿಟ್ಟಾದ ಶಿಸ್ತನ್ನು ಹೇರುವ ರೀತಿಯ ಕಲ್ಪನೆಯಾದುದರಿಂದ ಕಾರಂತರಿಗೆ ಅದು ಹಿಡಿಸಲಿಲ್ಲ. ಮಕ್ಕಳ ಎಳೆತನದ ಆಟ ಪಾಟಗಳು ಆ ಬಗೆಯ ಚಟುವಟಿಕೆಗಳು ಅವರ ಜೀವನದ ವಿಕಾಸಕ್ಕೆ ಅನಿವಾರ್ಯದ ಅಂಶಗಳು ಎಂದು ಎನಿಸುವಂತೆ ತಮ್ಮ ಸುತ್ತಲಿನ ಜಗತ್ತಿನ ನಿಕಟ ಪರಿಚಯವಾಗುವ ನಿಟ್ಟಿನಲ್ಲಿತ್ತು. ಕಾರಂತರು ಸಾಕಷ್ಟು ಸಮಯ ಮಂಗಳೂರಿನಲ್ಲಿರುತ್ತಿದ್ದರಿಂದ ಮಕ್ಕಳಿಗೆ ಶಾಲೆಯನ್ನು ಕಲಿಸಲು ಇಬ್ಬರನ್ನು ನೇಮಿಸಿಕೊಂಡರು. ಅವರಲ್ಲಿ ಒಬ್ಬರು ಮನೆಯಲ್ಲಿಯೇ ಇದ್ದು ಅಲ್ಲಿ ವಾಸಿಸುವ ಮಕ್ಕಳನ್ನು ನೋಡಿಕೊಳ್ಳಬೇಕಾಗಿತ್ತು. ಆದರೆ ಶಾಲೆಯನ್ನು ತೆರೆದ ನಂತರ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಬರಲಿಲ್ಲ. ಸರಕಾರದಿಂದ ಅಂಗೀಕೃತವಾದ ಪ್ರಾಥಮಿಕ ಶಾಲೆಗಳನ್ನು ಬಿಟ್ಟು ಖಾಸಗಿ ಶಾಲೆಗಳಿಗೆ ಸೇರಿಸಿದರೆ ಮಕ್ಕಳ ಗತಿಯೇನು ಎಂಬ ಅಭಿಪ್ರಾಯವನ್ನು ಊರಿನ ಜನರು ಹೊಂದಿದ್ದರು. ಕಾರಂತರಿಗೆ ಇದರಿಂದ ತುಂಬಾ ಬೇಸರವಾಯಿತು. ಸಂಜೆಯ ಹೊತ್ತಿಗೆ ಆ ಊರಿನ ಹಲವಾರು ವಿದ್ಯಾರ್ಥಿಗಳು ಬಾಲವನಕ್ಕೆ ಬರುತ್ತಿದ್ದರು. ಆದರೆ ಕಲಿಯುದಕ್ಕೆ ಬರುತ್ತಿರಲಿಲ್ಲ.

> ಅವರು ಬರುತ್ತಿದ್ದುದು ನನ್ನ ಶಾಲೆಗಲ್ಲ. ಅಲ್ಲಿ ಒದಗಿಸಿದ ಕ್ರೀಡಾ ವಿನೋದಗಳ ಸಲುವಾಗಿ[೫] ಎಂದು ಹೇಳುತ್ತಾರೆ.

ಈ ಶಾಲೆಯನ್ನು ಕಟ್ಟಲು ಕಾರಂತರು ಬಹಳಷ್ಟು ಶ್ರಮಪಟ್ಟಿದ್ದರು. ಆಟದ ಮೂಲಕ ಪಾಟವನ್ನು ಕಲಿಸಬೇಕಾದರೆ ಒಂದೊಂದು ತರಗತಿಯಲ್ಲಿ ಸುಮಾರು ೨೫ ಮಕ್ಕಳಾದರೂ ಇರಬೇಕಾಗುತ್ತಿತ್ತು. ಆರಂಭದಲ್ಲಿ ಈ ಶಾಲೆಗೆ ಮೂರು ಬಡ ವಿದ್ಯಾರ್ಥಿಗಳು ಬರತೊಡಗಿದರು. ಇವರ ಜೊತೆಗೆ ನಾಲ್ಕೈದು ಅನಾಥ ವಿದ್ಯಾರ್ಥಿಗಳನ್ನು ಸೇರಿಸಿದರು. ಮುಖ್ಯವಾಗಿ ಈ

ಶಾಲೆಗೆ ಪಠ್ಯಕ್ರಮವನ್ನು ಸ್ವತ ಕಾರಂತರೆ ರೂಪಿಸಿದರು. ಮಕ್ಕಳ ಭಾಷಾ ಶಿಕ್ಷಣಕ್ಕೆ ಬೆಲ್ಲಾರ್ಡನ ಸೂತ್ರಗಳನ್ನು ಅನುಸರಿಸಿ ವಾಕ್ಯದಿಂದ ಭಾಷೆಯನ್ನು ಕಲಿಸುವ ಕ್ರಮವನ್ನು ತಿಳಿಸಿಕೊಟ್ಟರು. ಗಣಿತದಲ್ಲಿ ಕೂಡುವಿಕೆ ಮತ್ತು ಕಳೆಯುವಿಕೆಯ ಕಲ್ಪನೆಯು ಬರುವುದಕ್ಕೆ ಪ್ಲೈವುಡ್ಡಿನ ಆಕೃತಿಗಳ ಬದಲಿಗೆ ಹೊಸ ವಿಧಾನವನ್ನು ರೂಪಿಸಿದರು. ಅಂಕೆಗಳ ಸಂಬಂಧ ಆಕಾರದ ಕಲ್ಪನೆ, ಕಣ್ಣಿನಿಂದ ಮನಸ್ಸಿಗೆ ಹೊಳೆಯುವ ರೀತಿಯಲ್ಲಿ ವಿವಿಧ ರೀತಿಯ ಸಲಕರಣೆಗಳನ್ನು ಒದಗಿಸಿದರು,

> ಕೂಡಿಸುವ, ಗುಣಿಸುವ, ಸಣ್ಣ ಲೆಕ್ಕ ಮೊದಲಾದುವಕ್ಕೆ ನಾನು ಹೊಸ ಬಗೆಯ ಇಸ್ಪೀಟು ಆಟವನ್ನು ರೂಪಿಸಿದೆ. ಸಾಮಾನ್ಯ ಇಸ್ಪೀಟು ಕಾರ್ಡುಗಳ ಮೇಲೆ ಕಾಣಿಸುವ ಡೈಮಂಡ್ ಕಳಾವರ, ಮೊದಲಾದ ಚಿಹ್ನೆಗಳ ಬದಲು ಒಂದರಿಂದ ಹತ್ತರ ತನಕ ಹಕ್ಕಿ ಹೂವು, ಹಣ್ಣುಗಳ ಚಿತ್ರಗಳನ್ನು ಮುದ್ರಿಸಿ ಆಟದ ಮೂಲಕ ಮಕ್ಕಳು ಲೆಕ್ಕ ಕಲಿಯುವ ಸಲಕರಣೆಯನ್ನು ಒದಗಿಸಿದೆ[೬]

ಹೀಗೆ ಮಕ್ಕಳಿಗೆ ಸುಲಭವಾಗಿ ಅಂಕಿಗಳನ್ನು ನೆನಪಿನಲ್ಲಿಟ್ಟುಕೊಳ್ಳಲು ನೂತನ ಪ್ರಯೋಗಗಳನ್ನು ಮಾಡಿದರು. ಈ ಆವರಣದಲ್ಲಿ ಮಕ್ಕಳು ಕಂಡ ಯಾವುದೇ ವಿಷಯವನ್ನು ಕೇಳಿದಾಗಲೆಲ್ಲಾ ಉಪಾಧ್ಯಾಯರು ಉತ್ತರಿಸುತ್ತಿದ್ದರು. ಇದೇ ಅವಧಿಯಲ್ಲಿ ಕಾರಂತರ ಮದುವೆಯಾದುದರಿಂದ ಅವರ ಹೆಂಡತಿಯು ಬಾಲವನಕ್ಕೆ ಶಿಕ್ಷಕಿಯಾಗಿ ನೆರವಾದಳು, ಬಾಲವನದ ಶಿಕ್ಷಣದ ಕ್ರಮದಲ್ಲಿ ಕಾರಂತರು ಹಲವಾರು ಪ್ರಯೋಗಗಳನ್ನು ಮಾಡಿದರು. ಕಲಿಯುವ ಮಕ್ಕಳಿಗೆ ನಿರಾಸಕ್ತಿ ಬರುವಂತೆ ಪಠ್ಯಕ್ರಮವಿರಕೂಡದು ಎನ್ನುವುದು ಅವರ ಚಿಂತನೆಯಾಗಿತ್ತು.

> ಎಂದೂ ಮಗುವಿನ ಬುದ್ಧಿಶಕ್ತಿಯನ್ನು ಕೆಣಕುವುದಕ್ಕಾಗಿಯೇ ನಾವು ಲೆಕ್ಕದ ಪಾಠವನ್ನು ರೂಪಿಸಬಾರದು ೧೫ ಮನುಷ್ಯರಲ್ಲಿ ೭೮ ಬಾಳೆ ಹಣ್ಣುಗಳನ್ನು ಹೇಗೆ ಹಂಚುತ್ತೀರಿ ಅಥವಾ ಒಂದು ದನಕ್ಕೆ ರೂ. ೬ ಆಣೆ ೩ ಪೈಸೆ ಆದರೆ ೧೩ ದನಗಳ ಕ್ರಮವೆಷ್ಟು? ಇಂಥ ಅವಿವೇಕದ ಸಮಸ್ಯೆಗಳನ್ನು ಅವರ ಮುಂದಿಡಕೂಡದು[೭] ಎನ್ನುತ್ತಾರೆ.

ಮಕ್ಕಳಿಗೆ ಪ್ರಾಥಮಿಕ ಹಂತದಲ್ಲಿ ಲೆಕ್ಕಗಳನ್ನು ವಿವಿಧ ಆಟಗಳ ಮುಖಾಂತರ ಕಲಿಸಲು ಪ್ರಯತ್ನಿಸಿದರು. ಮಕ್ಕಳನ್ನು ಆಟವಾಡುತ್ತಲೇ ಗಣಿತದ ಪಾಟಗಳನ್ನು ಕಲಿಸಬಹುದು ಎಂಬುದನ್ನು ತೋರಿಸಿಕೊಟ್ಟರು. ಅವರ ಕಲ್ಪನೆಗೆ ಮೀರಿದ ದೊಡ್ಡ ಸಂಖ್ಯೆಗಳಿಂದ ಮಕ್ಕಳನ್ನು ಹೆದರಿಸಬಾರದು ಎನ್ನುತ್ತಾರೆ. ಅವರ ಆಯುಷ್ಯದಲ್ಲಿಯೇ ಬರಲಾರದ ಅಂಕೆ ಸಂಖ್ಯೆ ಪ್ರಮೇಯಗಳನ್ನು ಪುಸ್ತಕದಲ್ಲಿ ಸೇರಿಸುವುದರಿಂದ ಮಕ್ಕಳಲ್ಲಿ ಗಣಿತದ ವಿಷಯದಲ್ಲಿ ಭಯ ಹುಟ್ಟುತ್ತದೆ. ನಿತ್ಯ ಜೀವನದಲ್ಲಿ ವ್ಯವಹಾರದಲ್ಲಿ ಬರುವ ಲೆಕ್ಕಗಳನ್ನು ತಿಳಿಸಿ, ಅವಾಸ್ತವಿಕ ದೃಷ್ಟಿಯು ಮಕ್ಕಳಿಗೆ ತಿಳಿದಿರುವ ಜ್ಞಾನವನ್ನು ಕೆಡಿಸಲು ಕಾರಣವಾಗುತ್ತದೆ ಎಂದು ಎಚ್ಚರಿಸುತ್ತಾರೆ.

ಕಾರಂತರು ಬಾಲವನವನ್ನು ನಡೆಸುವುದಕ್ಕೂ ಬಹಳಷ್ಟು ಶ್ರಮಪಟ್ಟರು. ಈ ಶಾಲೆಗೆ ಇಬ್ಬರು ಶಿಕ್ಷಕರನ್ನು ಸಂಬಳದ ಮೇಲೆ ನೇಮಿಸಿಕೊಂಡರು. ಅಲ್ಲಿ ನೆಲೆಸಿರುವ ಮಕ್ಕಳ ಊಟ ವಸತಿ ಅದರ ಸಂಪೂರ್ಣ ಖರ್ಚು ವೆಚ್ಚವನ್ನು ಇವರೇ ಭರಿಸುತ್ತಿದ್ದರು. ಆ ಕಾಲದಲ್ಲಿ ಅವರಿಗೆ ಇಷ್ಟೆಲ್ಲಾ ಕೆಲಸಗಳಿಗೆ ನೂರಾರು ರೂಪಾಯಿಗಳು ಬೇಕಾಗುತ್ತಿತ್ತು. ಅಲ್ಲದೆ ಅಲ್ಲಿರುವ ಪಶು ಪಕ್ಷಿಗಳಿಗೂ ಅವರು ಆಹಾರವನ್ನು ಒದಗಿಸಬೇಕಾಗಿತ್ತು. ಈ ಶಾಲೆಯ ಕಟ್ಟಡಕ್ಕೆ ಮಾಡಿದ ಸಾಲದ ಹೊರೆಯು ಇವರ ಮೇಲಿತ್ತು. ಈ ಎಲ್ಲಾ ಕಾರಣಗಳಿಂದ ಕೆಲವರಿಗೆ ಆರ್ಥಿಕ ನೆರವನ್ನು ನೀಡುವಂತೆ ಕೋರಿದರು. ಆದರೆ ಅವರಿಂದ ಸಹಾಯ ಸಿಗಲಿಲ್ಲ. ಈ ಶಾಲೆಯಲ್ಲಿ ಸುಮಾರು ಏಳರಿಂದ ಎಂಟು ಮಂದಿ ವಿದ್ಯಾರ್ಥಿಗಳಿದ್ದರು. ಅವರಲ್ಲಿ ಹೆಚ್ಚಿನ ವಿದ್ಯಾರ್ಥಿಗಳು ಅನಾಥರಾಗಿದ್ದರು. ಕಾರಂತರೆ ಹೇಳುವಂತೆ,

> ಒಂದೊಂದು ತರಗತಿಯಲ್ಲಿ ಆರೆಂಟು ಮಕ್ಕಳಾದರೂ ಬೇಕು ನಾನು ಕೇವಲ ಮೂರು ತರಗತಿಗಳನ್ನು ಅವಕ್ಕೆ ೨೫ ಮಕ್ಕಳಾದರೂ ಬೇಕು. ಆರಂಭದಲ್ಲಿ ಸಮೀಪದದ ಮೂವರು ಬಡ ಮಕ್ಕಳು ಅಲ್ಲಿಗೆ ಬರತೊಡಗಿದರು. ಅವರ ಜೊತೆಗೆ ಹೊರಗಿಂದ ಮೂರ್ನಾಲ್ಕು ಮಂದಿ ಅನಾಥರನ್ನು ತಂದು ಹಾಕಿ ಒಟ್ಟಿಗೆ ಹತ್ತು ಮಂದಿ ವಿದ್ಯಾರ್ಥಿಗಳನ್ನು ಕೂಡಿಸಲು ಸಾಕುಬೇಕಾಯಿತು.[೮]

ಎಂದು ವಿಷಾದವನ್ನು ವ್ಯಕ್ತಪಡಿಸುತ್ತಾರೆ. ಸಮಾಜದ ಹಾಗೂ ಜನತೆಯ ಬೆಂಬಲವೂ ಜೊತೆಯಾಗಿದ್ದರೆ ಕಾರಂತರ ಬಾಲವನವು ಠಾಕೂರರ ಶಾಂತಿನಿಕೇತನದ ಹಾಗೆಯೇ ಬೆಳೆಯಬಹುದಾಗಿತ್ತು. ಮುಂದೆ ಈ ಶಾಲೆಯ ಶಿಕ್ಷಕರು ಬಾಲವನವನ್ನು ಬಿಟ್ಟು ಹೋದ ಮೇಲೆ ಇವರು ಹತಾಶರಾಗಿ ಬಾಲವನದ ಪ್ರಯೋಗಗಳನ್ನು ನಿಲ್ಲಿಸಬೇಕಾದ ಪರಿಸ್ಥಿತಿ ಉಂಟಾಯಿತು. ಬಾಲವನವೆಂಬುದು ಊರಿನ ಮಕ್ಕಳ ಸಂದರ್ಶನದ ಕ್ಷೇತ್ರವಾಯಿತು. ಆ ಕಾಲದಲ್ಲಿ ವಸಾಹತು ಶಿಕ್ಷಣ ಕ್ರಮಕ್ಕಿಂತ ಭಿನ್ನವಾಗಿ ಬಾಲವನವನ್ನು ಸ್ಥಾಪಿಸಿ ನೂತನ ಪ್ರಯೋಗಗಳನ್ನು ಮಾಡಿದ ಕಾರಂತರಿಗೆ ಪುತ್ತೂರಿನ ಜನರು ಸಹಕರಿಸಿದ್ದರೆ ಇನ್ನೂ ಉತ್ತಮವಾದ ಪ್ರಯೋಗಗಳನ್ನು ಕೈಗೊಂಡು ಶಿಕ್ಷಣ ಕ್ರಮದಲ್ಲಿ ಹೊಸ ವ್ಯವಸ್ಥೆಯನ್ನು ಸೃಷ್ಟಿಸುತ್ತಿದ್ದರು. ಮಕ್ಕಳ ಅಭಾವ ಜನರ ಬೆಂಬಲ ಸಿಗದೇ ಬಾಲವನವು ನಿಂತು ಹೋಯಿತು.

**ಶಿವರಾಮ ಕಾರಂತರ ಮಕ್ಕಳ ಪಠ್ಯಪುಸ್ತಕಗಳು**

ಕಾರಂತರು ಸುಮಾರು ಮೂವತ್ತರ ದಶಕದಲ್ಲಿ ಮೊಳಹಳ್ಳಿ ಶಿವರಾಯರು ನಡೆಸುತ್ತಿದ್ದ ಶಾಲೆಗಳಿಗೆ ಭೇಟಿ ನೀಡಿ ಆ ಶಾಲೆಯ ಚಟುವಟಿಕೆಗಳನ್ನು ಕುತೂಹಲದಿಂದ ಗಮನಿಸುತ್ತಿದ್ದರು. ಹೆಚ್ಚಿನ ಸಮಯವನ್ನು ಮಕ್ಕಳೊಂದಿಗೆ ಕಳೆಯುತ್ತಿದ್ದರು. ಇಂತಹ ಸಮಯದಲ್ಲಿ ವಿದ್ಯಾರ್ಥಿ

ಗಳೊಂದಿಗೆ ಬೆರೆತು ಹಲವಾರು ಪ್ರಶ್ನೆಗಳನ್ನು ಕೇಳುತ್ತಿದ್ದರು. ಮಕ್ಕಳ ಮನಸ್ಸನ್ನು ತಿಳಿಯುವುದಕ್ಕೆ ಪ್ರಯತ್ನ ಮಾಡುತ್ತಿದ್ದರು. ವಸಾಹತು ಕಾಲದಲ್ಲಿ ಧರ್ಮ ಪ್ರಚಾರಕ್ಕೆ ಬಂದ ಕ್ರೈಸ್ತಪಾದ್ರಿಗಳು ಧರ್ಮ ಪ್ರಸಾರದ ಜೊತೆಗೆ ಶಾಲೆಗಳನ್ನು ಸ್ಥಾಪನೆ ಮಾಡಿದರು. ಈ ಕ್ರಿಶ್ಚಿಯನ್ ಶಾಲೆಗಳ ಮೇಲೆ ಕಾರಂತರಿಗೆ ತುಂಬಾ ಅಸಮಾಧಾನವಿತ್ತು. ಏಕೆಂದರೆ ಈ ಶಾಲೆಗಳಲ್ಲಿ ಎಳೆಯ ಮಕ್ಕಳನ್ನು ದಿನಾ ಬೆಳಗ್ಗೆಯಿಂದ ಸಂಜೆಯವರೆಗೆ ಸುಮಾರು ಐದಾರು ಗಂಟೆಗಳ ಕಾಲ ಒಂದೇ ಕೋಣೆಯಲ್ಲಿ ಕೂಡಿಸಿ ಓದಿಸಿ ಬರೆಯಿಸುವ ಕ್ರಮವಿತ್ತು. ಪಠ್ಯಗಳಲ್ಲಿರುವ ವಿಷಯವನ್ನು ಯಥವತ್ತಾಗಿ ವಿದ್ಯಾರ್ಥಿಗಳಿಗೆ ಕಲಿಸುವುದರಿಂದ ವಿದ್ಯಾರ್ಥಿಗಳು ಮೂಕರಂತಿರು ತ್ತಿದ್ದರು. ಕಾರಂತರೇ ಹೇಳುವಂತೆ

> ಆ ಮಕ್ಕಳಲ್ಲಿ ಸ್ವಂತಕ್ಕೆ ಬುದ್ಧಿಯೇ ಇಲ್ಲ. ಉಪಾಧ್ಯಾಯರು ತುಂಬಿಸುವ ಜ್ಞಾನವಷ್ಟೇ ಅಮೂಲ್ಯ ಎಂಬ ಭಾವನೆ ನನ್ನಲ್ಲಿ ಆಶ್ಚರ್ಯ ಹುಟ್ಟಿಸಿತ್ತು. ಕೆಳ ತರಗತಿಗಳಲ್ಲಿ ಭಾಷಾ ಪಾಠ ಹೇಳುವಾಗ ಒಂದು ಮಗು ಒಂದು ವಾಕ್ಯವನ್ನು ಓದಿದರೆ ಎರಡನೆಯ ಮಗು ಅದನ್ನೇ ಓದಬೇಕು. ಅದೇ ರೀತಿ ಕ್ಲಾಸಿನ ಎಲ್ಲರೂ ಓದಬೇಕು. ಆಗ ಪುಸ್ತಕ ನೋಡದೆ ಮುಂದಿನ ಮಕ್ಕಳು ಆ ವಾಕ್ಯಗಳನ್ನು ಕೇಳಿ ಅವನ್ನೇ ತಿರುಗಿ ಹೇಳುವುದು ಗೊತ್ತಾಗುತ್ತಿತ್ತು. ಈ ಪುನರಾವರ್ತನೆ ಮಕ್ಕಳಿಗೆ ಬೇಸರ ಹುಟ್ಟಿಸದಿದ್ದಿತೇ ಎಂಬ ಶಂಕೆ ನನಗೆ

ಕ್ರಿಶ್ಚಿಯನ್ ಶಾಲೆಗಳಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ತಮಗೆ ತಿಳಿದುದ್ದನ್ನು ಹೇಳಬೇಕೆಂಬ ಹಂಬಲವಿದ್ದರೂ ಹೆಳುವುದಕ್ಕೆ ಅವಕಾಶವಿರಲಿಲ್ಲ. ಮಕ್ಕಳಲ್ಲಿ ತಾವಾಗಿ ತಿಳಿದದ್ದನ್ನು ಹೇಳಬೇಕೆಂಬ ಪ್ರವೃತ್ತಿಯು ಬೆಳೆಯದೇ ಹೋದರೆ ಅವರಲ್ಲಿ ಭಾಷೆಯ ಅಭಿವೃದ್ಧಿ ಬೆಳೆಯಲಾರದು ಎನ್ನುವುದು ಕಾರಂತರ ಅಭಿಪ್ರಾಯವಾಗಿತ್ತು. ಇದು ಕೂಡ ಕಾರಂತರ ಪಠ್ಯಪುಸ್ತಕ ರಚನೆ ಮಾಡಲು ಕಾರಣವಾಯಿತು.

ಚಿತ್ರಗಳನ್ನು ಬಿಡುಸುವಲ್ಲಿ ಶಿಕ್ಷಕರು ಬೋರ್ಡಿನ ಮೇಲೆ ಬರೆದ ಚಿತ್ರಗಳನ್ನೇ ಮಕ್ಕಳು ನೋಡಿ ಬರೆಯಬೇಕು. ಪ್ರತಿ ದಿನಾ ತಮ್ಮ ಸುತ್ತ ಮುತ್ತ ಕಾಣುವ ಪ್ರಾಣಿ ಪಕ್ಷಿಗಳ ಆಕೃತಿ ಅಂಗ ರಚನೆಗಳನ್ನು ಮರೆತು ಬೋರ್ಡಿನ ಮೇಲೆ ಬರೆದ ಎರಡು ಸೊನ್ನೆಗಳಿಗೆ ಬಾಲ ಕಿವಿ ಕಣ್ಣುಗಳನ್ನು ಸೇರಿಸಿದರೆ ಪ್ರಾಣಿಗಳು ಆಗುತ್ತವೆ ಎನ್ನುವ ತಿರ್ಮಾನವನ್ನು ಮಕ್ಕಳಿಗೆ ಕಲಿಸಲಾಗುತ್ತದೆ. ಮಕ್ಕಳು ತಾವಾಗಿ ಬರೆಯುವ ಚಿತ್ರ ಲಕ್ಷಣಗಳು ಸಂಕೇತ ರೂಪದವು ವಾಸ್ತವಿಕ ಚಿತ್ರಗಳು ಬೇರೆ ಜಾತಿಯವು. ವಸ್ತುವನ್ನು ಕಣ್ಣಿನ ಮುಂದೆ ಇರಿಸಿಕೊಂಡು ಅವುಗಳ ಆಕೃತಿಗಳನ್ನು ಅನುಸರಿಸುವ ರೀತಿಯವು. ಶಾಲಾ ಶಿಕ್ಷಣದ ಚಿತ್ರಗಳಲ್ಲಿ ಈ ಯಾವ ಗುಣಗಳು ಇರಲಿಲ್ಲ.

ಈ ಶಿಕ್ಷಣಾಲಯಗಳನ್ನು ಕಂಡ ನನಗೆ ಇವು ಮಕ್ಕಳ ದೊಡ್ಡಿಗಳು ಅಥವಾ ಕೂಡು ಹಟ್ಟಿಗಳು ಎಂಬ ಭಾವನೆ ಮೊಳೆಯಿತು.[೧೦] ಎನ್ನುತ್ತಾರೆ.

ಈ ಭಾವನೆಯೇ ಕೂಡ ಕಾರಂತರು ಮಕ್ಕಳ ಕೂಟಗಳನ್ನು ನಡೆಸಲು ಮತ್ತು ಪಠ್ಯಪುಸ್ತಕಗಳನ್ನು ರಚಿಸಲು ಪ್ರೇರಣೆ ಒದಗಿಸಿತು. ಕಾರಂತರು ಸುಮಾರು ೧೯೩೧ರಲ್ಲಿ ಮಂಗಳೂರಿನಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದಂತೆ ಏಳು ದಿನಗಳ ಕಾರ್ಯಕ್ರಮವನ್ನು ಹಮ್ಮಿಕೊಂಡರು. ಈ ಕಾರ್ಯಕ್ರಮದಲ್ಲಿ ಮುಖ್ಯವಾಗಿ ಪಠ್ಯಕ್ರಮದ ಚರ್ಚಾ ಗೋಷ್ಠಿಯಿತ್ತು. ಇದೆ ಅವಧಿಯಲ್ಲಿ ಅಂದಿನ ಮದ್ರಾಸು ಸರಕಾರ ಪ್ರಾಥಮಿಕ ಶಾಲೆಗಳ ಪಾಠದ ಪಟ್ಟಿಯನ್ನು ತಿದ್ದುಪಡಿ ಮಾಡಿತ್ತು. ಚರಿತ್ರೆ, ಭೂಗೋಳ, ಭಾಷಾಭ್ಯಾಸ ಈ ವಿಷಯಗಳು ಕಡ್ಡಾಯವಾಗಿದ್ದವು. ಈ ನಿಯಮವನ್ನು ಯಾರು ಮೀರುವಂತಿರಲಿಲ್ಲ. ಪಠ್ಯಕ್ರಮದಲ್ಲಿ ಏನಾದರೂ ದೋಷಗಳು ಕಂಡು ಬಂದರೆ ಶಿಕ್ಷಕರಿಗೆ ಪರಿಹಾರದ ಮಾರ್ಗವೇ ಇರಲಿಲ್ಲ. ಇಂತಹ ಶಿಕ್ಷಣ ಕುರಿತ ವಿಷಯಕ್ಕೆ ಸಂಬಂಧಿಸಿದಂತೆ ಹಲವಾರು ವಿಷಯಗಳನ್ನು ಚರ್ಚಿಸಲಾಯಿತು. ಇದರಲ್ಲಿ ಮುಖ್ಯವಾಗಿ ಅವರ ಗಮನ ಸೆಳೆದದ್ದು ಮಗುವಿನ ಭಾಷೆಗೆ ಅಂದಿನ ಗವರ್ನಮೆಂಟ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಸವೂರು ರಾಮರಾಯರು ಎನ್ನುವವರು ಭಾಷಾ ಶಿಕ್ಷಣ ಕ್ರಮದಲ್ಲಿ ತಂದಿದ್ದ ಬದಲಾವಣೆಯಲ್ಲಿ ಒಂದು ವಿಷಯ ಪ್ರಧಾನವಾಗಿತ್ತು. ಅದೇನೆಂದರೆ ಮಕ್ಕಳಿಗೆ ಅಕ್ಷರಗಳನ್ನು ಬಿಡಿ ಬಿಡಿಯಾಗಿ ಹೇಳಿಕೊಡದೆ 'ಅ ಆ ಇ ಈ' ರೀತಿ ಪಾಠವನ್ನು ಕಲಿಸದೆ ಶಬ್ದಗಳನ್ನು ಬಿಡಿಯಾಗಿ ಕಲಿಸಬೇಕೆಂಬ ಸೂತ್ರವಾಗಿತ್ತು. ಏಕೆಂದರೆ ಬಿಡಿ ಅಕ್ಷರಕ್ಕೆ ಅರ್ಥವಿರುವುದಿಲ್ಲ. ಶಬ್ದಕ್ಕೆ ಮಾತ್ರ ಅರ್ಥವಿರುತ್ತದೆ. ಬಿಡಿ ಅಕ್ಷರಗಳನ್ನು ಕೂಡಿಸಿ ಇಡೀ ಶಬ್ದಗಳನ್ನು ರಚಿಸುವಾಗ ಮಾನಸಿಕ ಶ್ರಮ ಅಧಿಕವಾಗಿ ವಾಕ್ಯವನ್ನು ಓದುವಾಗ ಶಬ್ದಗಳ ಅರ್ಥವೇ ಮರೆತುಹೋಗುತ್ತದೆ ಎನ್ನುವ ತತ್ವವನ್ನು ಮಂಡಿಸಿದರು. ಇದರಿಂದ ಪದಗಳ ಮೂಲಕವೇ ಶಬ್ದಗಳನ್ನು ಮಕ್ಕಳಿಗೆ ಕಲಿಸಬೇಕು ಎಂದು ಯೋಚನೆಯನ್ನು ಮಾಡಿದರು.

ಈ ಸಲುವಾಗಿ ನಾನು ಮೊದಲಿಗೆ ನನ್ನ ಜ್ಞಾನವನ್ನೇ ಹೆಚ್ಚಿಸಿಕೊಳ್ಳಬೇಕಾಯಿತು. ಇಂಗ್ಲೆಂಡಿನಲ್ಲಿ ಬೆಲಾರ್ಡ್ ಎಂಬ ಶಿಕ್ಷಣ ತಜ್ಞ ಒಂಟಿ ಅಕ್ಷರಗಳನ್ನು ತೋರಿಸದೆ ಒಂಟಿ ಶಬ್ದಗಳನ್ನು ತೋರಿಸದೆ ಇಡಿ ವಾಕ್ಯವನ್ನು ಹೇಳುವ ಕ್ರಮದಿಂದ ಭಾಷಾ ಪಾಠ ತೊಡಗ ಬೇಕು ಎಂಬ ವಿಚಾರ ಸೂಚಿಸಿದ್ದಾನೆ[೧೧] ಎನ್ನುತ್ತಾರೆ.

ಒಂದು ಶಬ್ದದ ಅರ್ಥ ಎಂಬುದು ಅದು ಸೇರಿಕೊಂಡ ವಾಕ್ಯವನ್ನು ಹೊಂದಿಕೊಂಡಿದೆ. ಆ ವಾಕ್ಯದ ರೂಪವು ವಿಷಯವನ್ನು ಹೊಂದಿದೆ. ಮಕ್ಕಳು ಭಾಷಾ ಪಾಠವನ್ನು ತೊಡಗುವ ಮುಂಚೆ ಆ ಭಾಷೆಯ ಮಾತುಗಳೆಲ್ಲವೂ ಮಗುವಿಗೆ ಕೇಳಿ ರೂಢಿಯಾಗಿರಬೇಕು. ನಂತರ

ಓದು ಬರಹ ಶಬ್ದಗಳ ನೆನಪಿನೊಡನೆ ಅದರಲ್ಲಿ ಸೇರಿಕೊಂಡ ಬಿಡಿ ಅಕ್ಷರಗಳ ನೆನಪೂ ಮಗುವಿಗೆ ಉಳಿಯಬೇಕು ಎನ್ನುವುದು ಆಲೋಚನೆಯಾಗಿತ್ತು.

೨೦ನೇ ಶತಮಾನದ ಪೂರ್ವದಲ್ಲಿ ಮಕ್ಕಳ ಪ್ರಾಥಮಿಕ ಪಠ್ಯಪುಸ್ತಕಗಳನ್ನು ಮದ್ರಾಸು ಸಂಸ್ಥಾನವು ಪ್ರಕಟಿಸುತ್ತಿತ್ತು. ಅಂದಿನ ಕಾಲದಲ್ಲಿ ಆರ್.ಎಮ್.ಸವೂರರು ಪಠ್ಯಪುಸ್ತಕದ ನಿರ್ದೇಶಕರಾಗಿದ್ದರು. ಭೂಗೋಳ, ಚರಿತ್ರೆ, ಭಾಷೆ, ಗಣಿತ, ಮೊದಲಾದ ಪಠ್ಯಪುಸ್ತಕಗಳನ್ನು ಪ್ರಕಟಿಸುತ್ತಿದ್ದರು. ಮಕ್ಕಳ ಭಾಷಾ ಪಠ್ಯಪುಸ್ತಕಗಳಲ್ಲಿ ಬಳಸುವ ಶಬ್ದಗಳ ಇತಿಮಿತಿ ಮುಂತಾದ ವಿಷಯಗಳಿಗೆ ನಿರ್ದಿಷ್ಟ ರೂಪವಿರಲಿಲ್ಲ. ಇಂತಹ ಪಠ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದ ಕಾರಂತರು

> ಮೊದಲನೇ ಪಠ್ಯ ಪುಸ್ತಕದಿಂದ ತೊಡಗಿ ಪ್ರಾಥಮಿಕ ಶಾಲೆಯ ಕೊನೆಯ ಹಂತದ ೭ನೇ ದರ್ಜೆಗೆ ಹೋಗುವಾಗ ಬೇಕು ಬೇಕಾದಂತೆ ಹೊಸ ಹೊಸ ಶಬ್ದಗಳನ್ನು ತುರುಕಿಸುತ್ತಾ ಹೋಗುವ ರೂಢಿಯೇನೋ ಬೆಳೆಯಿತು. ಅದರಿಂದ ಪುಸ್ತಕದ ಭಾಷೆ ಕ್ಲಿಷ್ಟವಾಗುತ್ತಾ ಸರಿಯಿತು. ಹೀಗೆ ಕ್ಲಿಷ್ಟವಾಗುವ ಶಬ್ದಗಳನ್ನು ಅವು ಕ್ಲಿಷ್ಟ ಎಂಬ ದೃಷ್ಟಿಯಿಂದ ಮಾತ್ರ ಉಪಯೋಗಿಸಬೇಕೇ ಅಥವಾ ಮಕ್ಕಳಿಗೆ ಕಲಿಸಿದ ಪದ ಸಂಪತ್ತು ಅವರ ಮನಸ್ಸನ್ನು ಬಿಂಬಿಸಲು ಅವಶ್ಯವಾಗು ವಂತಿರಬೇಕೇ?[೧೨]

ಎಂದು ಪ್ರಶ್ನಿಸುತ್ತಾರೆ. ಅಂದಿನ ಕಾಲದಲ್ಲಿ ಮಕ್ಕಳ ಮನೋಧರ್ಮಕ್ಕೆ ಅನುಗುಣವಾಗಿ ಪಠ್ಯಪುಸ್ತಕಗಳು ರಚನೆಯಾಗುತ್ತಿರಲಿಲ್ಲ. ಈ ಬಗ್ಗೆ ಯಾವ ಯೋಚನೆಯು ಇರಲಿಲ್ಲ ಎಂಬುದು ಈ ಮೇಲಿನ ವಾಕ್ಯದಿಂದ ಗೊತ್ತಾಗುತ್ತದೆ.

ಪಠ್ಯಪುಸ್ತಕಗಳನ್ನು ರಚನೆ ಮಾಡುವವರು ತಮಗೆ ಇಷ್ಟವಾದಂತಹ ಪದಗಳನ್ನು ಪಠ್ಯಗಳಲ್ಲಿ ಸೇರುಸುತ್ತಿದ್ದರು. ಮತ್ತು ಕ್ಲಿಷ್ಟವಾದ ಪದಗಳ ಪಟ್ಟಿಯನ್ನು ಕೊಡುತ್ತಿದ್ದರು. ಹಲವಾರು ಲೇಖಕರು ವಿಜ್ಞಾನದ ವಿಷಯಗಳನ್ನು ಸೇರಿಸಿ ಹೊಸ ಹೊಸ ಶಬ್ದಗಳನ್ನು ಸೇರಿಸುತ್ತಿದ್ದರು.

> ಗಿಡವನ್ನು ಕುರಿತಂತೆ ಪಾಠವನ್ನು ಸೇರಿಸಿದರೆ ಬೇರು, ತಾಯಿ ಬೇರು, ಕಾಂಡ, ತೊಗಟೆ, ದಿಂಡು, ನಾರು, ಹಸುರು, ಎಲೆ, ಪತ್ರ, ಹೂವು, ಮೊಗ್ಗು ಪುಷ್ಪಪಾತ್ರೆ, ಕೇಸರ, ಶಲಾಕ, ದಳ, ವಿವಿಧ ಬಣ್ಣಗಳು ಹೀಗೆ ಒಂದೆ ಪಾಠದಲ್ಲಿ ಹಲವಾರು ಹೊಸ ಶಬ್ದಗಳನ್ನು ತುರುಕಿಸಿದರು.[೧೩]

ಹೀಗೆ ಹೊಸ ಹೊಸ ಶಬ್ದಗಳನ್ನು ಸೇರಿಸುವುದರಿಂದ ಪಠ್ಯಪುಸ್ತಕವು ಅತ್ಯಂತ ಕ್ಲಿಷ್ಟಕರವಾದ ಶಬ್ದಗಳಿಂದ ತುಂಬಿತ್ತು. ಇದನ್ನೆಲ್ಲಾ ಕಂಡ ಕಾರಂತರು ನಾವು ಭಾಷೆಯನ್ನು ಕಲಿಸುವುದು ಯಾತಕ್ಕಾಗಿ? ಮತ್ತು ಕಲಿಸುವ ಅಂಶ ಯಾವುದು? ಮಗು ತನ್ನ ಅನುಭವ ಮತ್ತು ಜ್ಞಾನಗಳನ್ನು ಮತ್ತಷ್ಟು ಚೆನ್ನಾಗಿ ಸೂಕ್ಷ್ಮವಾಗಿ ತೊಡಿಕೊಳ್ಳುವುದಕ್ಕೆ ಯಾವ ಬಗೆಯ ಸಂಪತ್ತು

ಅನಿವಾರ್ಯ ಎಂದು ಹಲವಾರು ಪ್ರಶ್ನೆಗಳನ್ನು ಹಾಕಿಕೊಂಡರು. ಮಕ್ಕಳ ಪ್ರಾಥಮಿಕ ಪಠ್ಯಪುಸ್ತಕದಲ್ಲಿ ಭಾಷೆಯು ಸಾಹಿತ್ಯಕ ದೃಷ್ಟಿಯಿಂದ ಮಾತ್ರ ಒಂದೊಂದು ಹಂತದಲ್ಲಿ ಬೆಳೆಯುತ್ತಾ ಹೋಗಬೇಕು. ಪಠ್ಯದಲ್ಲಿ ಸೇರಿಸಿದ ಪದಗಳು ಮಕ್ಕಳು ದಿನ ನಿತ್ಯ ತಮ್ಮ ಜೀವನದಲ್ಲಿ ವ್ಯವಹರಿಸುತ್ತಿರಬೇಕು.

ಆಗಿನ ಕಾಲದಲ್ಲಿರುವ ಮದ್ರಾಸಿನ ಪಠ್ಯಕ್ರಮವು ಮಕ್ಕಳಲ್ಲಿ ನೀರಸವನ್ನು ತರುವಂತಿದ್ದವು. ಕ್ಲಿಷ್ಟ ಪದಗಳನ್ನು ಒಳಗೊಂಡಿದ್ದವು. ಇಂತಹ ಪಠ್ಯಪುಸ್ತಕಗಳನ್ನು ಕಂಡ ಕಾರಂತರು ಮಕ್ಕಳಿಗೆ ಆಸಕ್ತಿಕರವಾಗಿರುವಂತಹ ಪಠ್ಯಪುಸ್ತಕಗಳನ್ನು ರಚಿಸಲು ಯೋಚನೆ ಮಾಡಿದರು. ಮಗು ಪಠ್ಯದಲ್ಲಿರುವ ಪದ್ಯಗಳನ್ನು ಓದಿ ಕಂಠಪಾಟ ಮಾಡದೆ ಓದಿ ಆಹ್ಲಾದಿಸಬೇಕೆನ್ನುವುದೇ ಕಾರಂತರ ಆಶಯವಾಗಿತ್ತು. ಪುಸ್ತಕದಲ್ಲಿರುವುದನ್ನೇ ಯಥವತ್ತಾಗಿ ಕಂಠಪಾಟ ಮಾಡಿ ಮಕ್ಕಳ ಭಾಷೆಯಲ್ಲಿ ಕೃತಕತೆ ನಿರ್ಜೀವತೆ ಕಂಡುಬರುತ್ತದೆ. ಇದರಿಂದ ಮಕ್ಕಳದ್ದಲ್ಲದ ಕೃತಕ ಭಾಷೆ ಹುಟ್ಟುತ್ತದೆ ಎನ್ನುತ್ತಾರೆ, ಶಬ್ದಗಳು ಜೀವನದ ಅನುಭವವನ್ನು ತೋಡಿಕೊಳ್ಳಲು ಬೇಕಾದಂಥವು. ಅಂಥಹ ಪದಗಳಿಂದ ತುಂಬಿದ ಶಬ್ದ ಸಂಪತ್ತು ವಿದ್ಯಾರ್ಥಿಗಳಿಗೆ ಪರಿಚಯವಾದ ಮೇಲೆ ವಿಷಯವನ್ನು ಕಲಿಸಬೇಕು ಎಂದು ಹೇಳುತ್ತಾರೆ. ಮುಖ್ಯವಾಗಿ ಪ್ರಾಥಮಿಕ ಶಾಲೆಯಲ್ಲಿ ಮಕ್ಕಳ ಅನುಭವಕ್ಕೆ ಎಟುಕಬಲ್ಲ ವಿಷಯಗಳೇ ಮುಖ್ಯವಾಗುತ್ತವೆ. ಶಿಕ್ಷಕನಾದವನು ಮಗುವಿಗೆ ಯಾವುದು ಆಕರ್ಷಕವಾಗುತ್ತದೆ, ಎಂಥಹ ವಿಷಯಗಳನ್ನು ಅವರು ಇಷ್ಟ ಪಡುತ್ತಾರೆ ಮುಂತಾದ ವಿಷಯಗಳನ್ನು ತಿಳಿದುಕೊಳ್ಳಬೇಕು. ಈ ವಿಷಯವನ್ನು ಕುರಿತು ಕಾರಂತರೇ ಹೀಗೆ ಹೇಳುತ್ತಾರೆ.

> ಹಸು, ಹಕ್ಕಿ, ಹಾವು, ಕಲ್ಲು, ಮರ, ಹೂವು, ಹೀಗೆ ಅವರ ಮನಸ್ಸನ್ನು ಸೆಳೆಯುವ ಅನೇಕ ವಸ್ತುಗಳಿವೆ. ಇವನ್ನು ಬಿಂಬಿಸುವ ಕಾಲದಲ್ಲಿ ಯೋಗ್ಯ ಪದಗಳು ಹೊರಡುತ್ತವೆ. ಅವೇನೆಂದು ತಿಳಿಯಲು ಪಠ್ಯಪುಸ್ತಕ ಬರೆಯುವವರು ಮಕ್ಕಳಾಗಬೇಕು[೧೪]

ಎಂಬ ಸಲಹೆಯನ್ನು ನೀಡುತ್ತಾರೆ. ಪ್ರಾಥಮಿಕ ಮಕ್ಕಳಿಗೆ ಭಾಷಾ ಪಠ್ಯಪುಸ್ತಕಗಳನ್ನು ರಚಿಸುವಾಗ ತುಂಬಾ ಎಚ್ಚರಿಕೆಯನ್ನು ವಹಿಸಬೇಕೆಂದು ಹೇಳುತ್ತಾರೆ. ಏಕೆಂದರೆ ವಿಶಾಲ ಕರ್ನಾಟಕದಲ್ಲಿ ಬೇರೆ ಬೇರೆ ಪ್ರಾಂತದಲ್ಲಿ ಒಂದು ಪದಕ್ಕೆ ಬೇರೆ ಬೇರೆ ಹೆಸರಿನಿಂದ ಕರೆಯುತ್ತಾರೆ. ಇಂತಹ ಸಮಯದಲ್ಲಿ ಪಠ್ಯಪುಸ್ತಕ ರಚಿಸುವವರು ತುಂಬಾ ಎಚ್ಚರಿಕೆಯಿಂದ ಗಮನಿಸಬೇಕು. ಉದಾಹರಣೆಗೆ ಏಣಿಯ ಚಿತ್ರವನ್ನು ಬರೆದು ಏಣಿ ಎಂದು ಹೇಳಿದರೆ ಅದು ಧಾರವಾಡದ ಕಡೆ ನಿಚ್ಚಣಿಕೆ ಆಗುತ್ತದೆ. ಪಾರಿಭಾಷಿಕ ಪದಗಳು ವಿವಿಧ ಪ್ರದೇಶಗಳಲ್ಲಿ ಬೇರೆ ಬೇರೆಯಾಗಿರುತ್ತದೆ.

ಶಿವರಾಮ ಕಾರಂತರಿಗೆ ಭೂಗೋಳವು ಅತ್ಯಂತ ಪ್ರಿಯವಾದ ವಿಷಯವಾಗಿತ್ತು. ಪಂಜೆ ಮಂಗೇಶರಾಯರಿಂದ ಮಂಗಳೂರಿನ ಬಾಸೆಲ್ ಮಿಷನ್ನಿನ ಮ್ಯಾನೆಜರ್ ಅವರ ಪರಿಚಯ ವಾಯಿತು. ಇವರಿಂದ ಕಾರಂತರು **ಜಗತ್ತು** ಮತ್ತು **ಯುರೋಪು** ಎನ್ನುವ ಎರಡು ಪುಸ್ತಕಗಳನ್ನು ಪಡೆದರು. ಈ ಪುಸ್ತಕಗಳಲ್ಲಿ ನಿಸರ್ಗ, ಚರಿತ್ರೆ, ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಆಕರ್ಷಕವಾದ ಫೋಟೊಗಳಿದ್ದವು. ಇದರಿಂದ ಮಕ್ಕಳಿಗೆ ಭೂಗೋಳ ಪಠ್ಯವನ್ನು ಈ ರೀತಿ ಆಕರ್ಷಕ ಚಿತ್ರ ಗಳಿಂದ ಕಲಿಸಬಹುದು ಎನ್ನುವ ಆಲೋಚನೆಯು ಬಂದಿತು. ಅಂದಿನ ಕಾಲದಲ್ಲಿ ನಾಲ್ಕನೇಯ ತರಗತಿಯ ಮಕ್ಕಳಿಗೆ ದಕ್ಷಿಣ ಕನ್ನಡ ಜಿಲ್ಲೆಯ ಭೂಗೋಳ ಕಲಿಸುವ ವಿಷಯವಾಗಿತ್ತು, ಐದನೆಯ ತರಗತಿಗೆ ಮದ್ರಾಸು ಆದಿಪತ್ಯದ ಭೂವಿವರಣೆ, ಪಠ್ಯ ವಿಷಯವಾಗಿತ್ತು. ನಂತರ ತರಗತಿಗಳಲ್ಲಿ ಅನ್ಯ ದೇಶಗಳ ಭೂಗೋಳದ ವಿಷಯವನ್ನು ಕಲಿಸುತ್ತಿದ್ದರು. ಭೂಗೋಳಕ್ಕೆ ಸಂಬಂಧಿಸಿದ ವಿಷಯಗಳನ್ನು ಒಂದು ಪ್ರದೇಶದ ಭೂ ಸ್ವರೂಪ, ಹವಮಾನ, ಮತ್ತು ನೈಸರ್ಗಿಕ ಲಕ್ಷಣಗಳನ್ನು ಹೊಂದಿ ಪಶು ಪ್ರಾಣಿಗಳ ಜೀವನ ಮತ್ತು ಭೂ ಸಂಪತ್ತು, ನದಿ, ಕಡಲು ಮೊದಲಾದವುಗಳನ್ನು ಒಳಗೊಂಡಿರಬೇಕಾಗುತ್ತಿತ್ತು. ಆದರೆ ಕಾರಂತರು ದಕ್ಷಿಣ ಕನ್ನಡ ಜಿಲ್ಲೆಯ ಭೂವಿವರವನ್ನು ಒಂದು ಪ್ರವಾಸ ಕಥನದಂತೆ ಬರೆಯಲು ಪಠ್ಯಪುಸ್ತಕಗಳ ತಯಾರಿಸುವ ಮ್ಯಾನೆಜರೊಂದಿಗೆ ಚರ್ಚಿಸಿದರು. ಅವರು ಪುಸ್ತಕವನ್ನು ರಚಿಸಲು ಪ್ರೋತ್ಸಾಹವನ್ನು ನೀಡಿದರು. ಇದರಿಂದ ಉತ್ತೇಜಿತರಾದ ಕಾರಂತರು ದಕ್ಷಿಣ ಕನ್ನಡದ ಮೂಲೆ ಮೂಲೆಗೆ ಸಂಚರಿಸಿ, ಹಲವಾರು ಫೋಟೊಗಳನ್ನು ಸಂಗ್ರಹಿಸಿ ವಿವಿಧ ಭಾಗಗಳಾಗಿ ವರ್ಗೀಕರಿಸಿದರು. ದಕ್ಷಿಣ ಕನ್ನಡ ಜಿಲ್ಲೆಯ ಪರ್ವತಗಳು, ನದಿಗಳು, ಅರಣ್ಯಗಳು ಮೊದಲನೆಯ ಭಾಗದಲ್ಲಿ, ಎರಡನೆಯ ಭಾಗದಲ್ಲಿ ಮಕ್ಕಳಲ್ಲಿ ಕುತೂಹಲ ಮೂಡಿಸುವ ಪ್ರಾಣಿ ವಿಶೇಷಗಳನ್ನು ಒಳಗೊಂಡಂತೆ, ಅಲ್ಲಿ ನೆಲೆಸುವ ಜನರು, ಜಾತಿಗಳು, ಜನರ ಜೀವನ ನಿರ್ವಹಣೆಗೆ ನಡೆಸುತ್ತಿರುವ ಕೃಷಿ, ಕೈಗಾರಿಕೆ ಉದ್ಯಮಗಳು ಸಾರಿಗೆ ಸಂಪರ್ಕಗಳು, ಜನರ ಮಾನಸಿಕ ಹಿನ್ನೆಲೆಗೆ ಕಾರಣವಾದ ದೇವಾಲಯಗಳು, ಚರ್ಚ್, ತೇರು, ಹಬ್ಬ, ಆಟ ಪಾಟಗಳು, ಪೇಟೆ ಪಟ್ಟಣಗಳಿಗೆ ಸಂಬಂಧಿಸಿ ದಂತೆ ಫೋಟೋಗಳನ್ನು ಭಾಗಗಳಾಗಿ ಮಾಡಿದರು. ಇವುಗಳನ್ನು ಮುಂದಿರಿಸಿಕೊಂಡು ಒಂದು ಪ್ರವಾಸ ಕಥನವನ್ನು ಬರೆದರು. ಜೊತೆಗೆ ಪ್ರಾಕೃತಿಕ ನಕ್ಷೆ, ರಸ್ತೆ ಸ್ಥಳಗಳ ನಕ್ಷೆ ಮೊದಲಾದವನ್ನು ಸೇರಿಸಿದರು. ಕಾರಂತರ ಪ್ರಥಮ ಪ್ರಯತ್ನದ ಈ ಭೂಗೋಳ ಪುಸ್ತಕ ಶಾಲೆಯೇತರ ಜನರ ಮೆಚ್ಚುಗಗಷ್ಟೆ ಪಾತ್ರವಾಯಿತು. ಇದೇ ಬರಹಗಳನ್ನು ಬಾಸೆಲ್ ಮಿಶನ್ ಪುಸ್ತಕಾಲಯದವರು ಇಂಗ್ಲಿಷ್ ವಿವರಗಳೊಂದಿಗೆ **ಪಿಕ್ಚರಸ್ ಸೌತ್ ಕೆನರಾ** ಎಂಬ ಹೆಸರಿನೊಂದಿಗೆ ಸುಮಾರು ಐದು ಸಾವಿರ ಪ್ರತಿಗಳನ್ನು ಅಚ್ಚು ಹಾಕಿಸಿದರು. ಆದರೆ ಶಾಲಾ ಪಠ್ಯಪುಸ್ತಕವಾಗಿ ಮಾತ್ರ ತೆಗೆದುಕೊಳ್ಳಲಿಲ್ಲ.

ಕಾರಂತರು ತಮ್ಮ ಹಲವಾರು ಪ್ರಯೋಗಗಳಿಂದ ದೊರೆತ ಜ್ಞಾನ ಮತ್ತು ಅನುಭವವನ್ನು ಮಂಗಳೂರಿನ ಶಾಲೆಯೊಂದಕ್ಕೆ ಒದಗಿಸಿ ಅಲ್ಲಿನ ಅಧ್ಯಾಪಕರೊಂದಿಗೆ ನಿರಂತರವಾಗಿ ದುಡಿದು ಶಿಕ್ಷಣವು ಕ್ರಿಯಾಶೀಲವಾಗುವಂತೆ ಮಾಡಿದರು. ವಿಜ್ಞಾನ ಭೂಗೋಳವನ್ನು ಆಟ ಸಲಕರಣೆಗಳ ಮೂಲಕ ಗ್ರಹಿಸುವಂತೆ ಮಾಡುವುದು ಇಲ್ಲಿನ ತರಬೇತಿ ವೈಶಿಷ್ಟ್ಯಗಳು ಆಗಿದ್ದವು. ಶಿಕ್ಷಣ ಕ್ಷೇತ್ರದಲ್ಲಿ ಹಲವಾರು ರೀತಿಯಿಂದ ಅನುಭವವನ್ನು ಗಳಿಸಿದ ಕಾರಂತರು ಮಕ್ಕಳಿಗಾಗಿ ಸರಿಯಾದ ಪಠ್ಯಪುಸ್ತಕಗಳು ಇಲ್ಲ ಎಂಬುದನ್ನು ಮನಗಂಡು ಮಕ್ಕಳಲ್ಲಿ ಸೃಷ್ಟಿಶೀಲತೆ, ವಿಚಾರ ಶೀಲತೆ, ಜ್ಞಾನ ಮತ್ತು ಬುದ್ಧಿಯು ವಿಕಾಸಗೊಳ್ಳಬೇಕಾದರೆ ಉತ್ತಮ ಪಠ್ಯಪುಸ್ತಕ ಮತ್ತು ಸಲಕರಣೆಗಳಿರಬೇಕು. ಇಂತಹ ಅನುಕೂಲಗಳಿರದೇ ಬರೀ ಪಠ್ಯಪುಸ್ತಕಗಳನ್ನು ಮಾತ್ರ ನೆಚ್ಚಿರುವ ಅಧ್ಯಾಪಕರಿರುವಲ್ಲಿ ಆ ಪಠ್ಯಪುಸ್ತಕಗಳಾದರೂ ಉತ್ತಮವಾಗಿರಬೇಡವೇ ಎಂದು ಕನ್ನಡದಲ್ಲಿ ಒಳ್ಳೆಯ ಪುಸ್ತಕಗಳಲ್ಲಿ ಅಭಾವವು ಕಾರಂತರನ್ನು ಪಠ್ಯಪುಸ್ತಕಗಳ ರಚನೆಗೆ ಪ್ರೇರೆಪಿಸಿತು. ಅದರ ಫಲವೆ ಹೂಗನ್ನಡ ಪಾಠಮಾಲೆ, ಸಾಮಾನ್ಯ ವಿಜ್ಞಾನ, ಪಾಠಮಾಲೆ ಮತ್ತು ಸಿರಿಗನ್ನಡ ಪಾಠಮಾಲೆಗಳು. ಸುಮಾರು ೧೯೩೦ರಲ್ಲಿ ಕಾರಂತರು ಒಂದನೆಯ ತರಗತಿಯಿಂದ ಎಂಟನೆಯ ತರಗತಿಯವರೆಗೆ ಭಾಷಾ ಬೋಧನೆಗಳನ್ನು ರಚಿಸಿದರು. ಹೊಸ ವಿಧಾನದ ಭಾಷಾ ಭೋದನ ಕ್ರಮವನ್ನು ಗಮನದಲ್ಲಿರಿಸಿಕೊಂಡು ಸರಿಯಾದ ಪಾಠಗಳನ್ನು ಸಿದ್ಧ ಮಾಡಿದರು.

ಸರಳವಾದ ಪದಗಳನ್ನು ಉಪಯೋಗಿಸುವುದು. ಕ್ಲಿಷ್ಟವಾದ ವಿಚಾರಗಳಿರಬಾರದು, ಪಾಠಗಳ ವಸ್ತು ವಿಚಾರಗಳು ನಿತ್ಯ ಪರಿಚಯವಿದ್ದಿರಬೇಕು. ಪಾಠಗಳು ರಂಜಿಸುವ ತೆರನಾಗಿದ್ದು ಮಕ್ಕಳ ನೆನಪಿನಲ್ಲಿ ಉಳಿಯುವಂತಿರಬೇಕು. ಪದ ಜೋಡಣೆಗಳು, ವಾಕ್ಯ ರಚನೆಗಳು ತೊಡಕಿನಿಂದ ಕೂಡಿರಬಾರದು. ಶೈಲಿಯಲ್ಲಿ ನಾದ ತರಂಗ ಗೀತೆಯನ್ನು ಸೃಷ್ಟಿಸಬೇಕು. ಸಂಭಾಷಣೆಯು ಸಹಜವಾಗಿದ್ದು ಸ್ವಾರಸ್ಯಕರವಾಗಿರಬೇಕು. ಈ ದೃಷ್ಟಿಯಿಂದ ಹೂಗನ್ನಡ ಪಾಠ ಮಾಲೆಯು ರಚಿತವಾಗಿದೆ. ದಿನಬಳಕೆಯ ವಸ್ತುಗಳನ್ನು ಅತ್ಯಂತ ಸರಳವಾಗಿ ನಾದ ತರಂಗದಂತೆ ಕೂಡಿದ ಪದಗಳ ಮೂಲಕ ಹೇಳಿರುವ ರೀತಿಯನ್ನು ಎರಡನೆಯ ತರಗತಿಯ ಪದ್ಯದಲ್ಲಿ ನೋಡಬಹುದು.

'ಹಕ್ಕಿಯಂತೆ ರೆಕ್ಕೆ ಇದ್ದರೆ
ಪಕ್ಕ ಬಿಡಿಸಿ ಹಾರುತ್ತಿದ್ದೆ
ಬಿಳಿಯ ಮೋಡ ಏರುತ್ತಿದ್ದೆ
ಬೆಳ್ಳಿ ತಾರೆ ಸೇರುತ್ತಿದ್ದೆ'

ಮಕ್ಕಳಿಗೆ ಓದುವಾಗ ಹಿಗ್ಗು ಉಂಟಾಗಿ ಪ್ರಯತ್ನವಿಲ್ಲದೆಯೇ ವಿಷಯಗ್ರಹಣವಾಗುವುದನ್ನು ಗಮನಿಸಬಹುದು. ಮಕ್ಕಳ ಪಠ್ಯಪುಸ್ತಕಗಳಲ್ಲಿ ಭಾಷೆ ಮತ್ತು ಶೈಲಿ ಹೇಗಿರಬೇಕೆಂದು ಹೇಳುತ್ತಾರೆ.

> ಭಾಷೆಯೆಂಬುದು ಜೀವನವನ್ನು ಬಿಂಬಿಸುವ ಸಾಧನ ನಮ್ಮ ಅಂತರಂಗವನ್ನು ಹೊರಗೆಡಹುವ ಒಂದು ಅಮೂಲ್ಯ ವಸ್ತು ಅಂಥ ವಸ್ತು ತನ್ನ ಬಿಗಿಯಿಂದ ಮಕ್ಕಳ ಮನಸ್ಸನ್ನು ಬೆದರಿಸಬಾರದು. ವ್ಯಾಕರಣದ ಬಿಗಿಯಾಗಲಿ ಸುಳಿ ಕೊಂಬು ಆಖ್ಯೆ, ಆಖ್ಯಾತಗಳ ಸ್ವರೂಪವಾಗಲೀ ಮೃದುಮನಸ್ಸನ್ನು ಕರಟಿಸಬಾರದು[೧೫] ಎನ್ನುತ್ತಾರೆ.

ಮಾತು ತನ್ನಂತೆ ಹರಿಯಬೇಕು. ಪ್ರತಿ ಮಾತಿಗೂ, ಆಖ್ಯಾತವಿರಲೇಬೇಕೆಂಬ ನಿರ್ಬಂಧವಿರಬಾರದು. ಯಾವುದೇ ಒಂದು ವಿಷಯವನ್ನು ಕುಸುಮ ಪರಾಗ, ಪುಷ್ಪಪಾತ್ರೆ, ಮಕರಂದ ಎಂದು ವಿಜ್ಞಾನದಂತೆ ಬೋಧಿಸುವ ಗುರಿಯು ಸಾಹಿತ್ಯಕ್ಕಿಲ್ಲ. ಎಲ್ಲಿ ಭಾಷಾ ಶಿಕ್ಷಕನು ಇದನ್ನು ಪ್ರಯತ್ನಿಸುತ್ತಾನೋ ಅಲ್ಲಿ ಭಾಷೆಯ ಸಾವು ಕಂಡಿತ ಎನ್ನುತ್ತಾರೆ.

ಮೂರು ಮತ್ತು ನಾಲ್ಕನೆಯ ತರಗತಿಯ ಪಠ್ಯಪುಸ್ತಕಗಳಲ್ಲಿ ನಿಸರ್ಗ ಜೀವಿಗಳ ಕುರಿತು ಸಂಕ್ಷಿಪ್ತ ಬರಹಗಳಿವೆ. ನವಿಲು, ಮೀನು, ಹಾವು, ಮುಂತಾದವುಗಳ ಬಗ್ಗೆ ಪಾಠಗಳು ಪ್ರಾಣಿ ಪಕ್ಷಿ ಮುಂತಾದ ಜೀವಿಗಳ ಜಿವನದ ವೈಶಿಷ್ಟ್ಯದ ಬಗ್ಗೆ ಮಕ್ಕಳಲ್ಲಿ ಆಸಕ್ತಿ ಒಲವನ್ನು ಹುಟ್ಟಿಸುವಂತಹದ್ದಾಗಿದೆ. ಸ್ವತಃ ಕಾರಂತರೆ ತಮ್ಮ ಕ್ಯಾಮರಾದಲ್ಲಿ ಸೆರೆಹಿಡಿದ ಹಲವಾರು ಹೂಗಳ ಕಡಲ ತೀರ ಸಂಜೆಯ ಛಾಯಾಚಿತ್ರಗಳಿವೆ. ಮಕ್ಕಳ ಪಠ್ಯಗಳಲ್ಲಿ ಆಯಾ ವಿಷಯಗಳಿಗೆ ಬೇಕಾದ ಚಿತ್ರಗಳನ್ನು ಕಾರಂತರೇ ಬರೆದಿದ್ದಾರೆ.

೧. ಸಿರಿಗನ್ನಡ ಪಾಠ ಮಾಲೆ ಎರಡನೆಯ ತರಗತಿಯ ಪಠ್ಯಪುಸ್ತಕ

ಸಿರಿಗನ್ನಡ ಪಾಠ ಮಾಲೆ ಇದು ಕಾರಂತರು ಎರಡನೆಯ ತರಗತಿಯ ಮಕ್ಕಳಿಗೆ ರಚಿಸಿದ ಪಠ್ಯ ಪುಸ್ತಕವಾಗಿದೆ. ಈ ಪುಸ್ತಕದಲ್ಲಿ ಚಿಕ್ಕ ಚಿಕ್ಕ ಕಥೆಗಳಿವೆ. ಪ್ರತಿಯೊಂದು ಕಥೆಗೂ ಸಂಬಂಧಿಸಿದಂತೆ ಚಿತ್ರಗಳನ್ನು ಕಾಣಬಹುದು. ಸುಂದರನ ಆಡು, ಮಳೆಗಾಲ, ಬೆಳಗಾಯಿತು ನೋಡು, ಹಾಲಿಗೆ ಜಗಳ, ಕಾಗೆ, ಕಮ್ಮಾರ ಸಾಲೆ, ಕೋಳಿ, ಕೆಂಪು ಹುಂಜ, ನದಿಯ ಉಪಕಾರ ಹೀಗೆ ಮೂವತ್ತೈದು ಕಥೆಗಳನ್ನು ಒಳಗೊಂಡಿದೆ. ಕಥೆಗಳು ತುಂಬಾ ಚಿಕ್ಕ ಚಿಕ್ಕ ವಾಕ್ಯಗಳಿಂದ ಕೂಡಿದೆ. ಉದಾಹರಣೆಗೆ

> ಸುಂದರ ಚಿಕ್ಕ ಹುಡುಗ. ಅವನಿಗೆ ಆಡುವ ಹಂಬಲ ತುಂಬ. ಅವನಿಗೆ ಬೆಳಗ್ಗೂ, ಸಂಜೆಯೂ ಆಡುವ ಆಸೆ. ಆದರೆ ಅವನ ಮನೆಯಲ್ಲಿ ಅವನೊಬ್ಬನೇ ಮಗು.[೧೬]

ಹೀಗೆ ಚಿಕ್ಕ ಚಿಕ್ಕ ವಾಕ್ಯಗಳಿಂದ ಕತೆಗಳನ್ನು ರಚಿಸಿದ್ದಾರೆ. ಸುಲಭವಾಗಿ ಓದಿಸಿಕೊಂಡು ಹೋಗುತ್ತದೆ. ಇದರ ಮುನ್ನುಡಿಯಲ್ಲಿ ಕಾರಂತರು ಈ ಪಠ್ಯಪುಸ್ತಕದ ಹಲವಾರು ವಿಷಯಗಳನ್ನು ತಿಳಿಸಿದ್ದಾರೆ. ಆದಷ್ಟು ಹೆಚ್ಚಿನ ವಿಷಯಗಳನ್ನು ಕುರಿತು ವಿವರಣೆಯನ್ನು ನೀಡಲಾಗಿದೆ. ಎಲ್ಲಿಯೂ ಶಬ್ದಗಳನ್ನು ಅನಾವಶ್ಯಕವಾಗಿ ತುಂಬುವ ಕೆಲಸವನ್ನು ಮಾಡಿಲ್ಲ. ಯಾವುದೇ

ವಿಷಯವನ್ನು ತುಂಬಾ ಸರಳವಾಗಿ ಎಷ್ಟನ್ನು ತಿಳಿಸಬೇಕೊ ಅಷ್ಟನ್ನೇ ಅತ್ಯಂತ ಸರಳವಾದ ವಾಕ್ಯಗಳೊಂದಿಗೆ ನಿರೂಪಿಸಿದ್ದಾರೆ. ಅವರೇ ಹೇಳುವಂತೆ ಭಾಷೆಯೆಂಬುದು ಜೀವನವನ್ನು ಬಿಂಬಿಸುವ ಸಾಧನ. ನಮ್ಮ ಅಂತರಂಗವನ್ನು ಹೊರಗೆಡಹುವ ಒಂದು ಅಮೂಲ್ಯ ವಸ್ತು. ಅಂತಹ ವಸ್ತು ತನ್ನ ಬಿಗಿಯಿಂದ ಮಕ್ಕಳ ಮನಸ್ಸನ್ನು ಬೆದರಿಸಬಾರದು ಎನ್ನುತ್ತಾರೆ. ಅಂತಹ ಉದ್ದೇಶವನ್ನು ಸಾರ್ಥಕಗೊಳಿಸಲು ಇಲ್ಲಿ ಪ್ರಯತ್ನ ಮಾಡಿದ್ದಾರೆ. ಈ ಪಠ್ಯಪುಸ್ತಕ ಮೊದಲ ಬಾರಿಗೆ ಅಚ್ಚಾದುದು ೧೯೩೬ರಲ್ಲಿ. ಇದರಲ್ಲಿ ಪಂಜೆಮಂಗೇಶರಾಯರ, ಮಾಸ್ತಿಯವರ, ಬೇಂದ್ರೆಯವರ, ವಿ.ಸೀ, ರಾಜರತ್ನಂ, ಹೊಯ್ಸಳ ಮುಂತಾದವರ ಪದ್ಯಗಳನ್ನು ಬಳಸಿಕೊಳ್ಳಲಾಗಿದೆ.

ಒಟ್ಟಾರೆ ಈ ಪಠ್ಯಕ್ರಮದಲ್ಲಿ ಹಲವಾರು ವಿಷಯಗಳು ಇವೆ. ಮೂವತ್ತೈದು ವಿಷಯಗಳನ್ನು ಕುರಿತು ಈ ಪುಸ್ತಕದಲ್ಲಿ ಬರೆದಿದ್ದಾರೆ. ಪ್ರತಿಯೊಂದು ವಿಷಯವನ್ನು ಕುರಿತು ತುಂಬಾ ಸರಳವಾಗಿ ವಿವರಣೆ ನೀಡಿದ್ದಾರೆ. ಮಳೆಗಾಲ ಎಂಬ ಪಾಠದಲ್ಲಿ ಮಳೆಯ ವಿವರಣೆಯನ್ನು ಬರೆದಿದ್ದಾರೆ.

> ಮಳೆಗಾಲ ಬಂದಿತು. ತಂಗಾಳಿ ಬೀಸಿತು. ಬಾನಿನಲ್ಲಿ ಮೋಡಗಳು ಕವಿದು ಅತ್ತಿತ್ತ ತೇಲಿದವು. ಸುತ್ತಲೂ ಹರಿಡಿದವು. ಮೋಡಗಳು ತುಂಬಿ ಸೂರ್ಯನೇ ಕಾಣಿಸಲಿಲ್ಲ. ಅವನ ಬೆಳಕು ಕಡಿಮೆಯಾಯಿತು. ಮತ್ತೆನು ಎನ್ನುವದರೊಳಗೆ ಮುಗಿಲು ಗುಡುಗುಡಿಸಿತು. ಮಿಂಚು ಥಳಿಸಿತು. ಮಳೆ ಹನಿಯಿತು. ಹನಿ ಬಲವಾಯಿತು. ಮಳೆ ಚೆನ್ನಾಗಿ ಸುರಿಯಿತು. ಮಳೆ ಜ಼ೋರಾಗಿ ಸುರಿಯಿತು. ನೆಲವೆಲ್ಲಾ ಒದ್ದೆಯಾಯಿತು. ಮೈಯೆಲ್ಲ ತೊಯ್ದು ಹೋಯಿತು. ಮಳೆಯ ನೀರು ನೆಲದ ಮೇಲೆ ಜುಳು ಜುಳು ಹರಿಯ ತೊಡಗಿತು.[೧೭]

ಪ್ರತಿಯೊಂದು ವಿಷಯಕ್ಕೆ ಸಂಬಂಧಿಸಿದಂತೆ ತುಂಬಾ ಸುಂದರವಾದ ಚಿತ್ರಗಳನ್ನು ನೀಡಿದ್ದಾರೆ. ಪ್ರತಿದಿನ ತಮ್ಮ ಸುತ್ತಮುತ್ತ ನಡೆಯುವ ಹಲವಾರು ವಿಷಯಗಳನ್ನು ಒಂದೊಂದಾಗಿ ಪಠ್ಯಪುಸ್ತಕದಲ್ಲಿ ವಿವರಣೆಯೊಂದಿಗೆ ಮಕ್ಕಳಿಗೆ ಸುಲಭವಾಗಿ ಅರ್ಥವಾಗುವ ರೀತಿಯಲ್ಲಿ ನಿರೂಪಿಸಿದ್ದಾರೆ.

**ಸಿರಿಗನ್ನಡ ಪಾಠ ಮಾಲೆ ಮೂರನೆಯ ತರಗತಿಯ ಪಠ್ಯಪುಸ್ತಕ**

ಸಿರಿಗನ್ನಡ ಪಾಠ ಮಾಲೆ ಈ ಪುಸ್ತಕವು ಮೂರನೆಯ ತರಗತಿಯ ಪಠ್ಯಪುಸ್ತಕವಾಗಿದೆ. ಇದರಲ್ಲಿ ಮಕ್ಕಳು ತಮ್ಮ ಸುತ್ತಮುತ್ತ ಕಾಣುವ ನಿಸರ್ಗ ಮತ್ತು ಪ್ರಾಣಿಗಳ ಕುರಿತು ವಿವರಣೆಯಿದೆ. ಈ ಪಠ್ಯಪುಸ್ತಕವು ಮೊದಲ ಮುದ್ರಣ ೧೯೪೧ರಲ್ಲಿ ಪ್ರಕಟಣೆಯಾಯಿತು. ವಸಾಹತುಶಾಹಿ ಕಾಲದ ಪಠ್ಯ ಪುಸ್ತಕಗಳನ್ನು ಕಂಡು ಕಾರಂತರು ಅಂದಿನ ಕಾಲದ ಪಠ್ಯಪುಸ್ತಕಗಳು ನೀರಸವಾದ ಬರವಣಿಗೆ ಕ್ಲಿಷ್ಟವಾದ ಪದಗಳು ಮುಂತಾದ ಲೋಪದೋಷಗಳಿಂದ ಕೂಡಿದ್ದವು. ಇದರಿಂದ

ಕಾರಂತರೆ ಪಠ್ಯಪುಸ್ತಗಳನ್ನು ಬರೆದರು. ಪ್ರತಿಯೊಂದು ವಿಷಯಕ್ಕೆ ಸಂಬಂಧಿಸಿದಂತೆ ಚಿತ್ರಗಳನ್ನು ಈ ಪಠ್ಯಪುಸ್ತಕದಲ್ಲಿ ಒದಗಿಸಿದ್ದಾರೆ. ಕಡಲ ತೀರ, ಹೆಗ್ಗಣ, ಕಂಚುಗಾರ, ತಾಳೆಗುಬ್ಬಿ, ಮಲ್ಲನ ನಿದ್ರೆ, ಕಲ್ಲು ಮರಳು, ಮೀನುಗಳು, ಮೊಲಗಳು, ಕಾಗೆಯ ಮದುವೆ, ಮಿನುಗುವ ತಾರೆಗಳು ಕೋಗಿಲೆ, ಬಯಲಾಟ ಮುಂತಾದ ವಿಷಯಗಳನ್ನು ಕುರಿತು ಸರಳವಾದ ವಿಷಯ ನಿರೂಪಣೆಯಿದೆ. ಇದರಲ್ಲಿ ಬರುವ ಹಲವಾರು ವಿಷಯಗಳು ಮಕ್ಕಳ ಪರಿಚಿತ ವಿಷಯಗಳಾಗಿವೆ. ಇದರಿಂದ ಮಕ್ಕಳಿಗೆ ಸುಲಭವಾಗಿ ನೆನಪಿನಲ್ಲಿಟ್ಟುಕೊಳ್ಳಲು ಸಾಧ್ಯವಾಗುತ್ತವೆ. ಇದರಲ್ಲಿರುವ ಪ್ರತಿಯೊಂದು ವಿಷಯವು ಮಕ್ಕಳ ಆಸಕ್ತಿಯನ್ನು ಹೆಚ್ಚಿಸುತ್ತದೆ.

ಶಿವರಾಮ ಕಾರಂತರು ಮಕ್ಕಳಿಗೆಂದೇ ಕಥೆ, ನಾಟಕ, ನೀಳ್ಗತೆಗಳನ್ನು ಬರೆದಿದ್ದಾರೆ. ಕಾರಂತರು ಮಕ್ಕಳ ಪ್ರಯೋಗದ ಚಟುವಟಿಕೆಗಳನ್ನು ನಡೆಸಿದಷ್ಟು ಬೇರೆಯವರು ನಡೆಸಿರಲಾರರು. ಕಾರಂತರು ೧೯೩೦ರ ದಶಕದಲ್ಲಿ ಮಕ್ಕಳ ಮನೋವಿಕಾಸದ ಚಟುವಟಿಕೆಗಳನ್ನು ಪ್ರಾಯೋಗಿಕವಾಗಿ ಮಾಡಿದರು. ಇದರ ಅಂಗವಾಗಿ ಅವರ ಸೃಜನಶೀಲ ಮಕ್ಕಳ ಸಾಹಿತ್ಯ ಪಠ್ಯ ಪುಸ್ತಕಗಳು, ನಾಟಕಗಳು ಮುಂತಾದವುಗಳನ್ನು ಕಾಣಬಹುದು.

ಶಿವರಾಮ ಕಾರಂತರು ಮಕ್ಕಳ ಸಲುವಾಗಿ ಇನ್ನೂ ಹಲವಾರು ಪುಸ್ತಕಗಳನ್ನು ರಚನೆ ಮಾಡಿ ಪ್ರಕಟಣೆ ಮಾಡಿದರು.

೧. ಅನಾದಿ ಕಾಲದ ಮನುಷ್ಯ
೨. ಒಂದೇ ರಾತ್ರಿ ಒಂದೇ ಹಗಲು
೩. ಗಜರಾಜ
೪. ಗೆದ್ದವರ ಸತ್ಯ
೫. ಢಂ ಢಂ ಡೋಲು
೬. ನರನೋ ವಾನರನೋ
೭. ಮರಿಯಪ್ಪನ ಸಾಹಸಗಳು
೮. ಮಂಗನ ಮದುವೆ
೯. ಸೂರ್ಯ ಚಂದ್ರ
೧೦. ಹುಲಿರಾಯ
೧೧. ಸಿಹಿ ಮೂಲಂಗಿ
೧೨. ಕೊಂಚ ತಂತ್ರ
೧೩. ಪಶುಬಲಿ

**ಕಾರಂತರ ಮಕ್ಕಳ ನಾಟಕಗಳು**

**೧. ಮಂಗನ ಮದುವೆ**

ಈ ನಾಟಕವು ಕಾರಂತರ ಯಶಸ್ವಿ ನಾಟಗಳಲ್ಲಿ ಒಂದಾಗಿದೆ. ಈ ನಾಟಕದ ಪಾತ್ರಗಳು ಸುಮಂತ, ವಸಂತ, ರಾಜಕುಮಾರ, ಚೆಲುವೆ ಸೆರೆಸಿಕ್ಕಿದ ರಾಜಕುಮಾರಿ, ಋಷಿ, ಚೆಲುವೆಯ ತಂದೆ, ಶೃಂಗಾಸುರ ರಾಕ್ಷಸ, ಶೃಂಗಿ ರಾಕ್ಷಸನ ಹೆಂಡತಿ ತ್ರಿಮಿತ್ರಿಕಿಟ ಅವರ ಮಗ ಮತ್ತು ಹುಲಿ ನರಿ ಹಾಗೂ ಗಿಳಿ. ಈ ನಾಟಕದ ಪ್ರಾರಂಭದಲ್ಲಿ ಸುಮಂತನನ್ನು ರಾಕ್ಷಸ ಎತ್ತಿಕೊಂಡು

ಹೋಗುತ್ತಾನೆ. ಆ ನಂತರ ಸುಮಂತನನ್ನು ಹುಡುಕಿಕೊಂಡು ವಸಂತ ಮತ್ತು ಹರಿಣ ಹೋಗುತ್ತಾರೆ. ಹೋಗುವಾಗ ಇವರಿಗೆ ಹುಲಿ, ನರಿ, ಋಷಿ, ಗಿಳಿ, ಹೆಗ್ಗಣಗಳು ಸಹಾಯ ಮಾಡುತ್ತವೆ. ಇವರ ಸಹಾಯದಿಂದ ಸುಮಂತನನ್ನು ಬಿಡಿಸಿಕೊಂಡು ಬರುತ್ತಾರೆ.

ಈ ನಾಟಕದಲ್ಲಿ ಬರುವ ಕಥೆಯನ್ನು ನೋಡಿದರೆ ಮಕ್ಕಳಿಗೆ ಆಸಕ್ತಿದಾಯಕವಾಗಿದೆ. ಇಲ್ಲಿ ಬರುವ ರಾಕ್ಷಸನ ಮಾತುಗಳಲ್ಲಿ ಆಕರ್ಷಿಸುವ ಶಬ್ದಗಳನ್ನೇ ಉಪಯೋಗಿಸಿದ್ದಾರೆ. ಉದಾಹರಣೆಗೆ ರಾಕ್ಷಸ ಹಾಕುವ ಮಂತ್ರ ಟ್ರಕ ಟಟ್ರಾಷ್ಟುಕ ಟ್ರಾಂಕು... ಪ್ರಾಣಿಗಳು ಮಾತನಾಡುವಾಗ ಅವುಗಳ ಗುರುತಾಗಿ ಅವುಗಳ ಧ್ವನಿ ಅನುಕರಣೆ ಮಾಡುವ ಶಬ್ದಗಳನ್ನು. ಉದಾಹರಣೆಗೆ ನರಿಗೆ ಉಕ್ಯೋ, ಹುಕ್ಯೋ ಹುಕ್ಯೋ ಶಬ್ದಗಳನ್ನು ಬಳಸಿದ್ದಾರೆ. ಇಲ್ಲಿ ಬರುವ ಕಥೆಯು ಮಕ್ಕಳಿಗೆ ಇಷ್ಟವಾಗುವ ಹಾಗೆ ಸುಖಾಂತ್ಯವನ್ನು ಪಡೆದಿದೆ. ಮಕ್ಕಳ ಮನಸ್ಸಿನಲ್ಲಿ ಪ್ರಾಣಿ ಪಕ್ಷಿಗಳನ್ನು ಪ್ರೀತಿಸುವ ಭಾವನೆ ಮೂಡುವ ಹಾಗೆ ಈ ಕಥೆ ಚಿತ್ರಿತವಾಗಿದೆ.

**೨. ಸಿಹಿ ಮೂಲಂಗಿ**

ರಷ್ಯನ್ ಮಕ್ಕಳ ಕತೆಯೊಂದರ ಇಂಗ್ಲಿಷ್ ಅನುವಾದವನ್ನು ಓದಿ ಕಾರಂತರು ಕನ್ನಡದಲ್ಲಿ ರಚಿಸಿದ ನಾಟಕವಿದು. ಇದು ೩೩ ಪುಟಗಳ ದೊಡ್ಡ ನಾಟಕ ಪ್ರಾಥಮಿಕ ಮಕ್ಕಳಿಗೆ ಮತ್ತು ಹೈಸ್ಕೂಲ್ ಮಕ್ಕಳಿಗೆ ಪ್ರಿಯವಾಗಬಹುದಾದ ನಾಟಕವಿದು. ಇದರ ಭಾಷೆ ಮಕ್ಕಳಿಗೆ ಇಷ್ಟವಾಗುವಂತೆ ಸರಳ ಆಡು ಮಾತಿನಲ್ಲಿದೆ. ಹಾಗೆಯೇ ನಡು ನಡುವೆ ಬರುವ ಹಾಡುಗಳು ಸುಲಲಿತವಾಗಿವೆ. ಈ ನಾಟಕದ ಪಾತ್ರದಾರಿಗಳಾಗಿ ನಾಯಿ, ಇಲಿ, ಬೆಕ್ಕು, ಆಮೆ, ಹೆಗ್ಗಣ ಮತ್ತು ಅಜ್ಜ ಇರುತ್ತಾರೆ. ಇಲ್ಲಿ ಬರುವ ಪ್ರಾಣಿ ಸಾಹಸ ಕಥೆ ಮಕ್ಕಳಿಗೆ ಇಷ್ಟವಾಗುವಂತದ್ದೆ. ಇಲ್ಲಿಯ ಹಲವಾರು ಸನ್ನಿವೇಶಗಳು ಮಕ್ಕಳಿಗೆ ಪ್ರಿಯವಾಗುತ್ತವೆ.

**ಕಾರಂತರ ಮಕ್ಕಳ ಗದ್ಯ ಕೃತಿಗಳು**

೧. ಮರಿಯಪ್ಪನ ಸಾಹಸಗಳು

೨. ಒಂದೇ ರಾತ್ರಿ ಒಂದೇ ಹಗಲು

೩. ಹುಲಿರಾಯ

೪. ಗಜರಾಜ

೫. ಪಶುಬಲ

**೧. ಗಜರಾಜ**

ಈ ಕೃತಿಯು ಪ್ರಾಥಮಿಕ ಹಂತದ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆದ ಪುಸ್ತಕವಿದು. ಆನೆಗಳ ಕುರಿತ ಜೀವನ ಕಥಾನಕವನ್ನು ಒಳಗೊಂಡಿದೆ. ಮಕ್ಕಳಿಗೆ ಓದುತ್ತಾ ಹೋದಂತೆ

ಆಸಕ್ತಿ ಕಡಿಮೆಯಾಗದಂತೆ ನಿರೂಪಣಾ ಕ್ರಮವನ್ನು ಅನುಸರಿಸಿದ್ದಾರೆ. ಗಜೇಂದ್ರ ಯಾರೆಂದು ಕೇಳುತ್ತೀರಾ? ಒಂದು ಭಾರಿಯ ಕಾಡಾನೆ. ಆ ಮೇಲೆ ಆತನು ಆನೆಗಳ ಗುಂಪಿಗೇ ಒಡೆಯನಾದ, ಗಜರಾಜನಾದ. ಅದನ್ನೆಲ್ಲ ಕೇಳುವಿರಂತೆ. ಗಜೇಂದ್ರ ಅಂಥಿಂಥ ಆನೆಯಲ್ಲ! ಬಾರೀ ಆನೆ ಎಂದೆ. ಹತ್ತು ಅಡಿಗೂ ಶರೀರ! ದಪ್ಪ ದಪ್ಪವಾದ ಮುಂಗಾಲು ಹಿಂಗಾಲುಗಳು; ಅಗಲವಾದ ಕಿವಿ, ಮಾರುದ್ದದ ಆ ಎರಡು ದಾಡೆಗಳೆಂಥವು! ಬೇರುಗಳನ್ನು ತಿವಿದು, ಹಣೆಕೊಟ್ಟು ತಳ್ಳಿದನೆಂದರೆ ಎಂಥ ಮರವೂ ಉರುಳಿತು. ಅಂಥ ಪ್ರಾಣಿಯು ಆತ. ನೋಟಕ್ಕೂ ಅಷ್ಟೇ ಚೆಲುವ ಆತ. ಪ್ರಾಥಮಿಕ ಮಕ್ಕಳಿಗೆ ಆಕರ್ಷಣೀಯವಾಗಿ ಚಿಕ್ಕ ಚಿಕ್ಕ ವಾಕ್ಯಗಳಿಂದ ಈ ಪುಸ್ತಕವನ್ನು ರಚಿಸಿದ್ದಾರೆ.

ಗಜರಾಜ ಎಂಬ ಗದ್ಯ ಕೃತಿ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಓದಲು ಸೂಕ್ತವಾದ ಕತೆಯಾಗಿದೆ. ಇದರಲ್ಲಿ ವೈಚಾರಿಕ ಚಿಂತನೆಯಿದೆ. ದೇವಸ್ಥಾನದಲ್ಲಿ ಆನೆಗಳನ್ನು ಸಾಕುವುದು ತಪ್ಪು. ಆನೆಗಳ ಸ್ವಾತಂತ್ರ್ಯವನ್ನು ಹಾಗೆ ಎಂದು ಕಾರಂತರು ಸೂಕ್ಷ್ಮವಾಗಿ ಈ ಕಥೆಯಲ್ಲಿ ಹೇಳಿದ್ದಾರೆ. 'ದೇವರೇ ತಂದೆ-ತಾಯಿಗಳು ತಮ್ಮ ಮರಿಯನ್ನು ಪಡೆಯುವಂತೆ ಕರುಣಿಸಿದ' ಎಂದು ಹೇಳುವ ಮೂಲಕ ಪರೋಕ್ಷವಾಗಿ ಇದರ ವಿರುದ್ಧ ಧ್ವನಿ ಎತ್ತಿದ್ದಾರೆ. ಲೋಕ ಜ್ಞಾನವನ್ನು ಕಥೆಗಳ ಮೂಲಕ ಕೊಡುವ ಪ್ರಯತ್ನವನ್ನು ಕಾರಂತರು ಮಾಡಿದ್ದಾರೆ. ಗಜರಾಜ, ಒಂದೇ ರಾತ್ರಿ ಒಂದೇ ಹಗಲು ಮುಂತಾದ ಕೃತಿಗಳಲ್ಲಿ ಇದನ್ನು ಕಾಣಬಹುದು. ಲೋಕಜ್ಞಾನ ಅಂದರೆ ಅಭಿಪ್ರಾಯ, ರಾಷ್ಟ್ರಪ್ರೇಮ, ಸಿದ್ಧಾಂತ ಮುಂತಾದ ಮತೀಯ ವಿಚಾರಗಳಲ್ಲ. ಅಂತಹ ವಿಚಾರಗಳನ್ನು ಮಕ್ಕಳ ಸಾಹಿತ್ಯದಿಂದ ದೂರವಿಡಬೇಕು ಎನ್ನುವುದು ಅವರ ಸ್ಪಷ್ಟವಾದ ಅಭಿಪ್ರಾಯವಾಗಿದೆ.

**ಕಾರಂತರ ಮಕ್ಕಳ ಪದ್ಯಗಳು**

ಶಿವರಾಮ ಕಾರಂತರು ಮಕ್ಕಳ ೧೯೪೦ರ ದಶಕದಲ್ಲಿಯೇ ಹಲವಾರು ಪದ್ಯಗಳನ್ನು ರಚಿಸಿದರು. ಪ್ರಾಥಮಿಕ ಶಾಲಾ ಶಿಕ್ಷಕರಿಗಾಗಿ ನಡೆದ ಒಂದು ವಾರದ ಶಿಬಿರದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸದ ಪ್ರಯೋಗಗಳನ್ನು ನಡೆಸಿದರು. ಆ ಸಂದರ್ಭದಲ್ಲಿ ಸೃಷ್ಟಿಯಾದ ಪದ್ಯಗಳಿವು. ಮಕ್ಕಳ ಶಿಕ್ಷಣದಲ್ಲಿ ಹಾಡಿನ ಉಪಯುಕ್ತತೆಯನ್ನು ಕಾರಂತರ 'ಢಂ ಢಂ ಡೋಲು' ಕವನ ಸಂಕಲನದ ಮುನ್ನುಡಿಯಲ್ಲಿ ಹೀಗೆ ಹೇಳಿಕೊಳ್ಳುತ್ತಾರೆ.

> ಮಕ್ಕಳ ಗೀತೆ, ಸಾಹಿತ್ಯ, ಕಥೆ, ಇವೆಲ್ಲವೂ ವಿಷಯ ನಿಷ್ಠ ಪಾಠಗಳಾಗಬೇಕಿಲ್ಲ. ಅವು ಮಕ್ಕಳಲ್ಲಿ ಉತ್ಸಾಹ ಹುಟ್ಟಿಸಬಲ್ಲ ನಾದ, ಲಹರಿ, ಮಾತುಗಳ ಸ್ವಯಂಪೂರ್ಣ ಭಾವ ವಿಲಾಸಗಳ ಕೃತಿಗಳು ಆಗಿರಲು ಸಾಧ್ಯ.[೧೮]

ಎನ್ನುತ್ತಾರೆ. ಹೀಗೆ ಕಾರಂತರು ತನ್ನ ಪದ್ಯಗಳಲ್ಲಿ ಶಿಶುಕೇಂದ್ರಿತ ವಿಷಯವನ್ನೇ ಆಯ್ಕೆ ಮಾಡಿಕೊಳ್ಳುತ್ತಾರೆ.

**ಢಂ ಢಂ ಡೋಲು ಶಿಶುಗೀತೆಗಳು ಅಭಿನಯ ಗೀತೆಗಳು**

ಶಿವರಾಮ ಕಾರಂತರು ರಚಿಸಿರುವ ಢಂ ಢಂ ಡೋಲು ಚಿಕ್ಕ ಕೃತಿಯು ಮಕ್ಕಳಿಗೆ ಬೇಕಾಗುವಂತಹ ಮತ್ತು ಮನಸ್ಸನ್ನು ಆಕರ್ಷಿಸುವಂತಹ ಚಿಕ್ಕ ಚಿಕ್ಕ ೨೬ ಪದ್ಯಗಳಿಂದ ಕೂಡಿದೆ. ಸ್ವತಃ ಕಾರಂತರೇ ಹಲವಾರು ಗೀತೆಗಳನ್ನು ಮಕ್ಕಳಿಂದ ಹಾಡಿಸುತ್ತಿದ್ದರು. ಹೀಗೆ ರೂಢಿಯ ಹಳೆಯ ಹಾಡುಗಳ ಜೊತೆಗೆ ಹೊಸ ಗೀತೆಗಳ ಪರಿಚಯ ದೊರಕಿದ ಕಾಲದಲ್ಲೇ ನಾನು ಮಕ್ಕಳ ಸಲುವಾಗಿ ಭಾಷಾ ಪಠ್ಯಪುಸ್ತಕಗಳನ್ನು ಬರೆಯತೊಡಗಿದ್ದೆ. ಅಂತಹ ಗೀತೆಗಳನ್ನು ಮಕ್ಕಳಿಂದ ಹಾಡಿಸಲು ಪ್ರಯತ್ನಿಸುತ್ತಿದ್ದೆ. ಈ ಗೀತೆಗಳ ಜೊತೆಗೆ ಅಭಿನಯ ಕೌಶಲ್ಯವನ್ನು ಬೆಳಗಿಸುವ ಗೀತೆಗಳನ್ನು ಬರೆದು ಮಕ್ಕಳಿಂದ ಹಾಡಿಸಿದ್ದುಂಟು. ಮಕ್ಕಳ ಗೀತೆ ಸಾಹಿತ್ಯ ಕಥೆಗಳಲ್ಲಿ ಉತ್ಸಾಹ ಹುಟ್ಟಿಸುಂವತಹ ಪದ್ಯಗಳನ್ನು ರಚಿಸುತ್ತಿದ್ದರು.

ಇದರಲ್ಲಿ ಬೊಬ್ಬೊ ಭೋಂ ಬೊಮ್ಮ, ನಂಗಿಲ್ಲ ವೃತ್ತಿ, ಕಿಟ್ಟುಪುಟ್ಟು, ಹಣ್ಣು ಹಣ್ಣು, ಗುಬ್ಬಿ ಹಕ್ಕಿ, ಕಾಗೆಯ ಬಣ್ಣ ಕಪ್ಪು, ಕತೆ ಕತೆ ಕಾತಾ, ಹೇಳೋ ಮಂಕ, ಇಂತಹ ಪದ್ಯಗಳು ಕೇವಲ ಪ್ರಾಸ ಪ್ರಧಾನಗಳು. ಪ್ರಸಾದ ನಾದವು ಮಕ್ಕಳನ್ನು ಬಲು ಬೇಗ ತನ್ನ ಕಡೆಗೆ ಎಳೆದು ಕೊಳ್ಳುವುದುಂಟು. ಮಕ್ಕಳಿಗೆ ಬೇಗ ಅರ್ಥವಾಗಲು ಸರಳ ಅರ್ಥದಿಂದ ಕೂಡಿದ ಪದ್ಯಗಳನ್ನು ರಚಿಸಿದ್ದಾರೆ.

ಕಾಗೆಯ ಬಣ್ಣ ಕಪ್ಪು ಎಂಬ ಪದ್ಯವನ್ನು ಗಮನಿಸಿದರೆ

ಕಾಗೆಯ ಬಣ್ಣ ಕಪ್ಪು
ಮುದುಕಿಗೆ ಬಂತು ಮುಪ್ಪು
ನಿನ್ನ ಲೆಕ್ಕ ತಪ್ಪು
ಮಾತನು ಕೇಳೋ ಬೆಪ್ಪು
ಅವನ ಬಾಯಿಗೆ ಸೊಪ್ಪು
ನಿನ್ನ ಬಾಯಿಗೆ ಉಪ್ಪು
ಹಿಡಿಯೋ ಒಂದು ಚಿಪ್ಪು
ಇಲ್ಲಿಂದಲ್ಲಿ ತುಪ್ಪು
(ಢಂ ಢಂ ಡೋಲು ಶಿಶುಗೀತೆಗಳು, ಪು.೧೯)

ಈ ಪದ್ಯವನ್ನು ಗಮನಿಸಿದರೆ ಮಕ್ಕಳು ಸುಲಭವಾಗಿ ಹಾಡಲು ಅತ್ಯಂತ ಕ್ಲಿಷ್ಟಕರವಾದ ಪದಗಳು ಇಲ್ಲದೆ ರಚಿಸಿರುವುದನ್ನು ಕಂಡರೆ ಕಾರಂತರು ಮಕ್ಕಳ ಮನಸ್ಸನ್ನು ಎಷ್ಟು ಸೂಕ್ಷ್ಮವಾಗಿ ಗ್ರಹಿಸಿದ್ದರು ಎಂಬುದು ಅರ್ಥವಾಗುತ್ತದೆ.

"ಎಷ್ಟೆಲ್ಲ ವಾರಗಳು" ಎನ್ನುವ ಪದ್ಯವನ್ನು ನೋಡಿದರೆ

ವಾರಕ್ಕೆ ಮುಖ್ಯ ಆದಿತ್ಯವಾರ
ಊರಿಗೆ ಮುಖ್ಯ ಗುರಿಕಾರ ॥
ಎರಡನೆಯ ದಿನವೇ ಸೋಮವಾರ
ಬೇಕೆ ಬೇಕು ಸೊನೆಗಾರ ॥
ಮೂರನೆ ದಿನವೆ ಮಂಗಳವಾರ
ಊರಿನ ಮನ್ನಣೆ ಮಣೆಗಾರ ॥
ನಾಲ್ಕನೆ ದಿನವ ಬುಧವಾರ
ನಾಳೆಗೆ ಎಂದರೆ ಅದು ಬಾರ ॥
ಐದನೆ ದಿನವೆ ಗುರುವಾರ
ಕೆಲಸವು ಕೆಟ್ಟರೆ ಗ್ರಹಚಾರ ॥
ಆರನೆ ದಿನವೆ ಶುಕ್ರವಾರ
ಮೆಟ್ಟನು ಮಾಡುವ ಸಮಗಾರ ॥
ವಾರದ ಕೊನೆಗೆ ಶನಿವಾರ
ಬ್ರಾಹ್ಮಣಗಿಹುದು ಜನಿವಾರ ॥

(ಢಂ ಢಂ ಡೋಲು ಶಿಶುಗೀತೆಗಳು, ಪು.೫೧)

ಮಕ್ಕಳು ಸುಲಭವಾಗಿ ವಾರಗಳನ್ನು ನೆನಪಿಡಲು ಅನುಕೂಲವಾಗುವಂತೆ ಅವುಗಳನ್ನು ಪದ್ಯರೂಪದಲ್ಲಿ ರಚಿಸಿರುವುದನ್ನು ಕಾಣಬಹುದು.

**ಶಿವರಾಮ ಕಾರಂತ ಮಕ್ಕಳ ಭಾಷೆಯ ಚಿಂತನೆ**

ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಶಿವರಾಮ ಕಾರಂತರ ವಿಶೇಷ ಗಮನ ಸೆಳೆದ ಭಾಷಾ ಶಿಕ್ಷಣ. ಮಕ್ಕಳಿಗೆ ಭಾಷೆಯನ್ನು ಕಲಿಸುವಾಗ ಮುಖ್ಯವಾಗಿ ಯಾವ ಅಂಶಗಳನ್ನು ಗಣನೆಗೆ ತಂದು ಕೊಳ್ಳಬೇಕು, ಭಾಷಾ ಬೋಧನೆಯಲ್ಲಿ ವ್ಯಾಕರಣದ ಕೆಲಸವೇನು ಮುಂತಾದ ವಿಚಾರಗಳನ್ನು ತಿಳಿಸುತ್ತಾರೆ. ಅವರ ದೃಷ್ಟಿಯಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಭಾಷಾ ಶಿಕ್ಷಣ ಶಿಕ್ಷಣದ ಪ್ರಧಾನ ಅಂಗ. ಪಠ್ಯಕ್ರಮದಲ್ಲಿ ಎಷ್ಟು ಭಾಷೆಗಳಿರಬೇಕು. ಮಗುವಿಗೆ ಯಾವ ಹಂತದಲ್ಲಿ ಯಾವ

ಭಾಷೆಯನ್ನು ಕಲಿಸಬೇಕು. ಮಗುವಿಗೆ ಹೇಗೆ ಕಲಿಸಬೇಕು ಎನ್ನುವ ವಿಚಾರದಲ್ಲಿ ಸ್ಪಷ್ಟವಾದ ನಿಲುವನ್ನು ತೋರಿಸುತ್ತಾರೆ. ಪ್ರಾಥಮಿಕ ಶಾಲೆಯಲ್ಲಿ ಮಗುವಿಗೆ ಒಂದು ಭಾಷೆಯನ್ನು ಚೆನ್ನಾಗಿ ಕಲಿಸಿದ ಮೇಲೆ ಇನ್ನೊಂದನ್ನು ಕಲಿಸಬೇಕು ಎನ್ನುತ್ತಾರೆ. ಉಪಾಧ್ಯಾಯರು ಮಗುವಿನೊಡನೆ ಮಾತನಾಡುವಾಗ ಅತಿ ಸರಳವಾದ ಸುಲಭ ಮಾತುಗಳನ್ನೇ ಉಪಯೋಗಿಸಬೇಕು. ಮಕ್ಕಳು ಅರಿಯಲಾರದ ಶಬ್ದ ಪ್ರಯೋಗಗಳನ್ನು ಉಪಯೋಗಿಸಿ ಅವರ ಮನಸ್ಸಿಗೆ ಬೇಸರವನ್ನುಂಟು ಮಾಡಬಾರದು. ಒಂದು ವಸ್ತುವಿನ ವಿಷಯವನ್ನು ವಿವರಿಸುವಾಗ ಮಗು ಬೇಸರಿಸಂದಂತೆ ಪಾಠದ ಮೇಲೆ ಪ್ರಿತಿಯಿಡುವಂತೆ ಉಲ್ಲಾಸಕರವಾದ ಮಾತುಗಳಿಂದ ಕಲಿಸುವುದು ಅಗತ್ಯ. ಅವರೇ ಹೇಳುವಂತೆ ಮನಸ್ಸಿನಲ್ಲಿ ಬೇಸರವನ್ನುಂಟು ಮಾಡಿ ಉತ್ಸಾಹವನ್ನು ಕುಗ್ಗಿಸುವ ಈ ವ್ಯಾಕರಣವು ಮಕ್ಕಳಿಗೆ ಏಕೆ ಬೇಕು ಅಭ್ಯಾಸ ಪೂರ್ವಕವಾಗಿಯೇ ಮಕ್ಕಳು ಭಾಷೆಯನ್ನು ಕಲಿಯಬೇಕಲ್ಲದೆ, ಅದರೆಡೆಯಲ್ಲಿ ಅರ್ಥವಾಗದ ವ್ಯಾಕರಣ ನಿರ್ಬಂಧವನ್ನು ಮಕ್ಕಳ ಮುಂದಿಡಬಾರದು ಎನ್ನುತ್ತಾರೆ. ನಿತ್ಯ ಜೀವನದಲ್ಲಿ ಮಾತಾಡುವ ಭಾಷೆಯನ್ನು ತರಗತಿಗಳಲ್ಲಿ ವ್ಯಾಕರಣದ ಸಹಾಯದಿಂದ ಕಲಿಸುವುದು ಅಗತ್ಯವಿಲ್ಲ ಎನ್ನುವುದು ಕಾರಂತರ ಅಭಿಪ್ರಾಯ ವಾಗಿತ್ತು.

ಪ್ರಾಥಮಿಕ ಮಕ್ಕಳ ಪಠ್ಯಪುಸ್ತಕಗಳಲ್ಲಿ ಭಾಷಾ ಕುರಿತು ಹಲವಾರು ದೋಷಗಳಿಂದ ತುಂಬಿತ್ತು. ಒಮ್ಮೆ ಕಾರಂತರು ಐದನೆ ತರಗತಿ ವಿದ್ಯಾರ್ಥಿಗಳ ಕೊಠಡಿಯ ಬಳಿ ನಿಂತು ಹೊರಗಿನಿಂದ ಪಾಠ ಕಲಿಸುವುದನ್ನು ಗಮನಿಸುತ್ತ ಇರುವಾಗ ಅಲ್ಲಿ ಮಕ್ಕಳಿಗೆ ಪಾಠ ನಡೆಯುತ್ತಿತ್ತು. ಅಲ್ಲಿ ಮಕ್ಕಳು ತಪ್ಪಿದ ಶಬ್ದಗಳನ್ನು ಹತ್ತಾರು ಸಲ ಬರೆಯಿಸುವ ಕ್ರಮ ರೂಢಿಯಲ್ಲಿತ್ತು. ಕಾರಂತರು ಅಲ್ಲಿನ ಶಿಕ್ಷಕರೊಂದಿಗೆ ಮಕ್ಕಳು ತಪ್ಪು ಮಾಡಿದ ಶಬ್ದಗಳನ್ನು ತಿಳಿದುಕೊಳ್ಳಲು ಅಲ್ಲಿರುವ ಎಲ್ಲಾ ವಿದ್ಯಾರ್ಥಿಗಳ ಪುಸ್ತಕಗಳನ್ನು ತರಿಸಿಕೊಂಡು ಸೂಕ್ಷ್ಮವಾಗಿ ಪರಿಶೀಲಿಸಿದರು. ಮಕ್ಕಳು ಈ ರೀತಿ ಶಬ್ದಗಳನ್ನು ತಪ್ಪುವುದಕ್ಕೆ ಏನು ಕಾರಣ ಎಂದು ತಿಳಿಯಲು ಪ್ರಯತ್ನಿಸಿದಾಗ ಆ ಕಾರಣಗಳು ಏನೆಂದು ಒಂದೊಂದಾಗಿ ತಿಳಿಯುತ್ತಾ ಬಂದವು. ಸಾಮಾನ್ಯವಾಗಿ ಮಕ್ಕಳು ಒಂಟೆ ಎನ್ನುವಲ್ಲಿ ಒಟ್ಟೆ, ಧನಿಕ ಎನ್ನುವಲ್ಲಿ ದನಿಕ ಮನೆ ಎಂಬುದನು ಮಣೆ ಆಗಿರುತ್ತಿತ್ತು. ಇಂತಹ ತಪ್ಪುಗಳನ್ನು ಸ್ಪಷ್ಟವಾಗಿ ವರ್ಗೀಕರಿಸಿ ಕಾರಣಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಿದರು.

ಮುಖ್ಯವಾಗಿ ಮಕ್ಕಳು ಶಬ್ದಗಳನ್ನು ಉಚ್ಚರಿಸುವಾಗ ಅವರ ಗಮನ ಶಬ್ದದ ಕಡೆಗೆ ಹೋಗುತ್ತದೆಯೆ ಹೊರತು ಶಬ್ದದ ರೂಪವನ್ನು ನಿರ್ಣಯಿಸುವ ವಾಕ್ಯದ ಕಡೆಗೆ ಹೋಗುವುದಿಲ್ಲ. ಶಬ್ದಗಳ ಉಚ್ಚಾರಣೆಯು ಶಿಕ್ಷಕರು ಸರಿಯಾಗಿ ಮಾಡುತ್ತಾರೊ ಇಲ್ಲ ಎಂಬುದನ್ನು ಗಮನಿಸಬೇಕು.

ಅಥವಾ ಹುಡುಗರ ಮನೆಯವರು, ಸ್ನೇಹಿತರು, ಶಬ್ದಗಳನ್ನು ಯಾವ ರೀತಿ ಉಚರಿಸುತ್ತಾರೆ ಎಂಬುದನ್ನು ಗಮನಿಸಬೇಕಾಗುತ್ತದೆ. ಸಾಮಾಜಿಕ ಭಾಷಾ ಪ್ರಬೇದಗಳಲ್ಲಿ ಒಂದು ಪದಕ್ಕೆ ವಿವಿಧ ಪ್ರಾಂತಗಳಲ್ಲಿ ಒಂದೊಂದು ರೀತಿ ಉಚ್ಚರಿಸುತ್ತಾರೆ. ದೀರ್ಘ ಸ್ವರ ಹೃಸ್ವವಾಗುತ್ತದೆ. ಹೃಸ್ವಸ್ವರ ದೀರ್ಘವಾಗುತ್ತದೆ. ಜನರು ಸಮಾದಾನ ಎಂಬ ಪದವನ್ನು ಬಳಕೆಯಲ್ಲಿ ಸಮಾಧಾನ ವಾಗಿದೆ. ವಿದ್ಯೆ ಎಂಬ ಪದ ಕೆಲವರ ಬಾಯಲ್ಲಿ ವಿಧ್ಯೆ ಆಗುತ್ತದೆ. ಹರಕೆ ಅರಕೆ ಮುಂತಾದ ಶಬ್ದಗಳ ಸ್ಪಷ್ಟತೆಯಲ್ಲಿ ಉಚ್ಚಾರಣೆ ಮಾಡುವಾಗ ತಪ್ಪು ತಪ್ಪಾಗಿ ಉಚ್ಚರಿಸುತ್ತಾರೆ. ಇಂತಹ ಶಬ್ದಗಳನ್ನು ಕೇಳುವ ಮಕ್ಕಳು ತಪ್ಪನ್ನು ಉಚ್ಚರಿಸಲು ಪ್ರಾರಂಭಿಸುತ್ತಾರೆ.

ಶಿವರಾಮ ಕಾರಂತರು ಇಂತಹ ತಪ್ಪುಗಳಾಗದಂತೆ ಸಾಮಾನ್ಯವಾಗಿ ಮಕ್ಕಳು ತಪ್ಪುವ ಶಬ್ದಗಳನ್ನೆಲ್ಲಾ ಗುರುತಿಸಿ ಅವುಗಳಿಗೆ ಸ್ಪಷ್ಟಕಾರಣವನ್ನು ತಿಳಿದು ಉಚ್ಛಾರ ದೋಷಗಳನ್ನು ತಿದ್ದುವುದಕ್ಕೆ ಹಲವಾರು ಉದಾಹರಣೆಗಳ ಮೂಲಕ ಮಕ್ಕಳಿಗೆ ತಿಳಿಸಲು ಪ್ರಯತ್ನಿಸಿದರು. ಉದಾಹರಣೆಗೆ ಹು, ಮತ್ತು ಉ ಎಂಬ ಅಕ್ಷರಗಳನ್ನು ಹೇಳುವಾಗ ಉಚ್ಚಾರದ ಧ್ವನಿಗಳ ಏರಿಳಿತವು ಕೇಳುವವರಲ್ಲಿ ಒಂದೇ ರೀತಿಯಾಗಿ ಕೇಳಿಸುತ್ತದೆ. ಇದನ್ನು ತಪ್ಪಿಸಲು ಕಾರಂತರು ಮಕ್ಕಳಿಗೆ "ಹುರುಳಿ ಚೀಲ ಉರುಳಿ ಹೋಯಿತು" ಎನ್ನುವ ಸಾಮಾನ್ಯವಾಗಿ ತಪ್ಪುವ ಅಕ್ಷರಗಳ ಸ್ಪಷ್ಟ ಉದಾಹರಣೆಯನ್ನು ಕೊಟ್ಟಿದ್ದಾರೆ. 'ನೆ', ಮತ್ತು 'ಣೆ', ಅಕ್ಷರಗಳಿಗೆ ಮನೆಯ ಒಳಗೆ ಮಣೆಯ ಮೇಲೆ ಕುಳಿತುಕೊಂಡ ಎಂದು ಉದಾಹರಣೆಯನ್ನು ಹೇಳುತ್ತಾರೆ. ಇಲ್ಲಿ ನೆ ಮತ್ತು ಣೆ ಅಕ್ಷರಗಳ ಭೇದವೂ ಒಂದೇ ವಾಕ್ಯದಲ್ಲಿ ಸ್ಪಷ್ಟವಾಗುತ್ತದೆ.

ಸಾಮಾನ್ಯವಾಗಿ ಮಕ್ಕಳು ಒಂಟೆ ಎಂಬ ಪದವನ್ನು ಒಟ್ಟೆ ಎಂದು ಕರೆಯುತ್ತಾರೆ. ಇದನ್ನು ತಪ್ಪಿಸಲು ಒಂಟೆಯ ಮೇಲೆ ಒಟ್ಟೆ ಚೀಲ ಇರಿಸಿಕೊಂಡು ಹೋದ, ಅಲ್ಪಪ್ರಾಣ ಮಹಾಪ್ರಾಣ ಉಚ್ಚಾರಗಳ ಸ್ಪಷ್ಟತೆಯ ಬಗ್ಗೆ "ಅವನ ಹತ್ತಿರ ದನವೂ ಇತ್ತು ಧನವೂ ಇತ್ತು" ಎನ್ನುವ ಉದಾಹರಣೆಗಳನ್ನು ಕೊಡುತ್ತಾರೆ. ಮಕ್ಕಳಿಗೆ ಅರ್ಥವಿಲ್ಲದ ಬಿಡಿ ಅಕ್ಷರಗಳನ್ನು ಕಲಿಸುವುದರಿಂದ ಅರ್ಥಗ್ರಹಣಶಕ್ತಿ ವಿಲಂಬಿತವಾಗಿ ಮುಂದಿನ ಶಬ್ದ ಅಕ್ಷರಗಳನ್ನು ಬಿಡಿಸಿ ಓದುವಾಗ ಹಿಂದೆ ಬಿಡಿಸಿ ಓದಿದ ಶಬ್ದ ಮರೆತು ಹೋಗುವ ಸಂಭವ ಹೆಚ್ಚಾಗಿರುತ್ತದೆ. ಪ್ರಾಥಮಿಕ ಹಂತದಲ್ಲಿ ಕಿರಿಯ ವಾಕ್ಯಗಳನ್ನು ಓದಿನ ಘಟಕಗಳಾಗಿ ಕಲಿಸಲು ಸಾಧ್ಯ ಎಂಬುದನ್ನು ಈ ಮೂಲಕ ಉದಾಹರಣೆಗಳನ್ನು ಕೊಟ್ಟು ವಿವರಿಸುತ್ತಾರೆ.

> ಮಕ್ಕಳ ಪ್ರಪಂಚದ ಶಬ್ದಗಳನ್ನಾಯ್ದು ಸ್ಪಷ್ಟವಾದ ಸ್ಥೂಲಚಿತ್ರಗಳ ರೂಪದಲ್ಲಿ ಇಸ್ಪೀಟು ಗಾತ್ರದ ಕಾರ್ಡುಗಳ ಮೇಲೆ ಅವನ್ನು ಬರೆದು ಅಂಥದೇ ಬೇರೆ ಕಾರ್ಡುಗಳ ಮೇಲೆ ಶಬ್ದಗಳನ್ನು ಬರೆದು ಇರಿಸಿಕೊಂಡರೆ ಚಿತ್ರ ವಸ್ತುವಿಗೂ ಅವುಗಳ ಬರಹಕ್ಕೂ ಇರುವ ಸಂಬಂಧದ ಅಭ್ಯಾಸ ಮಾಡಿಸಬಹುದು.[೧೯]

ಮಕ್ಕಳಿಗೆ ಆಟದ ಮೂಲಕ ಅನೇಕ ಸುಲಭವಾದಂತಹ ಶಬ್ದಗಳನ್ನು ಪರಿಚಯ ಮತ್ತು ಅಕ್ಷರಗಳ ನೆನಪನ್ನು ಮೂಡಿಸಬಹುದು ಎನ್ನುತ್ತಾರೆ. ಪೂರ್ವ ಪ್ರಾಥಮಿಕ ಹಂತದಲ್ಲಿ ಮಕ್ಕಳಿಗೆ ಒಂದು ವಸ್ತುವಿನ ಚಿತ್ರ ತೋರಿಸಿ ಆ ಬಳಿಕ ಸಂಬಂಧಪಟ್ಟ ಹೆಸರನ್ನು ದೊಡ್ಡ ಅಕ್ಷರಗಳಲ್ಲಿ ಕಾರ್ಡಿನಲ್ಲಿ ಬರೆದು ಆ ಚಿತ್ರಕ್ಕೆ ಸಂಬಂಧಿಸಿದ ವಿಷಯಗಳನ್ನು ಎಷ್ಟು ಸಾಧ್ಯವಾಗುತ್ತದೆಯೋ ಅಷ್ಟು ಪದಗಳನ್ನು ಮಕ್ಕಳಿಂದ ಹೇಳಿಸಲು ಪ್ರಯತ್ನ ಮಾಡಬೇಕು. ಮಕ್ಕಳು ತಾವಾಗಿಯೇ ಕಂಡಂತಹ ಪ್ರಾಣಿ ಪಕ್ಷಿಗಳ ಹೆಸರುಗಳನ್ನು ಯಾವ ಯಾವ ಜಾತಿಯ ಪಕ್ಷಿಗಳನ್ನು ಇವೆ ಎಂಬುದನ್ನು ತಿಳಿಸಿ ಅವರಲ್ಲಿ ಜ್ಞಾನದ ಕುತೂಹಲವನ್ನು ಬೆಳೆಯಿಸಬಹುದು.

ಮಕ್ಕಳು ಭಾಷೆಯಲ್ಲಿ ಪರಿಣಿತಿಯನ್ನು ಸಂಪಾದಿಸಬೇಕಾದರೆ ಕೃತ್ರಿಮತೆ ಅಥವಾ ಒತ್ತಾಯ ಪ್ರಯೋಜನಕ್ಕೆ ಬರುವುದಿಲ್ಲ ಎನ್ನುವುದು ಕಾರಂತರ ಅಭಿಪ್ರಾಯ. ಭಾಷೆಯು ಮೂಲತಃ ಕೇಳಿ ಕಲಿಯುವ ಒಂದು ಕ್ರಿಯೆ. ವ್ಯಕ್ತಿಯ ಬಾಲ್ಯ ಮತ್ತು ಪ್ರೌಢ ಜೀವನದಲ್ಲಿ ಆಲಿಸುವಿಕೆಯ ಪಾತ್ರ ಮಹತ್ವದ್ದು. ಮಗುವು ತಾನು ಮಾತು ಹೊರಡಿಸುವುದಕ್ಕೆ ಮೊದಲು ಸಾಕಷ್ಟು ಕಾಲ ತಾಯಿ, ತಂದೆ ಹಾಗೂ ಇತರರ ಮಾತುಗಳನ್ನು ಆಲಿಸುತ್ತದೆ. ಅವರ ತುಟಿ ಚಲನೆಯನ್ನು ಗಮನಿಸುತ್ತದೆ. ಆ ಬಳಿಕ ಮಾತನಾಡಲು ಪ್ರಯತ್ನಿಸುತ್ತದೆ. ಮಗುವು ಶಾಲೆಗೆ ಸೇರುವ ಹೊತ್ತಿಗೆ ಕನ್ನಡದ ಮೂಲಭೂತ ಧ್ವನಿ ವ್ಯವಸ್ಥೆ ಹಾಗೂ ವ್ಯಾಕರಣದ ಚೌಕಟ್ಟನ್ನು ಗ್ರಹಿಸಿ ಮಾತನಾಡಲು ಕಲಿತಿರುತ್ತದೆ. ಹೀಗೆಯೇ ಮನೆಯ ಪರಿಸರದಿಂದ ಭಾಷೆಯನ್ನು ಕಲಿತ ಮಗು ಶಾಲೆಗೆ ಸೇರಿದ ತಕ್ಷಣ ಶಾಲೆಯಲ್ಲಿ ಕಲಿಸುವ ಭಾಷೆಯೇ ಮಗುವಿಗೆ ಹೊಸದಾಗಿ ಕಾಣುತ್ತದೆ. ಮಗುವಿನ ಮನೆಯ ಮಾತೇ ಬೇರೆಯಾಗಿರುತ್ತದೆ. ಶಾಲೆಯ ಮಾತೆ ಬೇರೆಯಾಗಿರುತ್ತದೆ. ಮುಖ್ಯವಾಗಿ ಮಕ್ಕಳಿಗೆ ಪಠ್ಯಪುಸ್ತಕದ ಮೂಲಕವೇ ಭಾಷೆಯನ್ನು ಕಲಿಯುವುದರಿಂದ ಭಾಷೆಯ ಶಿಷ್ಟ ರೂಪವನ್ನು ಮಕ್ಕಳು ತಮ್ಮ ಮಾತಿನಲ್ಲಿ ಬಳಸಲು ಶಿಕ್ಷಕರು ಹೆಚ್ಚಿನ ಪ್ರೋತ್ಸಾಹ ಕೊಡಬೇಕಾಗುತ್ತದೆ. ಇಂತಹ ಸಂದರ್ಬದಲ್ಲಿ ಮಕ್ಕಳ ಉಚ್ಚಾರ ದೋಷಗಳನ್ನು ಗುರುತಿಸಿ ತಿದ್ದಬೇಕಾಗುತ್ತದೆ. ಅವರ ಮಾತಿನಲ್ಲಿ ಅಸ್ಪಷ್ಟತೆ ಹಾಗೂ ವ್ಯಾಕರಣದ ತಪ್ಪುಗಳನ್ನು ತಿದ್ದಬೇಕಾಗುತ್ತದೆ. ಪೂರ್ವ ಪ್ರಾಥಮಿಕ ಶಾಲೆಯಲ್ಲಿ ಮಕ್ಕಳು ಸಂದರ್ಭಕ್ಕೆ ತಕ್ಕಂತೆ ಪದಗಳನ್ನು ಸೂಕ್ತವಾಗಿ ಬಳಸುವುದು ಮತ್ತು ನಿರರ್ಗಳವಾಗಿ ತಪ್ಪಿಲ್ಲದೆ ಮಾತನಾಡುವುದನ್ನು ಪ್ರೋತ್ಸಾಹಿಸಿ ತ್ತಿದ್ದರು.

ಈ ರೀತಿಯ ಹಲವಾರು ಉದಾಹರಣೆಗಳ ಮೂಲಕ ಮಕ್ಕಳಲ್ಲಿ ಶಬ್ದ ಉಚ್ಚಾರಣೆಯ ದೋಷವನ್ನು ತಪ್ಪಿಸಲು ಪ್ರಯತ್ನಿಸುತ್ತಾರೆ. ಈ ಕುರಿತು ಪಠ್ಯಗಳಲ್ಲಿ ವಿಶೇಷ ಕಾಳಜಿಯನ್ನು ವಹಿಸುತ್ತಿದ್ದರು. ಶಿವರಾಮ ಕಾರಂತರು ಪುತ್ತೂರುನಲ್ಲಿ ೩೦ ರಿಂದ ೪೦ರ ಅವಧಿಯಲ್ಲಿ

ನಡೆಸಿದ ಮಕ್ಕಳ ಕೂಟ, ದಸರಾ ಉತ್ಸವ, ಬಾಲವನ ಇತ್ಯಾದಿ ಚಟುವಟಿಕೆಗಳಿಂದಾಗಿ ಸ್ಥಳೀಯ ಶಾಲಾ ಶಿಕ್ಷಕರ ಪರಿಚಯ ಸ್ನೇಹದಿಂದ ಆಗಾಗ ಅವರೊಂದಿಗೆ ಶಿಕ್ಷಣಕ್ಕೆ ಸಂಬಂಧಿಸಿದಂತೆ ಚರ್ಚೆಯಲ್ಲಿ ಭಾಗವಹಿಸಿ, ಹಲವಾರು ವಿಷಯಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ಹೀಗೆ ಚರ್ಚಿಸುವ ಸಂದರ್ಭದಲ್ಲಿ ಕಾರಂತರಿಗೆ ಅಲ್ಲಿರುವವರ ಜ್ಞಾನದ ಇತಿ ಮಿತಿ ಗೊತ್ತಾಗುತ್ತಿತ್ತು. ಏಕೆಂದರೆ ಅಲ್ಲಿರುವವರು ಓದು ಹೈಸ್ಕೂಲ್ ಶಿಕ್ಷಣಕ್ಕೆ ಮಾತ್ರ ಸಿಮೀತವಾಗಿತ್ತು. ಏಕೆಂದರೆ ಅಂದಿನ ಕಾಲದಲ್ಲಿ ಶಿಕ್ಷಕರು ತಮ್ಮ ಜ್ಞಾನವನ್ನು ವಿಸ್ತರಿಸಿಕೊಳ್ಳಲು ವಿವಿಧ ವಿಷಯಗಳನ್ನು ಕುರಿತ ಪುಸ್ತಕಗಳು ಇರಲಿಲ್ಲ. ಆದ್ದರಿಂದ ಕಾರಂತರು ಬಾಲ ಪ್ರಪಂಚವನ್ನು ಬರೆಯಲು ಕಾರಣವಾಯಿತು.

> ಅವರಿಗೆ ತಿಳಿಯುವ ಕನ್ನಡ ಭಾಷೆಯಲ್ಲಿ ವಿವಿಧ ವಿಷಯಗಳ ಮೇಲೆ ಬರೆದ ಕನ್ನಡ ಗ್ರಂಥಗಳ ಸಂಖ್ಯೆ ಬೆರಳಿಂದ ಎಣಿಸುವಷ್ಟು ಕಡಿಮೆಯಿತ್ತು. ಈ ಚಿಂತೆಯೆ ನನನ್ನು ಬಾಲ ಪ್ರಪಂಚ ಬರೆಯಲು ಪ್ರೇರೇಪಿಸಿತು[೨೦]

ಎನ್ನುತ್ತಾರೆ. ಕಾರಂತರು ಬಾಲ ಪ್ರಪಂಚವನ್ನು ಬರೆಯುವುದಕ್ಕೆ ಹಲವಾರು ಪುಸ್ತಕಗಳನ್ನು ಓದಲು ಪ್ರಾರಂಭಿಸಿದರು. ಬೇರೆ ಭಾಷೆಯಲ್ಲಿ ಬರೆದಂತಹ ವಿಶ್ವಕೋಶಗಳನ್ನು, ವೈಜ್ಞಾನಿಕ ಬರಹಗಳನ್ನು, ಕಲೆ, ರಾಜಕೀಯ, ಚರಿತ್ರೆ, ಭೂಗೋಳ ಹೀಗೆ ಹಲವಾರು ಪುಸ್ತಕಗಳನ್ನು ದೀರ್ಘ ಕಾಲ ಅಧ್ಯಯನ ಮಾಡಿದರು.

೧೯೪೦ರ ದಶಕದಲ್ಲಿ ಸಾಮಾನ್ಯವಾಗಿ ಶಿಕ್ಷಕರು ಹೆಚ್ಚಾಗಿ ಕನ್ನಡದಲ್ಲಿಯೇ ಪಾಠವನ್ನು ಮಾಡುತ್ತಿದ್ದರು. ಕನ್ನಡ ಭಾಷೆಯ ಪಠ್ಯಪುಸ್ತಕಗಳನ್ನು ಕಲಿಸುವಾಗಲೂ ಅವರಿಗೆ ಕ್ಲಿಷ್ಟವಾದ ಪದಗಳನ್ನು ತಿಳಿದುಕೊಳ್ಳಲು ಯಾವುದೇ ಪುಸ್ತಕಗಳು ಇರಲಿಲ್ಲ, ಜೈಮಿನಿ ಭಾರತ, ತೊರವೆ ರಾಮಾಯಣ, ವ್ಯಾಸ ಭಾರತ ಮುಂತಾದ ಪದ್ಯಗಳಲ್ಲಿರುವ ಕ್ಲಿಷ್ಟ ಪದಗಳನ್ನು ತಿಳಿದುಕೊಳ್ಳಲು ಬೇರೆ ಪುಸ್ತಕಗಳ ನೆರವು ಇದ್ದಿರಲಿಲ್ಲ. ಉಪಾಧ್ಯಾಯರ ಸಲುವಾಗಿ ಕನ್ನಡ ಅರ್ಥಕೋಶದ ಅಭಾವವಿತ್ತು, ಈ ಕುರಿತು ಕಾರಂತರು ಒಂದು ಕೋಶವನ್ನು ರಚಿಸಲು ಮುಂದಾದರು. ಶಿವರಾಮ ಕಾರಂತರಿಗೆ ಪರಿಚಿತರಾದ ಶಂಕರ ನಾರಾಯಣ ಎಂಬ ಶಿಕ್ಷಕರಿಗೆ ಹಳೆಯ ಸಾಹಿತ್ಯ ಗ್ರಂಥಗಳನ್ನು ಓದುವ ಹವ್ಯಾಸವಿತ್ತು. ಹಾಗೆ ಅವರು ಓದುವಾಗ ಗದುಗಿನ ಭಾರತದಲ್ಲಿ ಬರುವ ಕ್ಲಿಷ್ಟ ಪದಗಳನ್ನು ಸಂಗ್ರಹಿಸಿ ಒಂದು ಚಿಕ್ಕ ಅರ್ಥಕೋಶವನ್ನು ನಿರ್ಮಿಸಿದ್ದರು. ಅದನ್ನು ಕಾರಂತರಿಗೆ ತೋರಿಸಲು ತಂದಾಗ ಅದನ್ನು ನೋಡಿದ ಕೂಡಲೇ ಅವರಿಗೂ ಒಂದು ನಿಘಂಟನ್ನು ರಚಿಸುವ ಭಾವನೆ ಬಂದಿತು. ನಂತರ ಸಿರಿಗನ್ನಡ ಅರ್ಥಕೋಶವನ್ನು ರಚಿಸಿದರು. ಈ ಅರ್ಥಕೋಶವು ಕನ್ನಡ ಭಾಷೆಯನ್ನು ಕಲಿಯುವುದಕ್ಕೆ ಅವಕಾಶ ಕಲ್ಪಿಸಿತ್ತು,

ಅಂದಿನವರೆಗೆ ಕಿಟೆಲ್ಲರ ನಿಘಂಟನ್ನು ಬಿಟ್ಟರೆ ಕನ್ನಡದಲ್ಲಿ ಬೇರೆ ಅರ್ಥಕೋಶಗಳೆ ರಚನೆಯಾಗಿರಲಿಲ್ಲ. ಇದರಿಂದ ಸಿರಿಗನ್ನಡ ಅರ್ಥಕೋಶವು ಕನ್ನಡದಲ್ಲಿರುವ ಕ್ಲಿಷ್ಟಪದಗಳನ್ನು ತಿಳಿದುಕೊಳ್ಳುವುದಕ್ಕೆ ಬಹಳಷ್ಟು ಪ್ರಯೋಜನಕಾರಿಯಾಗಿತ್ತು. ಆದರೆ ಕೆಲವರು ಕಾರಂತರು ಇದಕ್ಕೂ ಬಂದರೇ? ಎಂದು ವ್ಯಂಗವಾಡುತ್ತಿದ್ದರು. ಕುರಿತು ಕಾರಂತರು ತಮ್ಮ ಅರ್ಥ ಕೋಶದ ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ

> ನನಗಿಂತ ಸಮರ್ಥರಾದವರು ಕೆಲಸವನ್ನೆ ಮಾಡದೆ ಮೂಕರಾಗಿ ಕುಳಿತಿರುವಾಗ ನನ್ನಂಥ ಅರೆಪಂಡಿತ ಇಂಥ ಧೈರ್ಯಕ್ಕೆ ಕೈ ಹಾಕುತ್ತಾನೆ. ಇದಕ್ಕಿಂತ ಉತ್ತಮ ಕೋಶ ಬಂದರೆ ಎಲ್ಲರಿಗಿಂತಲೂ ಹೆಚ್ಚಿನ ಸಂತೋಷ ನನಗೆ ಉಂಟಾದೀತು [೨೧] ಎನ್ನುತ್ತಾರೆ.

ಈ ಮಾತಿನಿಂದ ಅವರನ್ನು ಟೀಕಿಸುವವರೆಲ್ಲಾ ಮರು ಮಾತನಾಡದೆ ಸುಮ್ಮನಾದರು. ನಾವು ತಿಳಿದಿರುವ ಜ್ಞಾನವನ್ನು ಮುಂದಿನ ಪೀಳಿಗೆಗೆ ತಿಳಿಸಬೇಕಾದರೆ ಭಾಷೆಯೆ ಪ್ರಮುಖ ಸಾಧನವಾಗಿದೆ. ಅದು ಆಯಾ ಜನರ ಮಾತೃಭಾಷೆಯಾದರೆ ಇನ್ನೂ ಸುಲಭವಾಗುತ್ತದೆ ಎಂದು ನಂಬಿದ ಕಾರಂತರೂ ಸಿರಿಗನ್ನಡದ ಅರ್ಥಕೋಶವನ್ನು ರಚಿಸಿದರು.

**ಯುನೆಸ್ಕೋ ಸಂಸ್ಥೆಯೊಡನೆ ಸಂಬಂಧ**

ಪ್ಯಾರಿಸ್ಸಿನ ಯುನೆಸ್ಕೋ ಸಂಸ್ಥೆಯವರು ವಯಸ್ಕರ ವಿದ್ಯಾಭ್ಯಾಸದ ಸಮಸ್ಯೆಗಳನ್ನು ಕಂಡು ಹಿಡಿಯುವುದಕ್ಕಾಗಿ 'Fundamental group Training Scheme' ಎಂಬ ಯೋಜನೆಯನ್ನು ಹಾಕಿಕೊಂಡರು. ಇದನ್ನು ಎರಡು ವರ್ಷಗಳ ಮೈಸೂರು ಬಳಿಯ ಇಳವಾಳ ಎಂಬಲ್ಲಿ ನಡೆಯಿಸಿದರು. ಅದರ ನೇತೃತ್ವವನ್ನು ಯುನೆಸ್ಕೋ ವಿದ್ಯಾ ಸಂಸ್ಥೆಯ ಡೈರಕ್ಟರಾಗಿದ್ದ ಜಾನ್ ಬವರ್ಸ್ ಎಂಬುವರು ವಹಿಸಿದ್ದರು. ಇವರಿಗೆ ಶಿವರಾಮ ಕಾರಂತರ ಪರಿಚಯವಿದ್ದರಿಂದ ಈ ಕೆಲಸದಲ್ಲಿ ಸಹಕಾರ ನೀಡುವಂತೆ ಕಾರಂತರನ್ನು ಕೇಳಿಕೊಂಡರು. ಇವರ ಆಹ್ವಾನದ ಮೇರೆಗೆ ಈ ಸಂಸ್ಥೆಯಲ್ಲಿ ಕೆಲಸ ಮಾಡಲು ಕಾರಂತರು ಒಪ್ಪಿಕೊಂಡರು. ಈ ಸಂಸ್ಥೆಯ ನಿರ್ದೇಶಕರು ಮತ್ತು ತಜ್ಞರು ಯುರೋಪಿನವರಾಗಿದ್ದು, ನಾರ್ವೆ, ಬೆಲ್ಜಿಯಂ, ಫ್ರಾನ್ಸ್, ಇಂಗ್ಲೆಂಡುಗಳಿಂದ ಹಲವಾರು ಶಿಕ್ಷಕರು, ಮನಶಾಸ್ತ್ರಜ್ಞರು ಇದ್ದರು. ಇವರ ಜೊತೆ ಭಾರತದ ಕೆಲ ಉಪಾಧ್ಯಾಯರು ಭಾಗವಹಿಸಿದ್ದರು. ವಯಸ್ಕರಿಗೆ ಫಿಲ್ಮ್, ಪುಸ್ತಕ, ರೇಡಿಯೋ ಪ್ರಸಾರ ಮೊದಲಾದ ಮಾಧ್ಯಮಗಳ ಮೂಲಕ ಹೇಗೆ ತಿಳುವಳಿಕೆಯನ್ನು ನೀಡಬೇಕು? ಮತ್ತು ಇಲ್ಲಿಯ ತನಕ ನೀಡುತ್ತಿದ್ದ ಶಿಕ್ಷಣ ಕ್ರಮದ ಮತ್ತು ವಸ್ತುಗಳಲ್ಲಿನ ಗುಣ ದೋಷಗಳನ್ನು ಅರಿತುಕೊಂಡು ಆದಷ್ಟು ಹೆಚ್ಚಾಗಿ ಪ್ರಯೋಜನಕಾರಿಯಾಗುವಂತೆ ವಯಸ್ಸರ ಶಿಕ್ಷಣವನ್ನು ರೂಪಿಸುವುದು ಈ ಸಂಸ್ಥೆಯ ಉದ್ದೇಶವಾಗಿತ್ತು. ಭಾರತದ ಪ್ರತಿನಿಧಿಗಳಾಗಿ ಬೇರೆ ಬೇರೆ ಪ್ರದೇಶಗಳಿಂದ ಹಲವಾರು ಜನರು

ಬಂದಿದ್ದರು. ಮುಖ್ಯವಾಗಿ ವಯಸ್ಕರ ಪಠ್ಯಪುಸ್ತಕಗಳ ರಚನೆಯ ಕುರಿತಾಗಿತ್ತು. ಮೈಸೂರಿನಲ್ಲಿ ವಯಸ್ಕರ ಶಿಕ್ಷಣವನ್ನು ಕುರಿತು ತರಗತಿಗಳು ನಡೆಯುತ್ತಿದ್ದವು. ವಯಸ್ಕರ ಸಲುವಾಗಿಯೇ ಪಠ್ಯಪುಸ್ತಕಗಳು, ಬರವಣಿಗೆಗಳು ರಚನೆಗೊಳ್ಳುತ್ತಿರುವುದರಿಂದ ಯುನೆಸ್ಕೋ ಸಂಸ್ಥೆಯು ಮೈಸೂರಿನಲ್ಲಿ ಈ ಶಿಬಿರ ನಡೆಸಲು ಕಾರಣವಾಯಿತು.

ಯುನೆಸ್ಕೋ ಸಂಸ್ಥೆಯವರು ಮೊದಲಾದ ದೇಶಗಳಲ್ಲಿ ವಯಸ್ಕರ ವಿದ್ಯಾಭ್ಯಾಸವನ್ನು ಕುರಿತು ಕೆಲಸವನ್ನು ಮಾಡುತ್ತಿದ್ದರು. ಇದಕ್ಕಾಗಿ ಸಾಕಷ್ಟು ಹಣವನ್ನು ಖರ್ಚು ಮಾಡಿದ್ದರು. ಇಂತಹ ಹಲವಾರು ಶಿಬಿರಗಳು ಯಶಸ್ವಿಯಾಗಿರಲಿಲ್ಲ, ಅನ್ಯ ಸಾಹಿತ್ಯ ಶಿಕ್ಷಣ ಕ್ರಮ ಫಿಲ್ಮ್, ರೇಡಿಯೋ ಪ್ರಸಾರ ಇಂಥ ಮಾಧ್ಯಮಗಳಲ್ಲಿ ಕಂಡು ಬರುವ ನ್ಯೂನತೆಗಳೇನು, ಅವುಗಳನ್ನು ನಿವಾರಿಸುವುದು ಹೇಗೆ ಎಂಬುದನ್ನು ಕಂಡು ಹಿಡಿಯುವುದಕ್ಕಾಗಿ ಈ ಸಂಸ್ಥೆಯು ಏರ್ಪಟ್ಟಿತ್ತು. ಈ ಸಂಸ್ಥೆಯ ನೇತೃತ್ವವನ್ನು ವಹಿಸಿದ 'ಜಾನ್ ಬವರ್ಸ್'ರವರು ಕಾರಂತರಿಗೆ ವಯಸ್ಕರ ಸಲುವಾಗಿ ಪಠ್ಯಪುಸ್ತಕಗಳನ್ನು ರಚಿಸಿಕೊಡಲು ಹೇಳಿದರು. ಈ ಪಠ್ಯಪುಸ್ತಕಗಳಲ್ಲಿ ಯಾವ ಯಾವ ವಿಷಯಗಳಿರಬೇಕು ಎನ್ನುವುದರ ಕುರಿತು ಚರ್ಚೆ ನಡೆಯಿತು. ಇದರಲ್ಲಿ ಆರೋಗ್ಯದ ವಿಚಾರವನ್ನು ಕುರಿತು ಬರೆಯಲು ಸಲಹೆಯನ್ನು ಮಾಡಿದರು. ಆಗ ಕಾರಂತರು ಉದಾಹರಣೆಯ ಮೂಲಕ ತಮ್ಮ ಅನುಭವವನ್ನು ವಿವರಿಸುತ್ತಾರೆ.

> ನಾನು ಪುತ್ತೂರಿನಲ್ಲಿದ್ದಾಗ ಸುತ್ತಣ ಹಳ್ಳಿಗಳಲ್ಲಿ ಜ್ಞಾನ ಪ್ರಸಾರ ಕಾರ್ಯಕ್ರಮ ಹಮ್ಮಿಕೊಂಡಿದ್ದೆ. ಆಗ ಕಥೆಗಳನ್ನು ಕೆಲವೊಂದು ಕೈಗಾರಿಕೆ ಮತ್ತು ಕೃಷಿ ಮೊದಲಾದ ವಿಚಾರಗಳನ್ನು ಮಾಯಾಲಾಂದ್ರ ಫಲಕಗಳ ಮೂಲಕ ತೋರಿಸುವ ಕ್ರಮ ಪ್ರಯತ್ನಿಸಿದ್ದೆ. ಅಲ್ಲಿನ ಜನರು ಮಾಯಾಲಾಂದ್ರ ಪ್ರದರ್ಶನ ಇದೆ ಎಂದೊಡನೆಯ ಕೊಕ್ಕೊ ಹುಳುವೋ? ಎಂದು ವ್ಯಂಗವಾಗಿ ಹೇಳಿದ್ದನ್ನು ಕೇಳಿದ್ದೇನೆ. ಆದ್ದರಿಂದ ಸ್ವಾಮಿ ನೀವು ಹಳ್ಳಿಯವರನ್ನು ಕರೆದು ಆರೋಗ್ಯದ ವಿಷಯವಾಗಲೀ ಇನ್ನಾವು ದಾಗಲೀ ಉಪನ್ಯಾಸ ಮಾಡುವುದಕ್ಕೆ ಬಂದಿದ್ದೇರೆಂದು ತಿಳಿದರೆ ಅವರು ನಿಮ್ಮಿಂದ ದೂರ ನಿಲ್ಲುತ್ತಾರೆ. ಆ ರೀತಿ ಅನೇಕರು ಬಂದು ಅವರಿಗೆ ಉಪದೇಶ ಮಾಡಿದ್ದಾರೆ.[೨೨]

ಎಂದು ಹೇಳಿ ಅವರೇ ಸಲಹೆಯನ್ನು ನೀಡುತ್ತಾರೆ. ಮುಖ್ಯವಾಗಿ ವಯಸ್ಕರು ಓದನ್ನು ಕಲಿತ ಮೇಲೆ ಅವರಿಗೆ ವಿವಿಧ ವಿಷಯಗಳ ಪುಸ್ತಕಗಳನ್ನು ಓದಲು ಅವಕಾಶ ಕಲ್ಪಿಸಿದರೆ ತಮಗೆ ಆಸಕ್ತಿಯಿರುವ ವಿಷಯವನ್ನು ಅವರೇ ಓದುತ್ತಾರೆ. ಓದಿನ ಆರಂಭದಲ್ಲೇ ಆರೋಗ್ಯದ ವಿಷಯವನ್ನು ಕುರಿತು ಉಪನ್ಯಾಸ ನೀಡಲು ತೊಡಗಿದರೆ ನಮ್ಮ ಹತ್ತಿರ ಯಾರು ಸುಳಿಯುವುದಿಲ್ಲ ಎನ್ನುತ್ತಾರೆ. ಕಲಿಕೆಯ ಆರಂಭದಿಂದಲೂ ಅವರೊಂದಿಗೆ ನಡೆಸುವ ವಿಷಯವು ಆಕರ್ಷಕ ವಾಗಿರಬೇಕು. ಶಬ್ದಗಳನ್ನು ಮತ್ತು ಅವುಗಳಿಗೆ ಸಂಬಂಧಿಸಿದ ಚಿತ್ರಗಳನ್ನು ತೋರಿಸಬೇಕು.

ಅವರ ಕಣ್ಣಿನ ಮುಂದಿರುವ ಚಿತ್ರವನ್ನು ನೋಡಿದ ಕೂಡಲೆ ಅದರ ಶಬ್ದ ಯಾವುದೆಂದು ತಿಳಿಯುವಂತಾಗಬೇಕು. ಹೀಗೆ ಹಲವಾರು ಶಬ್ದಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಲು ಅವುಗಳ ಪುನಾರವರ್ತನೆಯು ಪಠ್ಯದಲ್ಲಿ ಮೇಲಿಂದ ಮೇಲೆ ಬರಬೇಕು ಎಂದು ಸೂಚಿಸಿದರು.

ಒಂದು ವಾರದಲ್ಲಿ ಕಾರಂತರು ವಯಸ್ಕರ ಪಠ್ಯಪುಸ್ತಕವನ್ನು ರಚಿಸಿದರು. ಅದರ ವಿಷಯ ನಿತ್ಯ ಜೀವನದಲ್ಲಿ ನಡೆಯುವ ಗಂಡ-ಹೆಂಡತಿಯರ ಸಂಸಾರಕ್ಕೆ ಸಂಬಂಧಪಟ್ಟಂತೆ ಬರೆದಿದ್ದರು. ಇದರಲ್ಲಿ ಹೆಂಡತಿಯ ಬಾಯಿ ದೊಡ್ಡದು ಗಂಡನ ಕೈ ಇನ್ನೂ ದೊಡ್ಡದು ಎನ್ನುವ ಕಥೆಯ ಬರವಣಿಗೆಯು ಆರಂಭದಲ್ಲಿ ಸಣ್ಣ ಶಬ್ದಗಳಿಂದ ಪಾಠ ಪಾಠಕ್ಕೂ ಬೆಳೆದು ಗಂಡ ಹೆಂಡಿರ ಜಗಳ ಇಬ್ಬರಿಗೂ ತಮ್ಮ ತಪ್ಪಿನ ಅರಿವಾಗುವ ತನಕ ಕಥೆಯು ಸಾಗುತ್ತಾ ಹೋಗುತ್ತದೆ. ಈ ಕಥೆಯ ಮೊದಲ ಪಾಠವನ್ನು ಕಲಿಸುವುದಕ್ಕೆ ಸ್ಥಳೀಯ ಉಪಾಧ್ಯಾಯರು ಒಂದು ಹಳ್ಳಿಗೆ ತೆರಳಿ ಈ ಪಾಠವನ್ನು ಕಲಿಸಲು ಹಿಂದಿರುಗಿದರು. ಈ ವಿಷಯವನ್ನು ಕುರಿತು ಪಾಠ ಮಾಡಲು ಅವರಿಗೆ ತುಂಬಾ ಕಷ್ಟವಾಯಿತು. ಏಕೆಂದರೆ ತರಗತಿಯಲ್ಲಿ ಪ್ರಾಯಸ್ಥ ಗಂಡಸರು ಹೆಂಗಸರು ಜತೆಗೆ ಕುಳಿತಿರುವಾಗ ಸಂಸಾರದ ಜಗಳವನ್ನು ಕುರಿತ ವಿಷಯ ಎತ್ತಿಕೊಂಡೊಡನೆಯೇ ಒಬ್ಬರು ಇನ್ನೊಬ್ಬರ ಮುಖ ನೋಡುತ್ತಾ ನಗಲು ಆರಂಭಿಸಿದರು. ಪಾಠವನ್ನು ಕಲಿಯುವವರಿಗೆ ಅವರ ನಿತ್ಯದ ಬದುಕಿಗೆ ಸಂಬಂಧಿಸಿದ ವಿಷಯವನ್ನು ಕುರಿತು ಭೋದನೆ ಮಾಡಿದರೆ ಹೆಚ್ಚು ಪ್ರಯೋಜನವಾಗುವದಿಲ್ಲವೆಂದು ಕಾರಂತರು 'ಜೋಗಿ ಕಂಡ ಊರು' ಎನ್ನುವ ಪಠ್ಯವನ್ನು ಬರೆದರು. ಈ ಪುಸ್ತಕದ ವಿಷಯವು ಒಂದು ಬಡ ಊರಿನ ಕಥೆಯಾಗಿದೆ. ಈ ಕಥೆಯಲ್ಲಿ ಒಂದು ಹಳ್ಳಿಗೆ ಒಬ್ಬ ಜೋಗಿ ಬರುತ್ತಾನೆ. ಅದು ತುಂಬ ಬಡತನದ ಹಳ್ಳಿಯಾಗಿತ್ತು. ಆ ಹಳ್ಳಿಯಲ್ಲಿ ಗಿಡ ಮರಗಳು ತುಂಬಾ ಕಡಿಮೆ ಪ್ರಮಾಣದಲ್ಲಿ ಇದ್ದವು. ಕೆರೆಯೆಲ್ಲಾ ನೀರಿಲ್ಲದೆ ಬತ್ತಿಹೋಗಿತ್ತು. ಹೀಗಿರುವಾಗ ಆ ಜೋಗಿಯು ಆ ಊರಿನ ಜನರ ಆತಿಥ್ಯವನ್ನು ನಿರಾಕರಿಸಿ

> ನಾನು ನಿಮ್ಮ ಊರಿಗೆ ಬರಬೇಕಾದರೆ ಇಲ್ಲಿ ಗಿಡ ಮರ ಕಾಣಿಸಬೇಕು. ಮರದ ನೆರಳೆ ಇಲ್ಲದ ವಾರು ನನಗೆ ಬೇಡ. ನಾನು ಮನೆಯಲ್ಲಿ ವಾಸಿಸುವವನಲ್ಲ. ಮರದ ನೆರಳಿನಲ್ಲಿರುವವ, ಎಂದು ಹೇಳಿ, ಹೊರಡುವಾಗ ಒಂದು ಹಿಡಿ ಬೀಜಗಳನ್ನು ಆ ಊರಿನ ಯಾಜಮಾನನಿಗೆ ಕೊಟ್ಟು ಹೋಗುತ್ತಾನೆ. ಬೀಜಗಳನ್ನು ವಾರಿನ ತುಂಬಾ ನೆಡುತ್ತಾರೆ, ಮುಂದೆ ಮಳೆ ಬಂದು ಕೆರೆ ತುಂಬುತ್ತದೆ. ಆ ಊರಿನ ಜನರ ಶ್ರಮ ದಿಂದ ಬೆಳೆ ಹೆಚ್ಚುತ್ತದೆ. ಊರಲ್ಲಿ ತುಂಬಾ ಮರಗಳು ಹುಟ್ಟಿಕೊಳ್ಳುತ್ತವೆ.[೨೨]

ಈ ಪಠ್ಯದಲ್ಲಿ ಒಂದು ಊರಿನ ಚಿತ್ರವನ್ನು ಕೊಟ್ಟು ಅದರ ಕೆಳಗೆ ಊರಿನ ಕಥೆಯನ್ನು ಹೇಳಲಾಗಿದೆ. ಪ್ರತಿಯೊಂದು ಪಾಠದಲ್ಲಿ ಚಿತ್ರವನ್ನು ಕೊಟ್ಟು ಸನ್ನಿವೇಶವನ್ನು ಸರಳವಾದ ಪದಗಳಿಂದ ವಿವರಿಸಲಾಗಿದೆ.

ಉದಾಹರಣೆಗೆ

ನಾನು ಕಥೆ ಹೇಳುವೆ
ನೀವು ಕೇಳಿ
ನಾನು ಈ ಊರ ಕಥೆ ಹೇಳುವೆ
ನಾನು ಹೇಳುವ ಕಥೆ ನೀವು ಕೇಳಿ
ಇದು ಬಡ ಊರ ಕಥೆ,
ಈ ಬಡ ಊರ ಕಥೆ ನೀವು ಕೇಳಿ
ಈ ಕತೆ ನಾನು ಹೇಳುವೆ
ನೀವು ಈ ಕಥೆ ಕೇಳಿ
ಆ ಊರಲ್ಲಿ ಬಡ ಜನ ಬಹಳ
ಇದು ಊರು
ಈ ಊರಲ್ಲಿ ಬಡ ಜನ ಬಹಳ
ಬಡ ಜನರಲ್ಲಿ ಹಣ ಕಡಿಮೆ
ಹಣ ಕಡಿಮೆ ಇರಲು ಬಡತನ
ಈ ಊರ ಜನರಲ್ಲಿ ಬಹಳ ಕಡಿಮೆ ಹಣ
ಊರಲ್ಲಿ ಬಹಳ ಬಡ ಜನ
ಬಡ ಜನರ ಕಥೆ ಇದು.

ಕೊನೆಯ ಪಾಠ ಒಂದು ಬಡ ಊರ ಕಥೆ ಹೇಳಿದೆ.
ಅಲ್ಲಿ ನೀರು ಇರದ ಕೆರೆ, ಹಣ ಇರದ ಜನ
ಒಂದು ಬಿಸಿಲ ದಿನ ಜೋಗಿ ಆ ಊರಿಗೆ  ಬಂದ
ನೀರು ಇರದ ಕೆರೆಯ ಕಂಡ
ಕಂಡು ಚಿಂತೆಯಿಂದ ಊರು ಬಿಟ್ಟು ಹೋದ
ಹೋಗಿ ಒಂದು ಮರದ ಕೆಳಗೆ ಕುಳಿತ
ಊರ ಗೌಡ ಜೋಗಿಯ ಕಂಡು
ನಮ್ಮ ಊರಿಗೆ ಬನ್ನಿ ಎಂದ
ನೆರಳು ನೀರು ಇರದ ಊರಿಗೆ ಬಾರೆ ಎಂದ ಜೋಗಿ
ಗೌಡ ಕಾಪಾಡಿ ಎಂದು ಜೋಗಿಯ ಬೇಡಿದ

ಅದಕೆ ಜೋಗಿ ಬೀಜ ಮಣ್ಣು ಕೊಟ್ಟು
ಬೀಜ ನಡು ಊರ ಕೆರೆಯ ಅಗೆಸು ಎಂದ
ಕೊಟ್ಟ ಮಣ್ಣು ಬೀಜ ಹಿಡಿದು ಗೌಡ ಊರಿಗೆ ಬಂದ
(ಸ್ಮೃತಿ ಪಟಲದಿಂದ, ಭಾಗ–೧ ಪು.೪೫೨)

ಇದರ ಮುಂದುವರಿದ ಭಾಗವು ಎರಡನೇಯ ಪುಸ್ತಕದಲ್ಲಿ ಜೋಗಿ 'ಒಲಿದ ಊರು' ಎಂಬ ಪುಸ್ತಕದಲ್ಲಿ ಕತೆ ಕೊನೆಗೊಳ್ಳುತ್ತದೆ. ಈ ಪುಸ್ತಕವು ಸಾಮಾನ್ಯ ಓದುಗರಿಗೂ ಅರ್ಥವಾಗುವ ಹಾಗೆ ಸರಳ ನಿರೂಪಣೆಯೊಂದಿಗೆ ರಚಿಸಿದ್ದಾರೆ. ಈ ಪಠ್ಯದಲ್ಲಿ ಎಲ್ಲಿಯೂ ಕೂಡ ಕ್ಲಿಷ್ಟವಾದಂತಹ ಪದಗಳನ್ನು ಬಳಸಿಲ್ಲ. ಓದುಗರಿಗೆ ಪದಗಳು ಮತ್ತೆ ಮತ್ತೆ ಪುನಾರವರ್ತನೆ ಯಾಗುವಂತೆ ನೋಡಿಕೊಂಡಿದ್ದಾರೆ. ಏಕೆಂದರೆ ಇದರಿಂದ ಓದುಗರಲ್ಲಿ ಶಬ್ದಗಳನ್ನು ನೆನಪಿಟ್ಟು ಕೊಳ್ಳಲು ಸುಲಭವಾಗಿತ್ತು. ಹೀಗೆ ಇವರು ಬರೆಯುವಂಥ ಪಠ್ಯಗಳನ್ನು ಉಪಾಧ್ಯಾಯರು ಅಲ್ಲಿನ ಗ್ರಾಮಸ್ಥರಿಗೆ ಕಲಿಸುವುದಕ್ಕೆ ಒಯ್ಯುತ್ತಿದ್ದರು. ಉಪಾಧ್ಯಾಯರು ಪಾಠ ಮಾಡುವಾಗ ತಮಗೆ ಎದುರಾಗುವ ಸಮಸ್ಯೆಗಳನ್ನು ಕಾರಂತರಿಗೆ ತಿಳಿಸಿದಾಗ ಪಠ್ಯಪುಸ್ತಕದಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿ ಪುನಃ ಬರೆಯುತ್ತಿದ್ದರು. ಅವರ ಮುಖ್ಯ ಉದ್ದೇಶ ನಾವು ಹೇಳಿ ಕೊಡುವ ವಿಷಯಗಳು ಕಲಿಯುವವರಲ್ಲಿ ಆಸಕ್ತಿಯನ್ನುಂಟು ಮಾಡಿ ಓದುವುದಕ್ಕೆ ಮತ್ತು ಬರೆಯುವುದಕ್ಕೆ ತಾವೇ ಮುಂದಾಗಬೇಕು ಎಂದು ವಿದ್ಯಾರ್ಥಿಗಳಿಗೆ ಮನ ಮುಟ್ಟಲು ತಮ್ಮ ಶಕ್ತಿ ಮೀರಿ ಪ್ರಯತ್ನಿಸುತ್ತಿದ್ದರು. ಮಕ್ಕಳ ಪಠ್ಯಪುಸ್ತಕಗಳನ್ನು ರಚಿಸುವವರು ಪ್ರಾದೇಶಿಕ ಭಾಷೆಯನ್ನು ಗುರುತಿಸದೆ ಸಾಮಾನ್ಯವಾಗಿ ಒಂದೇ ರೀತಿಯ ಪದಗಳನ್ನು ಪಠ್ಯಗಳಲ್ಲಿ ಸೇರಿಸುತ್ತಾರೆ. ಇದರಿಂದ ವಿವಿಧ ಪ್ರಾದೇಶಿಕ ವಿದ್ಯಾರ್ಥಿಗಳಿಗೆ ಪದಗಳ ಅರ್ಥವೇ ತಿಳಿಯುವು ದಿಲ್ಲ. ಆದರೆ ಕಾರಂತರು ಇಂತಹ ಕ್ರಮವನ್ನು ಖಂಡಿಸುತ್ತಾರೆ

> "ಅವರಿಗೆ ಒಂದು ಶಬ್ದದ ಪರಿಚಯವಿಲ್ಲ ಎಂದ ಮಾತ್ರಕ್ಕೆ ಅವರು ದಡ್ಡರು ಎಂದು ರೇಗಿ ಪ್ರಯೋಜನವಿಲ್ಲ. ಅವರ ಇತಿಮಿತಿಗಳನ್ನು ತಿಳಿದು ನಾವು ಪುಸ್ತಕ ಬರೆಯಬೇಕಾಗುತ್ತದೆ"[೨೪] ಎನ್ನುತ್ತಾರೆ.

ಕಾರಂತರು ಒಬ್ಬ ಮಕ್ಕಳ ಶಿಕ್ಷಣದ ತಜ್ಞನಷ್ಟೆ ಆಳವಾಗಿ ಚಿಂತಿಸ ಬಲ್ಲವರಾಗಿದ್ದರು. ವಯಸ್ಕರ ಸಲುವಾಗ ಜೋಗಿ ಕಂಡ ಊರು, ಜೋಗಿ ಒಲಿದ ಊರು, ಅಖಿಲ ಭಕ್ತಿ, ಹುಟ್ಟು ಸಾವು ಒಟ್ಟು ಒಟ್ಟು, ಇತರರೂ ಸರಿಯಿರಬಹುದು, ಮೊದಲಾದ ಪುಸ್ತಕಗಳನ್ನು ರಚಿಸಿದರು. ಈ ಪುಸ್ತಕಗಳಲ್ಲಿ ವಿಷಯಗಳಿಗೆ ಸಂಬಂಧಿಸಿದಂತೆ ಬೇಕಾಗುವ ಹಲವಾರು ಚಿತ್ರಗಳನ್ನು ಕೆ.ಕೆ. ಹೆಬ್ಬಾರವರು ಬರೆದು ಕೊಟ್ಟರು. ಇಂದು ಪಠ್ಯಗಳನ್ನು ರಚಿಸುವವರು ಅದರ ಇತಿ ಮಿತಿಗಳನ್ನು

ತಿಳಿಯದೆ ನಾಲ್ಕು ಗೋಡೆಗಳ ಮಧ್ಯ ಪಠ್ಯಗಳನ್ನು ರಚಿಸುತ್ತಾರೆ. ವಿದ್ಯಾರ್ಥಿಗಳಿಗೆ ರಚಿಸುವ ಪಠ್ಯಗಳು ವಿದ್ಯಾರ್ಥಿಗಳ ಆಸಕ್ತಿಯನ್ನು ಗಮನಿಸದೆ ತಯಾರಾಗುತ್ತವೆ. ಆದರೆ ಕಾರಂತರು ತಮ್ಮ ಪಠ್ಯ ಪುಸ್ತಕದಲ್ಲಿ ಹಾಕುವ ಚಿತ್ರಗಳನ್ನು ಸಹ ಅವು ಜನರಿಗೆ ಇಷ್ಟವಾಗುತ್ತವೆಯೋ ಇಲ್ಲವೋ ಎಂದು ಪ್ರಯೋಗ ಮಾಡಿದ ನಂತರ ಪಠ್ಯಗಳಲ್ಲಿ ಹಾಕುತ್ತಿದ್ದರು.

> ನನ್ನ ಪುಸ್ತಕದ ಒಂದು ಪಾಠದಲ್ಲಿ ಇದು ಊರು, ಈ ವಾರಲ್ಲಿ ಬಡ ಜನ, ಬಡ ಊರು, ಬಡ ಜನ, ಎಂಬ ವಾಕ್ಯಗಳು ಬಂದಿದ್ದವು. ಅದಕ್ಕೆ ತಕ್ಕಂತೆ ಊರಿನ 'ಬಡ ಜನರ' ಚಿತ್ರವನ್ನು ಹೆಬ್ಬಾರರು ಬರೆದು ಕೊಟ್ಟಿದ್ದರು. ಆ ಚಿತ್ರ ನೋಡಿದ ಹಳ್ಳಿಯ ಒಬ್ಬ ವಯಸ್ಕ "ಇವನು ಹ್ಯಾಗರೀ ಬಡವ! ಅವನ ಮೈ, ಕೈ ಅಷ್ಟು ಗಟ್ಟಿ ಮುಟ್ಟಾಗಿದೆ ಎಂದು ಕೇಳಿದನಂತೆ. ಹೆಬ್ಬಾರರಲ್ಲಿಗೆ ದೂರು ಬಂದಿತು. ಆ ಬಡ ಜನಕ್ಕೆ ಬಡಕಲು ಮೈಯನ್ನೇ ಕೊಟ್ಟು ಅಲ್ಲಿನ ಜನರನ್ನು ಚಿತ್ರಿಸಬೇಕಾಯಿತು."[೨೫]

ಎಂದು ತಮ್ಮ ಅನುಭವವನ್ನು ಹೇಳುತ್ತಾರೆ. ಪಾಠಗಳಲ್ಲಿರುವ ವಿಷಯ, ಶಬ್ದ, ಚಿತ್ರಗಳು, ಓದುಗರಿಗೆ ಇಷ್ಟವಾಗುವಂತೆ ಇರಬೇಕೆನ್ನುವುದು ಕಾರಂತರ ಅಭಿಪ್ರಾಯವಾಗಿತ್ತು. ಈ ಪದ್ಧತಿಯು ಇಂದಿಗೂ ಮಾದರಿಯಾಗಿದೆ. ಶಿಕ್ಷಣದ ರೂಪದಲ್ಲಿ ಯಾವುದೇ ಸಾರ್ವತ್ರಿಕವಾಗಿ ಹೇರುವ ಬದಲು ಮಾದರಿ ಪ್ರಯೋಗಗಳನ್ನು ಮಾಡಿ ಅದರ ಇತಿಮಿತಿಗಳನ್ನು ತಿಳಿದುಕೊಳ್ಳುವುದು ಮುಖ್ಯವಾದದು ಎಂದೂ ನಮಗೆ ತಿಳಿಯುತ್ತದೆ. ಕಾರಂತರು ವಯಸ್ಕರಿಗಾಗಿ ಬರೆದ ಪುಸ್ತಕಗಳನ್ನು ಪ್ರತಿಯೊಂದು ಹಂತದಲ್ಲಿಯೂ ಯುನೇಸ್ಕೊ ಶಿಬಿರದ ಊಪಾಧ್ಯಾಯರು ತಮ್ಮ ವಿದ್ಯಾರ್ಥಿಗಳಿಗೆ ತೋರಿಸುತ್ತಿದ್ದರು. ಅವರಿಗೆ ಕ್ಲಿಷ್ಟವಾಗುವ ವಿಷಯಗಳನ್ನು ಟಿಪ್ಪಣಿ ಮಾಡಿಕೊಳ್ಳುತ್ತಿದ್ದರು ಇವರ ಜತೆಗೆ ಒಬ್ಬ ಮನಶಾಸ್ತ್ರಜ್ಞರನ್ನು ಕರೆದುಕೊಂಡು ಹೋಗುತ್ತಿದ್ದರು. ವಿದ್ಯಾರ್ಥಿಗಳಿಗೆ ಅರ್ಥವಾಗದ ವಿಷಯಗಳು ಚಿತ್ರಗಳು ಎದುರಾದಾಗ ಅವರ ಮುಖಭಾವವನ್ನು ತಿಳಿಯಲು ಪ್ರಯತ್ನಿಸುತ್ತಿದ್ದರು ಮತ್ತು ಅದರ ಕುರಿತು ಸೂಕ್ಷ್ಮವಾಗಿ ಪರಿಶೀಲಿಸಿ ಚರ್ಚಿಸುತ್ತಿದ್ದರು. ಹೀಗೆ ಬಂದ ಪ್ರತಿಕ್ರಿಯೆಗಳಿಂದ ಪಠ್ಯಗಳಲ್ಲಿರುವ ದೋಷಗಳನ್ನು ತಿದ್ದಿಕೊಳ್ಳುತ್ತಿದ್ದರು. ಕಾರಂತರು ವಿದ್ಯಾರ್ಥಿಗಳ ಹಿನ್ನೆಲೆ ಎಂಥದು ಅವರ ಇತಿಮಿತಿಗಳೇನು ಇವನ್ನು ತಿಳಿದೇ ಬರೆಯುತ್ತಿದ್ದರು. ಅವರಿಗಾಗಿ ಬರೆಯುವ ಭಾಷೆ ಸರಳವಾಗಿರಬೇಕು, ತಿಳಿಸುವ ವಿಷಯ ಸಲಹೆಯನ್ನು ನೀಡುತ್ತಾರೆ.

ಮೈಸೂರಿನ ಯಲವಾಲದಲ್ಲಿ ನಡೆದ ಯುನೆಸ್ಕೋ ಶಿಬಿರವು ಸುಮಾರು ಎರಡು ವರ್ಷಗಳ ನಡೆಯಿತು. ಈ ಶಿಬಿರ ಮುಗಿಯುವುದರೊಳಗೆ ಕೆಲ ತಜ್ಞರು ಈ ಶಿಬಿರದಲ್ಲಿ ಕಲಿತ ವಿದ್ಯಾರ್ಥಿಗಳ ಸಾಮಾರ್ಥ್ಯವನ್ನು ಅಳೆಯಲು ಒಂದು ಪರೀಕ್ಷೆ ಕೈಗೊಂಡರು. ಈ ಶಿಬಿರದಲ್ಲಿ ಕಲಿತ ವಿಷಯಗಳು ಮುಂದೆ ಅವರ ಜೀವನಕ್ಕೆ ಯಾವ ರೀತಿ ಉಪಯೋಗವಾಯಿತು,

ಮುಂದೆ ಅವರು ಯಾವ ಯಾವ ವಿಷಯಗಳನ್ನು ಓದಿದರು, ಯಾವ ವಿಷಯದ ಮೇಲೆ ವಿದ್ಯಾರ್ಥಿಗಳಿಗೆ ಆಸಕ್ತಿಯಿದೆ ಎನ್ನುವ ಪ್ರಶ್ನೆಗಳನ್ನುಟ್ಟುಕೊಂಡು ಸುಮಾರು ೨೪೦ ವಿದ್ಯಾರ್ಥಿಗಳನ್ನು ಪರೀಕ್ಷಿಸಿ, ಒಂದು ವರದಿಯನ್ನು ಮಾಡಿದರು. ಇದರಿಂದ ಅವರಿಗೆ ತಿಳಿದಿದ್ದು ಏನೆಂದರೆ ವಿದ್ಯಾರ್ಥಿಗಳು ಕಲಿತ ವಿಷಯವನ್ನು ಮುಂದೆ ಉಪಯೋಗಿಸಿಕೊಳ್ಳಲು ಬರದೆ ಬೇಗನೆ ಮರೆಯುತ್ತಿದ್ದರು. ೨೪೦ ಮಂದಿ ವಿದ್ಯಾರ್ಥಿಗಳಲ್ಲಿ ತಮ್ಮ ಕಲಿಕೆಯನ್ನು ಮುಗಿಸಿದ ಮೇಲೆ ಒಬ್ಬರು ಕೂಡ ಒಂದೇ ಒಂದು ಪುಸ್ತಕವನ್ನು ಓದಿರಲಿಲ್ಲ ಮತ್ತೆ ಅನಕ್ಷರಸ್ಥರಂತೆಯೇ ಇದ್ದರು. ನಾವು ಕಲಿಸುವ ವಿಷಯಗಳು ಅವರು ಮುಂದಿನ ಜೀವನಕ್ಕೆ ಉಪಯೋಗಕ್ಕೆ ಬರುವಂತಿರಬೇಕು. ಇಲ್ಲವೆ ಹೋದರೆ ಏನು ಕಲಿಸಿದರು ಅದು ವ್ಯರ್ಥ ಎಂಬ ವಿಷಯವನ್ನು ಈ ಮೇಲಿನ ಉದಾಹರಣೆಯಿಂದ ನಮಗೆ ಗೊತ್ತಾಗುತ್ತದೆ. ಸಾಮಾನ್ಯವಾಗಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಪಡೆಯುವ ಹಾಲವಾರು ವಿದ್ಯಾರ್ಥಿಗಳು ಐದು ವರ್ಷಗಳನ್ನು ಕಲಿತ ಮೇಲೆ ಮುಂದೆ ವಿದ್ಯಾಭ್ಯಾಸನವನ್ನು ಮುಂದುವರಿಸದಿದ್ದರೆ ಅವರು ಕೂಡ ಅನಕ್ಷರಸ್ಥರಂತೆ ಇರುವುದನ್ನು ನಾವು ಇಂದಿಗೂ ಕಾಣಬಹುದು. ಮಕ್ಕಳ ವಿದ್ಯಾಭ್ಯಾಸಕ್ಕೆ ಸಂಬಂಧಿಸಿದಂತೆ ಮದ್ರಾಸಿನ 'ಸದರ್ನ್ ಲ್ಯಾಂಗ್ವೆಜಸ್ ಬುಕ್ ಟ್ರಸ್ಟ್' ಸಂಸ್ಥೆಯವರು ಪಠ್ಯ ಪುಸ್ತಕಗಳನ್ನು ಬರೆಯಿಸುತ್ತಿದ್ದರು. ೧೯೬೪ರಲ್ಲಿ ಈ ಸಂಸ್ಥೆಯವರು ಒಂದು ಶಿಬಿರವನ್ನು ನಡೆಸಿದರು. ಆ ಶಿಬಿರದಲ್ಲಿ ಮಕ್ಕಳ ಪುಸ್ತಕ ಬರೆಯುವರು ಅದನ್ನು ಚಿತ್ರಿಸುವವರು ಪ್ರಕಾಶಕರು ಪುಸ್ತಕ ಬರೆಯುವವರು ಎಲ್ಲರೂ ಭಾಗವಹಿಸಿದ್ದರು. ಇಲ್ಲಿ ಯಾರಿಗೂ ಮಕ್ಕಳ ಮನೋಧರ್ಮವನ್ನು ಸರಿಯಾಗಿ ತಿಳಿದಿರಲಿಲ್ಲ, ಕಾರಂತರು ಈ ಶಿಬಿರದಲ್ಲಾದ ಅನುಭವವನ್ನು ಹೀಗೆ ಹೇಳುತ್ತಾರೆ

> ಅಲ್ಲಿ ಸೇರಿರುವರೆಲ್ಲರು ಮಕ್ಕಳ ವಯಸ್ಸು ಮನೋಧರ್ಮ ಅವರಿಗೆ ಸಂಬಂಧಿಸಿದ ಭಾಷೆ, ಇತ್ಯಾದಿ ವಿಚಾರಗಳಲ್ಲಿ ಇರುವ ತೊಂದರೆಗಳೆನೆಂದು ಪ್ರಯೋಗ ನಡೆಯಿಸಿ ತಿಳಿದವರಲ್ಲ. ಅಲ್ಲಿಗೆ ಬಂದಿದ್ದ ಕೆಲವೇ ಚಿತ್ರಕಾರರು ತಮಗೆ ತಾವೇ ನಿರ್ಣಾಯಕ ರೆಂಬಂತೆ ಮಾತನಾಡುತ್ತಿದ್ದುದನ್ನು ಕಂಡೆ.[೨೬]

ಇದರಿಂದ ಮಕ್ಕಳ ಮೇಲೆ ಯಾವ ರೀತಿಯ ಶಿಕ್ಷಣ ಕ್ರಮವನ್ನು ಹೇರುವರೆಂದು ತಿಳಿಯುತ್ತದೆ. ದೊಡ್ಡವರ ಭಾವನೆಗಳು, ಅಭಿಪ್ರಾಯಗಳನ್ನು ಮಕ್ಕಳ ಮೇಲೆ ಶಿಕ್ಷಣ ಎಂಬ ಹೆಸರಿನಿಂದ ಹೇರಲಾಗುತ್ತಿದೆ. ಮಕ್ಕಳಿಗೆ ಸರಿಯಾಗಿ ಅರ್ಥವಾಗದೆ ಇದ್ದರೆ ಅವರನ್ನು ದಡ್ಡರೆಂದು ಅವಮಾನಿಸುವುದು ಕಂಡುಬರುತ್ತದೆ. ಇದರಿಂದ ವಿದ್ಯಾರ್ಥಿಗಳಲ್ಲಿ ಮಾನಸಿಕವಾಗಿ ಮತ್ತು ದೈಹಿಕವಾಗಿ ಕೆಟ್ಟ ಪರಿಣಾಮಗಳು ಬೀರುತ್ತವೆ.

ಕಾರಂತರಿಗೆ ಒಂದು ಸಲ ಯುನೆಸ್ಕೋ ಸಂಸ್ಥೆಯವರು ಟೆಹರಾನಿನಲ್ಲಿ ವಯಸ್ಕರ ವಿದ್ಯಾಭ್ಯಾಸದ ಗೋಷ್ಠಿಗೆ ಈ ದೇಶದ ಪ್ರತಿನಿಧಿಯಾಗಿ ಹೋಗುವ ಸಂದರ್ಭ ಒದಗಿ

ಬಂದಿತ್ತು. ೧೯೬೭ ನವೆಂಬರ್ ೧೧ರಿಂದ ಆರಂಭವಾಗಿ ನಾಲ್ಕು ದಿನಗಳ ಕಾಲ ನಡೆಯುವುದಿತ್ತು. ಈ ಸಭೆಗೆ ಅಫಘಾನಿಸ್ತಾನ, ನೆಪಾಳ, ಭಾರತ, ಇರಾನ್, ಪಾಕಿಸ್ತಾನ್ ಮತ್ತು ಬರ್ಮಾ ದೇಶಗಳಿಂದ ಇಬ್ಬಿಬ್ಬರು ಪ್ರತಿನಿಧಿಗಳು ಭಾಗವಹಿಸುವವರಿದ್ದರು. ಕಾರಂತರು ಈ ಗೋಷ್ಠಿಯ ಪ್ರಥಮ ದಿನ ವಿವಿಧ ಕಾರಣಾಂತರಗಳಿಂದ ಹಾಜರಾಗಲಿಲ್ಲ, ಉಳಿದ ಮೂರು ದಿನಗಳ ಕಾಲ ಗೋಷ್ಠಿಯಲ್ಲಿ ಭಾಗವಹಿಸಿದ್ದರು. ಅಫಘಾನಿಸ್ತಾನ್ ಪ್ರತಿನಿಧಿಗಳನ್ನು ಬಿಟ್ಟು ಉಳಿದ ಎಲ್ಲರೂ ಭಾಗವಹಿಸಿದ್ದರು. ಇವರಲ್ಲಿ ನಿಜವಾಗಿ ಶಿಕ್ಷಣ ಕುರಿತು ಶ್ರಮಿಸಿದವರಲ್ಲಿ ಇರಾನಿನನ ಪ್ರತಿನಿಧಿಗಳು ಪ್ರಮುಖರಾಗಿದ್ದರು.

ಈ ಸಭೆಯಲ್ಲಿ ಶಿಕ್ಷಣ ಕುರಿತ ವಿಭಿನ್ನ ಚಿಂತನೆಗಳನ್ನು ಮಾಡಲು ಇದು ಒಳ್ಳೆಯ ವೇದಿಕೆಯಾಗಿತ್ತು. ಮೈಸೂರಿನ ಯಲವಾಳದಲ್ಲಿ ನಡೆದ ಶಿಬಿರವು ಕೇವಲ ಅವರಿಗೆ ಶಿಕ್ಷಣವನ್ನಷ್ಟೇ ಒದಗಿಸುವುದಾಗಿತ್ತು. ಕೊನೆಯಲ್ಲಿ ನಡೆದ ಸಮೀಕ್ಷೆಯಿಂದ ಕಲಿತ ವಿದ್ಯಾರ್ಥಿಗಳು ಶಾಲೆಯನ್ನು ಬಿಟ್ಟ ನಂತರ ಬೇಗ ಮರೆತು ಹೋಗುತ್ತಾರೆ ಎಂದು ತಿಳಿದಿದ್ದರಿಂದ ಈ ಸಭೆಯಲ್ಲಿ ವಯಸ್ಕ ರಾದವರು ಓದು ಬರದ ಕಲಿತ ಮೇಲೆ ಅವರಿಗೆ ನಿರಂತರವಾಗಿ ಓದುವ ಅಭ್ಯಾಸ ಉಳಿಯುವುದಕ್ಕೆ ಮತ್ತು ಅವರನ್ನು ಆಕರ್ಷಿಸುವ ಪುಸ್ತಕಗಳನ್ನು ವಯಸ್ಕರಿಗೆ ಒದಗಿಸಬೇಕೆನ್ನುವು ದಾಗಿತ್ತು. ಸಾಮಾನ್ಯ ಜನರಿಗೆ ಅನುಕೂಲವಾಗುವಂತೆ ವಿವಿಧ ರೀತಿಯ ವೃತ್ತಿಗಳನ್ನು, ಕೈಗಾರಿಕೆಗಳನ್ನು ಕುರಿತ ಗ್ರಂಥಗಳನ್ನು ಒದಗಿಸುವ ಕುರಿತು ಚರ್ಚಿಸಲಾಯಿತು ಮತ್ತು ಆಯಾ ದೇಶದ ಜನರು ಮೊದಲು ತಮ್ಮ ನಾಡಿನ ಸಂಸ್ಕೃತಿಯನ್ನು ತಿಳಿಯಲು ಪುಸ್ತಕಗಳನ್ನು ಆಕರ್ಷಕ ಚಿತ್ರಗಳಿಂದ ರಚಿಸುವುದು. ನಂತರ ಬೇರೆ ಬೇರೆ ದೇಶಗಳ ಕುರಿತ ಗ್ರಂಥಗಳನ್ನು ಪ್ರಕಟಿಸುವುದು. ಈ ಪುಸ್ತಕಗಳನ್ನು ಯಾವ ರೀತಿಯಲ್ಲಿ ಬರೆಯುವುದು ಮತ್ತು ಯಾವ ಯಾವ ವಿಷಯಗಳನ್ನು ತಿಳಿಸಬೇಕು ಹೀಗೆ ಹಲವಾರು ವಿಷಯಗಳ ಕುರಿತು ಈ ಸಭೆಯಲ್ಲಿ ಚರ್ಚಿಸಲಾಯಿತು. ಇಲ್ಲಿನ ಹಲವಾರು ವಿಷಯಗಳು ಪ್ರಯೋಜನಕಾರಿಯಾಗಿ ಕಂಡರೂ ಇವು ಕಾರ್ಯ ರೂಪಕ್ಕೆ ಬರುವುದು ಬಹಳ ಕಷ್ಟ ಸಾಧ್ಯವಾಗಿತ್ತು.

ಕಾರಂತರು ದೇಶ ವಿದೇಶಗಳಲ್ಲಿ ಶಿಕ್ಷಣಕ್ಕೆ ಸಂಬಂಧಪಟ್ಟ ಸಭೆಗಳಲ್ಲಿ ಭಾಗವಹಿಸಿ ಹಲವಾರು ವಿಚಾರಗಳನ್ನು ತಿಳಿದುಕೊಂಡರು. ಮುಖ್ಯವಾಗಿ ಮಕ್ಕಳ ಶಿಕ್ಷಣವಾಗಲಿ, ವಯಸ್ಕರ ವಿದ್ಯಾಭ್ಯಾಸವಾಗಲೀ ಅವರ ಶಿಕ್ಷಣ ಮುಗಿದ ನಂತರ ಓದುವುದು ಮುಂದುವರಿಯುತ್ತಲೇ ಇರಬೇಕೆನ್ನುವುದು ಕಾರಂತರ ಆಶಯವಾಗಿತ್ತು. ಓದು ಬರಹಗಳನ್ನು ಕಲಿತ ವ್ಯಕ್ತಿ ತನ್ನ ಆಸಕ್ತಿ ಅಭಿರುಚಿಗಳನ್ನು ಬೆಳೆಸಿಕೊಳ್ಳಬೇಕಾದರೆ ಮಕ್ಕಳಿಗಾಗಿಯೇ ಪ್ರತಿ ತಿಂಗಳು ಪುಸ್ತಕಗಳು ಪ್ರಕಟಗೊಳ್ಳಬೇಕು. ಇಲ್ಲದೆ ಹೋದರೆ ಅಕ್ಷರಸ್ಥರು ಓದಿ ಕಲಿತಿರುವುದನ್ನೇಲ್ಲಾ ಮರೆತು ಹೋಗಿ ಮತ್ತೆ ಅನಕ್ಷರಸ್ಥರಾಗಿಯೆ ಉಳಿಯುತ್ತಾರೆ ಎಂದು ಎಚ್ಚರಿಸುತ್ತಾರೆ.

ಪಠ್ಯಪುಸ್ತಕವನ್ನು ರಚಿಸಿ ಪ್ರಕಟಿಸಲು ಆಗಿನ ಕಾಲದಲ್ಲಿ ಹಲವಾರು ವಿವಿಧ ಸಮಸ್ಯೆಗಳಿದ್ದವು. ಪಠ್ಯಪುಸ್ತಕಗಳನ್ನು ಮಂಜೂರು ಮಾಡುವ ಸರ್ಕಾರಿ ಸಮಿತಿಗಳಿದ್ದವು. ಈ ಸಮಿತಿಯಲ್ಲಿ ಸರಿಯಾದ ಶಿಕ್ಷಣ ಜ್ಞಾನವಿಲ್ಲದವರೂ, ಸಮಸ್ಯೆಗಳನ್ನು ಸರಿಯಾಗಿ ಅರಿಯದವರು ಸೇರಿರುತ್ತಿದ್ದರು. ಮಂಜೂರಾದ ಕೆಲವೇ ಪಠ್ಯಪುಸ್ತಕಗಳಲ್ಲಿ ಖಾಸಗಿ ಶಾಲೆಯವು ತಮಗೆ ಇಷ್ಟವಾದ ಪುಸ್ತಕವನ್ನು ಆಯ್ಕೆ ಮಾಡುತ್ತಿದ್ದರು. ಇಂತಹ ಪಠ್ಯಪುಸ್ತಕಗಳನ್ನು ಮಕ್ಕಳ ಮೇಲೆ ಹೇರುತ್ತಿದ್ದರು. ಇಂತಹ ಪಠ್ಯಪುಸ್ತಕಗಳಲ್ಲಿ ಹಲವಾರು ದೋಷಗಳು ತುಂಬಿರುತ್ತಿದ್ದವು. ಇವನ್ನೆಲ್ಲಾ ಗಮನಿಸಿದ ಶಿವರಾಮ ಕಾರಂತರು ೧೯೩೪ ರಿಂದ ೧೯೪೪ರ ಅವಧಿಯಲ್ಲಿ ಪ್ರಾಥಮಿಕ ಪಠ್ಯಪುಸ್ತಕಗಳನ್ನು ಬರೆಯಲು ಪ್ರಾರಂಭಿಸಿದರು. ಹೀಗೆ ಪಠ್ಯವನ್ನು ಬರೆಯಲು ಆರಂಭಿಸಿದಾಗ ಅವರು ಹೆಚ್ಚಾಗಿ ಮಕ್ಕಳ ಭಾಷಾ ಪಠ್ಯ ಪುಸ್ತಕದ ಕಡೆಗೆ ಗಮನ ಹರಿಸಿದರು. ಮುಖ್ಯವಾಗಿ ಮಕ್ಕಳ ಭಾಷೆಗೆ ಸಂಬಂಧಪಟ್ಟ ಪಠ್ಯಪುಸ್ತಕಗಳ ಭಾಷೆ ಮತ್ತು ವಿಷಯಗಳು ಆಯಾ ಮಕ್ಕಳ ವಯಸ್ಸಿನ ದೃಷ್ಟಿಯಿಂದ ಆಕರ್ಷಕವಾಗಿ ಕಾಣಿಸಬೇಕಾದುದು ಮೊದಲನೆಯ ಸಂಗತಿ ಎನ್ನುತ್ತಾರೆ. ಕಾರಂತರ ಶಿಕ್ಷಣ ವಿಚಾರಗಳಿಗೂ ಮತ್ತು ಅಂದಿನ ಸರಕಾರಿ ಪಠ್ಯಕ್ರಮಕ್ಕೂ ಬಹಳಷ್ಟು ವ್ಯತ್ಯಾಸವಿತ್ತು. ಅವರ ವೈಚಾರಿಕತೆ ಮತ್ತು ಪ್ರಯೋಗಗಳು ಶಾಲೆಯಲ್ಲಿ ಕಲಿಯುತ್ತಿದ್ದ ಮಕ್ಕಳ ಪಠ್ಯಕ್ರಮಕ್ಕೂ ಸರಿ ಹೊಂದುತ್ತಿರಲಿಲ್ಲ. ಆಗ ಕಾರಂತರು ಅದನ್ನೇ ಹೊಸದಾಗಿ ಕಲಿಸಬೇಕು ಎಂಬ ಪ್ರಯತ್ನ ಮಾಡಿದರು. ಚರಿತ್ರೆ, ಭೂಗೋಳ ವಿಷಯಗಳನ್ನು ಮಕ್ಕಳಿಗೆ ಕಲಿಸುವ ಪದ್ಧತಿ ಇತ್ತು. ಇದರಿಂದ ಮಕ್ಕಳಲ್ಲಿ ಆ ವಿಷಯಗಳ ಇನ್ನಷ್ಟು ಆಸಕ್ತಿಕರವಾಗಿ ಬೋಧಿಸಲು ಚರ್ಚಿಸಿದರು. ಚರಿತ್ರೆ ಮತ್ತು ಭೂಗೋಳದಂತ ವಿಷಯಗಳನ್ನು ಕೇವಲ ವರ್ಷ ತಿಂಗಳು, ಅಂತಿ ಅಂಶಗಳು ಹೇಳುವುದಕ್ಕಿಂತ ಮಕ್ಕಳ ಕಣ್ಮುಂದೆ ಆಯಾ ಕಾಲದ ಅಥವಾ ದೇಶದ ಜನರ ಜೀವನದ ಚಿತ್ರ ಕಾಣಿಸುವ ರೀತಿಯಲ್ಲಿ ತೋರಿಸಿದ್ದಾರೆ. ಮಕ್ಕಳಿಗೆ ಬಾಯಿ ಮಾತಿಗಿಂತ ಹೆಚ್ಚಿಗೆ ಪರಿಣಾಮವುಂಟಾಗುತ್ತದೆ. ವಿದ್ಯಾರ್ಥಿಗಳಿಗೆ ಕಂಡಿದ್ದು ನೆನಪು ಉಳಿಯುಷ್ಟು ಕಾಲ, ಕೇಳಿದ ಅಥವಾ ಓದಿದರೆ ನೆನಪುಳಿಯುವುದಿಲ್ಲ ಎಂದು ಕಾರಂತರು ಉದಾಹರಣೆಗಳ ಸಮೇತ ವಿವರಿಸುತ್ತಾರೆ. ಭಾರತದ ಇತಿಹಾಸದಲ್ಲಿ ಆರ್ಯರು ದ್ರಾವಿಡರು, ವೇದಗಳು ಹಲವಾರು ರಾಜವಂಶಗಳು ಬಂದು ಹೋಗುತ್ತವೆ. ಇಂತಹ ಸಂದರ್ಭದಲ್ಲಿ ಮಕ್ಕಳಿಗೆ ಅಂದಿನ ಕಾಲದ ಜನರನ್ನು ಕುರಿತು ತಿಳಿಸಬೇಕಾಗುತ್ತದೆ. ಅವರ ನಿತ್ಯ ಜೀವನ ಹೇಗೆ ಕಳೆಯುತ್ತಿತ್ತು ಅವರ ದೇವರುಗಳು, ನಂಬಿಕೆಗಳು ಮುಂತಾದ ವಿಷಯಗಳನ್ನು ಅತ್ಯಂತ ರಸವತ್ತಾಗಿ ಹೇಳಬೇಕು. ಅಂದಿನ ಕಾಲದ ಜನ ಜೀವನದ ಕೆಲ ಅಂಶಗಳನ್ನು ನಾಟಕದ ರೂಪದಲ್ಲಿ ಮಕ್ಕಳಿಂದ ಆಡಿ ತೋರಿಸಿದರೆ ಅವರಿಗೆ ಇನ್ನಷ್ಟು ಆಸಕ್ತಿಯುಂಟಾಗುತ್ತದೆ ಎನ್ನುತ್ತಾರೆ. ನಾಟಕದ ದೃಶ್ಯಾವಳಿಗಳ ಉಡುಗೆ ತೊಡುಗೆಯನ್ನು ಹೇಗೆ ಮಕ್ಕಳಿಗೆ ತೋರಿಸಬಹುದೆಂದು ಕಾರಂತರು ಪ್ರಯೋಗಗಳ

ಮೂಲಕ ತೋರಿಸಿಕೊಟ್ಟರು, ಒಮ್ಮೆ ಅವರ ತರಗತಿಯ ಒಂದು ಗೋಡೆಯನ್ನು ಆರ್ಯರ ಕಾಲದ ಒಂದು ಬಿತ್ತಿ ಚಿತ್ರವನ್ನು ಬರೆಯಲು ಮಕ್ಕಳಿಗೆ ಹೇಳಿದರು. ಆರ್ಯರ ಜೀವನದ ಒಂದು ದೃಶ್ಯವದು. ಗೋಡೆಯಲ್ಲಿ ಆ ಚಿತ್ರವನ್ನು ಬರೆಯಬೇಕಾಗಿತ್ತು. ಚಿತ್ರಕಲೆ ಅಷ್ಟೂ ಸುಲಭವಲ್ಲ. ಎಂಬುದು ಕಾರಂತರಿಗೆ ಗೊತ್ತಿತ್ತು. ಆದರೆ ವಿದ್ಯಾರ್ಥಿಗಳನ್ನು ನಟರಂತೆ ವಿವಿಧ ಭಂಗಿಗಳಲ್ಲಿ ನಿಲ್ಲಿಸಿ ತೋರಿಸಲು ಪ್ರಯತ್ನಿಸಿದರು. ಅವರಿಂದ ತುಸು ದೂರದಲ್ಲಿ ಒಂದು ಪೆಟ್ರೋಮ್ಯಾಕ್ಸ್ ದೀಪವನ್ನು ಇರಿಸಿ ಅವರ ನೆರಳು ಆ ಗೋಡೆಯ ಮೇಲೆ ಬೀಳುವಂತೆ ಮಾಡಿದೆ. ಆ ಗೋಡೆಯ ಮೇಲೆ ತೂಗಿದ ಕಾಗದದ ಹಾಳೆಯಲ್ಲಿ ಅವರ ನೆರಳು ಬೀಳುತ್ತಲೇ ಆ ನೆರಳಿನ ಅಂಟನ್ನು ಬಣ್ಣದ ಕಡ್ಡಿಗಳಿಂದ ಗುರುತಿಸಿದರು. ಹೀಗೆ ವಿವಿಧ ಮಾನವ ಪಾತ್ರಗಳ ಆಕೃತಿಗಳು ತೆರೆಯಲ್ಲಿ ಮೂಡಿದ ಬಳಿಕ ಆ ಜನರ ಉಡುಗೆ ತೊಡುಗೆಗಳ ಹೀಗೆ ಮಕ್ಕಳಿಂದ ಅಲ್ಲಿರುವ ಆಕೃತಿಗಳಿಗೆ ಆಭರಣ ಕಾಲದ ಜೀವನಕ್ಕೆ ಸಂಬಂಧಿಸಿದ ದೃಶ್ಯವಳಿಗಳನ್ನು ತೋರಿಸುವ ಪ್ರಯತ್ನ ಮಾಡಿದರು. ಶಾಲೆಯಲ್ಲಿ ವಿದ್ಯಾರ್ಥಿಗಳಷ್ಟೇ ಅಲ್ಲದೆ ವಿದ್ಯಾರ್ಥಿನಿಯರಿಗೂ ಪ್ರತ್ಯೇಕವಾದಂತಹ ಪ್ರಯೋಗಗಳನ್ನು ಮಾಡಿದರು. ಅವರಿಗೆ ಗೃಹಲಂಕಾರದ ವಿಷಯವನ್ನು ಕುರಿತು ಕಲಿಸಲು ಪ್ರಯತ್ನಿಸಿದರು. ನಿಸರ್ಗದಲ್ಲಿ ಸಿಗುವ ಹಲವಾರು ಬಗೆಯ ಆಕೃತಿಗಳನ್ನು ಕಾಗದದ ಮೇಲೆ ಬೇಕಾದಂತೆ ಇರಿಸಿ ಆಕೃತಿಗಳನ್ನು ಬರೆಯುವುದನ್ನು ಕಲಿಸಿದರು. ಕಾಗದದ ಹಾಳೆಗಳನ್ನು ಮಡಿಸಿ ಮತ್ತೆ ಮಾಡಿದ ಪದರುಗಳಲ್ಲಿ ಕತ್ತರಿಸಿ ಮತ್ತೆ ಅವೇ ಆಕೃತಿಗಳು ಮರುತಳಿಸುವಂತೆ ಮಾಡುವುದನ್ನು ತೋರಿಸಿಕೊಟ್ಟರು. ಇಂತಹ ಕಲವಾರು ಪ್ರಯೋಗಗಳನ್ನು ಎರಡು ವರ್ಷಗಳ ಕಾಲ ಕಲಿಸಿಕೊಟ್ಟರು.

**ಕಾರಂತರ ಸೃಜನೇತರ ಕೃತಿಗಳು**

೧. ಚಿತ್ರಮಯ ದಕ್ಷಿಣ ಹಿಂದೂಸ್ಥಾನ

೨. ಚಿತ್ರಮಯ ದಕ್ಷಿಣ ಕನ್ನಡ

೩. ನಾಗರಿಕತೆಯ ಹೊಸ್ತಿಲಲ್ಲಿ

೪. ನಮ್ಮ ನೆರೆ ಕೆರೆಯವರು

೫. ರಮಣ ತಾತ

೬. ಚಿತ್ರಮಯ ದಕ್ಷಿಣ ಕ್ನನಡ ಅಂದು-ಇಂದು

೭ ಪಕ್ಷಿಗಳ ಅದ್ಭುತ ಲೋಕ ಶಿವರಾಮಕಾರಂತ

### ಚಿತ್ರಮಯ ದಕ್ಷಿಣ ಕನ್ನಡ

ಚಿತ್ರಮಯ ದಕ್ಷಿಣ ಕನ್ನಡ ಪಠ್ಯಪುಸ್ತಕವನ್ನು ರಚಿಸಿದ್ದು ೧೯೩೪ರಲ್ಲಿ. ಮಕ್ಕಳಿಗೆ ಆಕರ್ಷಕವಾದ ಪಠ್ಯಕ್ರಮ ಆಗಬೇಕು ಎನ್ನುವ ಉದ್ದೇಶದಿಂದ ಆಗಿನ ಕಾಲದಲ್ಲಿ ಮದ್ರಾಸ್ ಶಿಕ್ಷಣ ಕ್ರಮದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಭೂ ವಿವರಣೆ ಪಾಠವೊಂದಿತ್ತು. ಅದಕ್ಕಾಗಿ ಇದ್ದ ಪಠ್ಯ ಪುಸ್ತಕವನ್ನುಕಂಡು ಬೇಸರಗೊಂಡು ಈ ಪುಸ್ತಕವನ್ನು ಬರೆದರು.

ಚಿತ್ರಮಯ ದಕ್ಷಿಣ ಕನ್ನಡದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ೯೬ ಉತ್ತಮ ಛಾಯಾಚಿತ್ರಗಳಿಂದ ರಚಿತವಾಗಿದೆ. ಈ ಪ್ರದೇಶದ ಬೆಟ್ಟ, ಕಣಿವೆ, ಬಯಲು, ನದಿ, ಕಡಲು, ಕೋಟೆ, ವಾಸ್ತು ದೇವಾಲಯಗಳು, ವೃತ್ತಿಗಳು, ಉದ್ಯಮಗಳು, ಮನರಂಜನೆಗಳು ವನ್ಯ ಪ್ರಾಣಿಗಳು ಪ್ರತಿಯೊಂದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಆಧುನಿಕತೆಯ ಪ್ರವಾಹದಲ್ಲಿ ಮರೆಯಾಗುತ್ತಿರುವ ಸಂಪ್ರದಾಯಿಕ ನಡೆಗಳು ಜನಜೀವನದ ಸೊಗಸನ್ನು ತಿಳಿಸುತ್ತವೆ. ಮಕ್ಕಳಿಗಾಗಿ ಈ ಸಂಪುಟವನ್ನು ರಚಿಸಿದ್ದರಿಂದ ವಿಷಯ ನಿರೂಪಣೆಯೂ ಭಿನ್ನವಾಗಿದೆ. ಈ ಕೃತಿಯಲ್ಲಿ ಶಾಲೆಗೆ ಹೋಗುವ ಕಿಟ್ಟು ಮತ್ತು ಅವನ ಸ್ನೇಹಿತರನ್ನು ಮುಂದು ಮಾಡಿ ಅವರ ಬಾಯಿಂದ ವೈವಿಧ್ಯಮಯ ದಕ್ಷಿಣ ಜಿಲ್ಲೆಯ ಪರಿಚಯ ಮಾಡಿಕೊಟ್ಟಿದ್ದಾರೆ. ಜಿಲ್ಲೆಯ ಸಹ್ಯಾದ್ರಿಯ ಬೆಡಗು, ಅಲ್ಲಿ ನಿಂತು ನೋಡಿದರೆ ಸಮುದ್ರದವರೆಗೂ ಕಾಣಿಸುವ ಹಸಿರು, ಸಮುದ್ರವನ್ನು ಹುಡಿಕಿ ಹೋಗುವ ನದಿಗಳು, ಸಮುದ್ರದಲ್ಲಿ ಮುಳುಗುವ ಸೂರ್ಯ, ಇವುಗಳನ್ನು ಸರಳ ಭಾಷೆಯಲ್ಲಿ ವರ್ಣಿಸಿದ್ದಾರೆ. ಈ ಪ್ರವಾಸ ಕೃತಿಯಲ್ಲಿ ಕಾಡು, ಕಾಡಿನ ಉಪಯುಕ್ತತೆ, ಮಳೆ ಮತ್ತು ನೀರು, ನೀರಿನ ಸಮುದ್ರಯಾತ್ರೆ, ಮೃಗಗಳು, ದಕ್ಷಿಣ ಕನ್ನಡ ಜಿಲ್ಲೆಯ ಹಲವಾರು ಮತಗಳು ಹಾಗೂ ಜಾತಿಗಳು, ಸ್ನೇಹ ಸೌಹಾರ್ದ ಮಂಗಳೂರು ಬಂದರು. ಈ ಬಂದರುಗಳ ಮೂಲಕ ಹಡಗುಗಳ ಮೇಲೆ ಹೊರದೇಶಗಳಿಗೆ ಹೋಗುವ ಕಾಫಿ, ಏಲಕ್ಕಿ ಮುಂತಾದ ಸರಕಗಳು, ಸಂತೆ, ಜಾತ್ರೆಗಳು, ಹಳ್ಳಿಯ ವಿನೋದಗಳು, ಕೋಲ, ಕಂಬಳ, ಕೋಳಿಕಟ್ಟ, ತಾಳ ಮದ್ದಳೆ, ಯಕ್ಷಗಾನ ಬಯಲಾಟ ಇಷ್ಟೆಲ್ಲಾವನ್ನು ಮಕ್ಕಳಿಗೆ ಹಿಡಿಸುವಂತೆ, ಆಸಕ್ತಿಕರವಾಗಿರುವಂತೆ ಸರಳ ಪದಗಳಿಂದ ನಿರೂಪಿಸಿದ್ದಾರೆ. ಈ ಪುಸ್ತಕದಲ್ಲಿ ಹಲವಾರು ವರ್ಣರಂಜಿತ ಚಿತ್ರಗಳಿವೆ. ಈ ಚಿತ್ರಗಳನ್ನು ಬಣ್ಣಿಸಿಯೇ ಉಪಾಧ್ಯಾಯರು ಮಕ್ಕಳಿಗೆ ಭೂಗೋಳವನ್ನು ಸುಲಭವಾಗಿ ಕಲಿಸಬಹುದು.

ಚಿತ್ರಮಯ ದಕ್ಷಿಣ ಕನ್ನಡದಂತಹ ಭೂಗೋಳ ರಾಜ್ಯದ ಎಲ್ಲಾ ಜಿಲ್ಲೆಗಳಿಗೂ ಇಡೀ ದೇಶಕ್ಕೂ ಅವಶ್ಯಕ. ಇಂದಿನ ಭೂಗೋಳ ಎಂದರೆ ಅಂಕಿ ಅಂಶಗಳ ನೀರಸ ವರದಿಯಾಗಿರುತ್ತದೆ. ಕಾರಂತರ ಚಿತ್ರಮಯ ದಕ್ಷಿಣ ಕನ್ನಡ ಪುಸ್ತಕವು ಇಂದಿನ ಭೂಗೋಳ ಪುಸ್ತಕಗಳಿಗೆ ಹೋಲಿಸಿದರೆ ಹಲವಾರು ವ್ಯತ್ಯಾಸಗಳು ಕಾಣುತ್ತವೆ. ಮಕ್ಕಳನ್ನು ಆಕರ್ಷಿಸುವಲ್ಲಿ ಮತ್ತು ಸರಳವಾಗಿ ಓದಿಸಿಕೊಂಡು ಹೋಗುತ್ತದೆ.

**ಆತ್ಮಕಥೆ**

ಶಿವರಾಮ ಕಾರಂತರು ತಮ್ಮ ಆತ್ಮಕಥೆಯಾದ **ಹುಚ್ಚುಮನಸ್ಸಿನ ಹತ್ತು ಮುಖಗಳು** ಕೃತಿಯಲ್ಲಿ ಅವರ ಬಾಲ್ಯದ ಶಿಕ್ಷಣಕ್ಕೆ ಸಂಬಂಧಿಸಿದ ಹಲವಾರು ವಿಷಯಗಳನ್ನು ತಿಳಿಸಿದ್ದಾರೆ. ಈ ಆತ್ಮ ಕಥೆಗಳು ಕಾರಂತರು ಬದುಕಿನೊಂದಿಗೆ ನಡೆಸಿದ ಪ್ರಯೋಗಗಳ ಕಲಾತ್ಮಕ ವರದಿ ಗಳಾಗಿವೆ. ರಾಜಕೀಯ, ಪತ್ರಿಕೋದ್ಯಮ, ಶಿಕ್ಷಣ ಹಾಗೂ ವಿವಿಧ ಕಲಾ ಮಾಧ್ಯಮಗಳಲ್ಲಿ ಅವರು ಕಂಡುಂಡ ಅನುಭಗಳು ಇದರಲ್ಲಿ ದಾಖಲಾಗಿವೆ. ಅವರ ಕಾಲದಲ್ಲಿ ಮರಳಿನ ಮೇಲೆ ಬರೆಯಲು ಪ್ರಾರಂಭವಾದ ಶಿಕ್ಷಣ ಮುಂದೆ ಹಲಗೆ, ಬಳಪ, ಓಲೆಗರಿ, ಕಂಠ ಹೀಗೆ ಪ್ರಗತಿ ಕಾಣುವುದನ್ನು ಗಮನಿಸಬಹುದು. ಚಿಕ್ಕವರಿದ್ದಾಗಲೇ ಯಕ್ಷಗಾನದಲ್ಲೂ ಅಭಿರುಚಿ ಹೊಂದಿರು ವುದನ್ನು ಕಾಣಬಹುದು. ಹೈಸ್ಕೂಲು ಶಿಕ್ಷಣವನ್ನು ಕುಂದಾಪುರದಲ್ಲಿ ಮುಗಿಸಿದ ಅವರು ಕಾಲೇಜು ಶಿಕ್ಷಣವನ್ನು ಮಂಗಳೂರಿನಲ್ಲಿ ಮುಂದುವರಿಸುತ್ತಾರೆ. ಓದಿನಲ್ಲಿ ಸಾಕಷ್ಟು ಆಸಕ್ತಿ ಇರುವ ಅವರು ಮುಂದೆ ರಾಷ್ಟ್ರೀಯ ಚಳವಳಿ ಪ್ರಾರಂಭವಾದಾಗ ತಮ್ಮ ಶಿಕ್ಷಣಕ್ಕೆ ಕೊನೆ ಹೇಳುತ್ತಾರೆ. ಅವರ ಬಾಳಿನ ಅನುಭವ ವ್ಯಾಪ್ತಿ ವಿಶಾಲವಾದುದು. ರಾಷ್ಟ್ರಭಕ್ತಿ, ಸ್ವದೇಶಿ ವ್ಯಾಪಾರ, ಪತ್ರಿಕೋದ್ಯಮ, ಆದ್ಯಾತ್ಮ ಸಾಧನೆ, ಫೋಟೋಗ್ರಾಫಿ, ನಾಟಕ, ನೃತ್ಯ, ಚಿತ್ರ, ವಾಸ್ತು, ಸಂಗೀತ, ಸಿನಿಮಾ, ಸಮಾಜ ಸುಧಾರಣೆ, ಗ್ರಾಮೋದ್ಧಾರ, ಶೈಕ್ಷಣಿಕ ಪ್ರಯೋಗಗಳು ಮತ್ತು ಉದ್ಯೋಗ ಈ ಎಲ್ಲಾ ಕ್ಷೇತ್ರಗಳಲ್ಲಿ ಕೃಷಿ ಮಾಡಿದವರು. ಕಾರಂತರ ಈ ಆತ್ಮ ಚರಿತ್ರೆಯು ಬಾಲ್ಯ, ಶಿಕ್ಷಣ, ಸಮಾಜ ಸೇವೆ, ದಾಂಪತ್ಯ ಜೀವನ, ಪತ್ರಿಕೋದ್ಯಮ, ರಂಗಭೂಮಿ, ಸಂಚಾರಿ ಜೀವನ, ಧಾರ್ಮಿಕ ನಿಲುವುಗಳು, ಶೈಕ್ಷಣಿಕ ಪ್ರಯೋಗಗಳು, ನಾಟಕ ರಂಗ, ಸಂಗೀತ, ಸಾಹಿತ್ಯ, ರಾಜಕೀಯ ಹೀಗೆ ಹಲವಾರು ವಿಚಾರಗಳನ್ನು ಒಳಗೊಂಡಿದೆ. ಕಾರಂತರು ಬಾಲ್ಯದಲ್ಲಿ ಶಿಕ್ಷಣ ಕಲಿಯಲು ಎದುರಿಸಿದ ತೊಂದರೆಗಳು ಮುಂದೆ ಅವರನ್ನು ಶಿಕ್ಷಣ ವ್ಯವಸ್ಥೆಯ ಬಗ್ಗೆ ವಿಶೇಷವಾಗಿ ಕಾಳಜಿವಹಿಸುವಲ್ಲಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿದ ಘಟನೆಗನೆಗಳು ಶಿಕ್ಷಣವನ್ನು ಕುರಿತು ಚಿಂತಿಸುವಂತೆ, ಶೈಕ್ಷಣಿಕ ಪ್ರಯೋಗಗಳನ್ನು ಕೈಗೊಳ್ಳುವಂತೆ ಪ್ರೇರೆಪಿಸಿದ ಹಲವಾರು ಘಟನೆಗಳು ಇವೆ.

ಹುಚ್ಚು ಮನಸ್ಸಿನ ಹತ್ತು ಮುಖಗಳು, ಸ್ಮೃತಿ ಪಟಲದಿಂದ, ಆತ್ಮ ಚರಿತ್ರೆಗಳಾಗಿವೆ. ಕಾರಂತರ ಬದುಕೆ ಒಂದು ಸಾಹಿತ್ಯ. ಸಾಹಿತ್ಯವೇ ಅವರ ಬದುಕು. ಆತ್ಮಚರಿತ್ರೆಗಳ ಪ್ರಯೋಜನದ ಬಗ್ಗೆ ಕಾರಂತರು ಹೀಗೆ ಹೇಳಿದ್ದಾರೆ.

> ಯಾವ ಒಬ್ಬನೇ ವ್ಯಕ್ತಿಯನ್ನು ಆತ ಗುರುವಾಗಿ ಒಪ್ಪದೇಹೋದರೂ ನೂರಾರು ವ್ಯಕ್ತಿಗಳು, ನೂರಾರು ಜೀವಿಗಳು ಮತ್ತು ಅಸಂಖ್ಯಾತ ಘಟನೆಗಳು ಅವನ ಪಾಲಿನ

ಗುರುಗಳಾಗಿವೆ. ಇವುಗಳಿಂದ ಪರಿಪೋಷಣೆ ಹೊಂದಿದ ಸ್ಫೂರ್ತಿವೆತ್ತ ಒಬ್ಬ ಬರಹ ಗಾರನು ಎಷ್ಟೋ ಕೃತಿಗಳನ್ನು ಹೊರಗೆಡವಬಹುದು. ಇವುಗಳಲ್ಲಿ ತಪ್ಪಾದವು ನೂರಾರು ಇದ್ದರೆ, ಒಪ್ಪಾದುವು ಕೆಲವಾದರು ಇರಬಹುದು. ತಪ್ಪು ಒಪ್ಪುಗಳ ನಡುವೆ ತೊಳಲಾಡುವ ಕೃತಿಗಳು ಉಳಿದವು. ಮೂಲತಃ ಬರಹಗಾರ ಇಲ್ಲವೆ, ಯಾವನೇ ಕಲಾವಿದ ತನ್ನ ಮನಸ್ಸನ್ನು ಬಿಂಬಿಸಲು ಪ್ರಯತ್ನಿಸಬೇಕಾದುದು ತನ್ನ ಆತ್ಮ ಸಂತೃಪ್ತಿಗಾಗಿಯೇ ಆದುದರಿಂದ ಇತರರೂ ಸಹ ಪರ್ಯಾಯವಾಗಿ ಆತ್ಮ ಸಂತೋಷ ಪಡೆಯಬಹುದು[೨]

ಶಿವರಾಮ ಕಾರಂತರ ಆತ್ಮಕಥನವು ಜೀವನದ ಬೇರೆ ಬೇರೆ ಮಗ್ಗಲುಗಳನ್ನು ತೋರಿಸಿ ಕೊಡುತ್ತದೆ. ಜೀವನದ ದರ್ಶನದ ಪುಟಗಳನ್ನು ಪರಿಚಯ ಮಾಡಿಕೊಡುತ್ತದೆ.

**ಪ್ರವಾಸ ಸಾಹಿತ್ಯ**

ಶಿವರಾಮ ಕಾರಂತರ ಪ್ರವಾಸ ಕೃತಿಗಳಲ್ಲಿ ಹಲವು ರೀತಿಯ ಅಂಶಗಳು ಅಡಕ ವಾಗಿರುವುದನ್ನು ಕಾಣಬಹುದು. ಕೃತಿ ರಚನೆಗಾಗಿ, ವಸ್ತು ವಿಶ್ಲೇಷಣೆಗಾಗಿ ವಿವಿಧ ಪ್ರದೇಶಗಳ ಕಲೆ ಸಂಸ್ಕೃತಿಯನ್ನು ಅಭ್ಯಸಿಸಲು ವಿದೇಶ ಪ್ರವಾಸಗಳನ್ನು ಮಾಡಿದರು. ಜಪಾನ್, ಅಮೆರಿಕಾ, ಈಜಿಪ್ತ್, ಯುರೋಪಿಯನ್ ದೇಶಗಳಿಗೆ ಹೋಗಿ ಬಂದು ಪ್ರವಾಸ ಸಾಹಿತ್ಯ ಕ್ಷೇತ್ರದಲ್ಲಿ ಹಲವು ಪುಸ್ತಕಗಳನ್ನು ರಚಿಸಿದರು. ಅಬುವಿನಿಂದ ಬರಾಮಕ್ಕೆ, ಪಾತಾಳಕ್ಕೆ ಪಯಣ, ಅಪೂರ್ವ ಪಶ್ಚಿಮ ಕೃತಿಗಳು ಪ್ರವಾಸವನ್ನು ಕುರಿತ ರಚಿಸಲಾದ ಕೃತಿಗಳಾಗಿವೆ. ಅದ್ಭುತ ಜಗತ್ತು, ಭೂಮಿಯ ಉಗಮ, ವಿಕಾಸ, ರಚನೆ ಸಾಗರ ನಿರ್ಮಾಣ ಮುಂತಾದ ಕುತೂಹಲದ ವಿಷಯಗಳನ್ನು ವೈಜ್ಞಾನಿಕ ಹಿನ್ನೆಲೆಯಲ್ಲಿ ವಿವರಿಸಿದ್ದಾರೆ. ಅವರ ಪ್ರವಾಸ ಕೃತಿಗಳಲ್ಲಿ ಕಲೆ ಸಂಗೀತ, ನಾಟಕ, ಬದುಕು, ನಿಸರ್ಗಗಳಿಗೆ ಒತ್ತು ಇರುತ್ತದೆ. ಸದಾ ಚಿಂತನಾಶೀಲ ಮನಸ್ಸಿನ ಪ್ರಕ್ರಿಯೆ ಕಂಡುಬರುತ್ತದೆ.

**ಅಪೂರ್ವ ಪಶ್ಚಿಮ**

ಅಪೂರ್ವ ಪಶ್ಚಿಮ ಕೃತಿಯಲ್ಲಿ ಲಂಡನ್, ಪ್ಯಾರಿಸ್, ರೋಮ್, ಫ್ರಾನ್ಸ್, ಮುಂತಾದ ವಿದೇಶಿ ನಗರಗಳ ಸಂದರ್ಶನದ ಕಥನವಿದೆ. ಶಿಲ್ಪಕಲೆ, ಚಿತ್ರಕಲೆ ಸಂಸ್ಕೃತಿಗಳ ಪರಿಚಯವೂ ಇಲ್ಲಿ ಕಂಡುಬರುವುದು. ಅಲ್ಲಿ ಕಂಡ ನೋಟ, ಜನಗಳ ಸಾಹಸ ಮತ್ತು ಸಂಸ್ಕೃತಿ ಪ್ರೇಮ, ಬಾಳಬೇಕೆಂಬ ಉತ್ಸಾಹ ಮುಂತಾದ ವಿಷಯಗಳನ್ನು ಕುರಿತು ತಿಳಿಸಿದ್ದಾರೆ. ಪೂರ್ವದಿಂದ ಅಂತ್ಯ ಪೂರ್ವಕ್ಕೆ ಪ್ರವಾಸ ಕಥನದಲ್ಲಿ ಸಿಂಹಳ, ನೆಪಾಳ, ಬೀರಾತ್, ಇರಾನ್, ಅಫ್‌ಘಾನಿಸ್ತಾನ, ಹಾಂಗ್‌ಕಾಂಗ್, ಜಪಾನ್, ಪ್ರವಾಸದ ವಿವರಣೆಯಿದೆ. ಚಾರಿತ್ರಿಕ ಹಿನ್ನೆಲೆಯಿಂದ ಸಂಸ್ಕೃತಿಯನ್ನು ಶೋಧಿಸುವ ಪ್ರಯತ್ನವನ್ನು ಕಾರಂತರು ಮಾಡಿದ್ದಾರೆ.

ಶಿವರಾಮ ಕಾರಂತರು ಪ್ರಥಮ ವಿದೇಶವನ್ನು ಕೈಗೊಂಡಾಗ ನಂತರ ಅವರು ಹಲವಾರು ಬಾರಿ ವಿದೇಶಕ್ಕೆ ಹೋಗಿ ಬಂದಿದ್ದಾರೆ. ಆದರೆ ಯಾವಾಗಲೂ ಮೊದಲ ಸಂದರ್ಶನ ಅಪೂರ್ವವೂ ಕುತೂಹಲಕಾರಿಯೂ ಆಗುತ್ತದೆ. ನಮ್ಮ ದೇಶದಲ್ಲಿ ಕಾಣಲಾರದ ಯಾವುದೋ ಒಂದು ಬಗೆಯ ಚೆಲವು ಅಲ್ಲಿ ಕಾಣಲು ಸಿಕ್ಕಿತು ಎಂಬ ಆಸೆಯಿಂದ ಪಾಶ್ಚಾತ್ಯರ ಚಿತ್ರ ಶಿಲ್ಪಕಲೆಗಳನ್ನು ಓದಿದ ಮೇಲೆ ಅವನ್ನು ಕಣ್ಣಾರೆ ಕಾಣಬೇಕೆಂಬ ಮನಸ್ಸಿನಿಂದ ಪರದೇಶದ ಜನಗಳ ನೃತ್ಯ ಬಾಲೆ, ನಾಟಕ ಇವುಗಳನ್ನು ತಿಳಿದುಕೊಳ್ಳುವ ಹಂಬಲದಿಂದ ಪರದೇಶಗಳ ಸಂಸ್ಕೃತಿ ಹಾಗೂ ಹೆಸರಾಂತ ನಗರಗಳಾದ ಲಂಡನ್, ಪ್ಯಾರಿಸ್, ರೋಮ್ ಮತ್ತು ಫ್ಲಾರೆನ್ಸ್‌ಗಳನ್ನು ತಿಳಿಯುವ ಸಲುವಾಗಿ ಕಾರಂತರು ವಿದೇಶ ಪ್ರವಾಸವನ್ನು ಕೈಗೊಂಡರು. ಕಲೆ, ಶಿಲ್ಪ ನೃತ್ಯ ನಾಟಕ, ಸಂಸ್ಕೃತಿಗಳನ್ನು ಮನಸಾರೆ ಕಂಡುದಲ್ಲದೇ ಮನಸಾರೆ ಹೊಗಳಿದ್ದಾರೆ. ಇಂಗ್ಲೆಂಡ್ ದೇಶದ ಲಂಡನ್ ನಗರ, ನಾರ್ವೆ ಅದರ ರಾಜಧಾನಿ ಹೊಂಬರ್ಗ್, ಹಾಲೆಂಡ್, ಬೆಲ್ಜಿಯಂ, ಪ್ಯಾರಿಸ್, ಇಟಲಿ, ಮಲನ್ ಮತ್ತು ವೆನಿಸ್, ಫ್ಲಾರೆನ್ಸ್, ರೋಮ್ ನಗರಗಳು ಇವನ್ನೆಲ್ಲಾ ತಮ್ಮದೇ ಆದ ದೃಷ್ಟಿಯಲ್ಲಿ ಸುಮಾರು ಎಪ್ಪತ್ತು ದಿನಗಳ ಕಾಲ ನೋಡಿ ತಮ್ಮ ಅನುಭವವನ್ನು ಹೆಚ್ಚಿಸಿಕೊಂಡಿದ್ದಾರೆ. ಈ ಪ್ರವಾಸ ಗ್ರಂಥವನ್ನು ಓದಿದ ಮೇಲೆ ಪಾಶ್ಚಾತ್ಯರು ತಮ್ಮ ಪ್ರಾಚೀನ ಕಲೆ, ಶಿಲ್ಪ, ನೃತ್ಯ, ಮುಂತಾದವುಗಳನ್ನು ಸಂರಕ್ಷಿಸಲು ಯಾವ ಕ್ರಮಗಳನ್ನು ಅನುಸರಿಸಿದ್ದಾರೆ ಹಾಗೂ ಏನೆಲ್ಲಾ ಮಾಡಿದ್ದಾರೆಂದು ಗೊತ್ತಾಗುತ್ತದೆ. ತಮ್ಮದನ್ನಷ್ಟೇ ಅಲ್ಲದೆ ಬೇರೆ ಬೇರೆ ದೇಶಗಳಲ್ಲಿ ಸಿಗಬಹುದಾದುನ್ನೆಲಾ ತರಿಸಿಕೊಂಡು ಅವುಗಳನ್ನು ಕಾಪಾಡುವ ರೀತಿ ಮೆಚ್ಚತಕ್ಕದು. ಅಲ್ಲಿಯ ವಸ್ತು ಹಾಗೂ ಪ್ರಾಣಿ ಸಂಗ್ರಹಾಲಯಗಳಂತೂ ರಸ್ತೆಯ ಉದ್ದಕ್ಕೂ ಹಲವಾರು ಮೈಲುಗಟ್ಟಲೆ ಇರುವುದನ್ನು ಈ ಕೃತಿಯಲ್ಲಿ ಕಾಣಬಹುದು.

ಕಾರಂತರ ಪ್ರವಾಸ ಕಥನಗಳು ಕೇವಲ ಅಂಕಿ ಸಂಖ್ಯೆಗಳ ಮಾಹಿತಿಯಾಗದೆ ಶಿಲ್ಪಕಲೆ, ಚಿತ್ರಕಲೆ, ಸಾಂಸ್ಕೃತಿಕ ವಿನಿಮಯ ದೇಶಿಯ ಸ್ಥಿತಿಯೊಂದಿಗೆ, ವಸ್ತುಗಳೊಂದಿಗೆ ಹೋಲಿಕೆಗಳನ್ನು ಸಹ ಒಳಗೊಂಡಿದೆ. ಇವಿಷ್ಟೇ ಇದ್ದರೆ ಸಾಕು, ಅದು ಅತ್ಯುತ್ತಮ ಪ್ರವಾಸ ಕಥನವೆಂದು ಭಾವಿಸುವವರ ಮಧ್ಯೆ ಕಾರಂತರು ಅವೆಲ್ಲ ವಿಷಯಗಳ ಜೊತೆ ವಿದೇಶಿ ಶಿಕ್ಷಣ ಸಂಸ್ಥೆಗಳ ಮತ್ತು ಅಲ್ಲಿನ ಶಿಕ್ಷಣ ಕುರಿತ ಮಾಹಿತಿಯನ್ನು ಹೆಕ್ಕಿ ತಂದುಕೊಡುತ್ತಾರೆ. ಇವುಗಳನ್ನೆಲ್ಲಾ ಹೇಳುತ್ತಿರುವ ಉದ್ದೇಶ ಕಾರಂತರನ್ನು ವಿಶಿಷ್ಟವೆಂದು ಸಾರುವ ಪ್ರಯತ್ನವಲ್ಲ, ಬದಲಾಗಿ ಶಿಕ್ಷಣದ ಕುರಿತ ಅವರ ಆಸಕ್ತಿ ಮತ್ತು ವ್ಯಾಮೋಹ ಎಂತಹದ್ದು ಎಂಬುದನ್ನು ಹೇಳುವ ಪ್ರಯತ್ನವಷ್ಟೇ.

**ಪಕ್ಷಿಗಳ ಅದ್ಭುತ ಲೋಕ ಶಿವರಾಮ ಕಾರಂತ**

ಕಾರಂತರು ಈ ಕೃತಿಯಲ್ಲಿ ಹಲವಾರು ಪಕ್ಷಿಗಳನ್ನು ಕುರಿತು ಬರೆದಿದ್ದಾರೆ. ಭೂಮಿಯ ವಿವಿಧ ಭೂ ಖಂಡಗಳಲ್ಲಿ ವರ್ಷದ ಬೇರೆ ಬೇರೆ ಋತುಗಳಲ್ಲಿ ಉಂಟಾಗುವ ವಿಪರ್ಯಾಸ ಗಳಿಂದ ಪಕ್ಷಿಗಳು ಸಂತಾನ ಪಡೆಯಲು, ಆಹಾರಗಳಿಸಲು ಪಕ್ಷಿಗಳು ವಲಸೆ ಹೋಗುವುದು ಮುಂತಾದ ವಿಷಯಗಳನ್ನು ಪರಿಚಯಿಸುತ್ತಾರೆ. ಸಂತಾನ ಪಡೆಯಲು ಮರಿಗಳನ್ನು ಬೆಳೆಸಲು ಅನುಕೂಲವಾದ ಸ್ಥಳಗಳನ್ನು ಹುಡುಕಿಕೊಂಡು ಹೋಗುವ ಪಕ್ಷಿಗಳನ್ನು ಈ ಕೃತಿಯಲ್ಲಿ ಕಾಣಬಹುದು.

ಪ್ರಪಂಚದಲ್ಲಿ ಇಂದು ಕಾಣುವ ಹಲವಾರು ಪಕ್ಷಿಗಳು ಜೀವನ ಕ್ರಮ ಬದಲಾದುದು. ಅವುಗಳು ಆಹಾರ ಸ್ವೀಕರಿಸುವ ರೀತಿ ಬದಲಾಗುತ್ತಾ ಬಂದಿರುವುದನ್ನು ಕಾಣಬಹುದಾಗಿದೆ. ಉಷ್ಟ್ರಪಕ್ಷಿ, ಏಮು, ಕಿವಿ, ಹಾರಲಾರದ ಪಕ್ಷಿಗಳು, ಪಶು ಪಕ್ಷಿಗಳ ವಿಹಾರ ರಂಗ ಗಿಡುಗು, ಗಿನಿಕೋಳಿ, ಗೂಬೆ, ಜಕಾನ ಡೋಗೆ, ತಾಳೆ ಗುಬ್ಬಿ, ನವಿಲು, ಟರ್ಕಿ ಕೋಳಿ, ಮುಂತಾದ ಪಕ್ಷಿಗಳ ವಿವರಣೆ ಇದೆ.

> ಮಳೆಗಾಲ ಸುರಿದು ಹೋದ ಮೇಲೆ ಬೇಸಿಗೆ ಮುಗಿಯುವ ತನಕ ನಮ್ಮ ತೀರಕ್ಕೆ ಕಡಲು ಕಾಗೆ ಹಿಂಡಿಗೆ ಹಿಂಡೇ ಬರುತ್ತಿತ್ತು. ಈ ವಲಸೆಗಾರ ಪಕ್ಷಿಗಳು ೮-೧೦ ಸಾವಿರ ಮೈಲು ದೂರದಿಂದ ಉತ್ತರಾರ್ಥಗೋಲದಿಂದ ನಮ್ಮ ಊರಿಗೆ ಈ ಕಡಲ ಪಕ್ಷಿಗಳು ಎಲ್ಲಿಂದಲೋ ಹಾರಿ ಬರುವ ವಿಚಾರ ಬೆರಗು ಹುಟ್ಟಿದ್ದು. ಬೆಳೆದು ದೊಡ್ಡವನಾಗಿ ಓದಿಕೊಂಡ ಬಳಿಕ ಹಾಗೇ ಓದುತ್ತ ಶಾಂತ ಸಾಗರಿಂದ ನೀರ್ಕಾಗೆ ಬರುವ ವಿಷಯ ತಿಳಿಯಿತು. ಸೈಬಿರಿಯಾದಿಂದ ದೊಡ್ಡ ಕೊಕ್ಕರೆ ಬರುವುದು ಗೋಚರಿಸಿತು[೨೮]

ಹೀಗೆ ಕಾರಂತರು ತಾವೂ ನೋಡಿದ ಮತ್ತು ಓದಿ ತಿಳಿದುಕೊಂಡ ಹಲವಾರು ಪಕ್ಷಿಗಳನ್ನು ಅದ್ಯಯನ ಮಾಡಿದ್ದಾರೆ. ಈ ಬರಹಕ್ಕಾಗಿ ಪಕ್ಷಿ ಸಂಕುಲದ ಕೃತಿಗಳನ್ನು ಅಧ್ಯಯನ ಮಾಡುತ್ತಿದ್ದ ಸಂದರ್ಭದಲ್ಲಿ ಅವುಗಳ ಬಗ್ಗೆ ಒಂದು ವಿಶ್ವಕೋಶವನ್ನು ಸಂಪಾದಿಸಿದ ಡಾ. ಕ್ರಿಸ್ಟಾಫರ್ ಪೆರಿನ್ಸ್ ಮತ್ತು ಡಾ. ಎಲೆಕ್ಸ್ ಮಿಡ್ಲಟನ್ ಅವರ ಕೋಶವನ್ನು ಪರಿಶೀಲಿಸಿದರು. ಈ ಗ್ರಂಥದ ಪ್ರಭಾವದಿಂದ ಪಕ್ಷಿಗಳ ಕುರಿತು ಪುಸ್ತಕವನ್ನು ರಚಿಸಿದರು. ಇದರಲ್ಲಿನ ಬರಹವು ತುಂಬಾ ಸರಳವಾಗಿ ಓದಿಸಿಕೊಂಡು ಹೋಗುತ್ತದೆ. ಇದರಲ್ಲಿ ಪಕ್ಷಿ ವಿಕಾಸ, ಬಾತುಕೋಳಿಗಳು, ಉಷ್ಟ್ರಪಕ್ಷಿ, ಏಮು, ಉಲ್ಲಂಗಿ, ಬೆಳ್ಳಕ್ಕಿ, ಹಂಸ, ಬಕಪಕ್ಷಿ, ಬಾನಕ್ಕಿ, ನವಿಲು, ಮಾಲಿಕೋಳಿ, ಗೂಬೆ, ಪ್ರತಿಯೊಂದು ಪಕ್ಷಿಯ ವಿವರಣೆಯ ಜೊತೆಗೆ ಚಿತ್ರಗಳನ್ನು ಕೊಟ್ಟಿದ್ದಾರೆ ಸುಲಭವಾಗಿ ಅರ್ಥವಾಗುವ ಪದಗಳನ್ನೆ ಬಳಸಿದ್ದಾರೆ.

## ಶಿವರಾಮ ಕಾರಂತರ ವಿಶ್ವಕೋಶಗಳು

ಶಿವರಾಮಕಾರಂತರು ವಿಜ್ಞಾನವನ್ನು ಅಭ್ಯಾಸ ಮಾಡಿರುವುದು ಪಠ್ಯಪುಸ್ತಕಗಳ ನೆರವಿನಿಂದಲ್ಲ. ಪ್ರೌಢವಾದ ತಾಂತ್ರಿಕ ಪುಸ್ತಕಗಳ ಮತ್ತು ನಿಯತಕಾಲಿಕೆಗಳ ತಂಟೆಗೆ ಅವರು ಹೋಗಿಲ್ಲ, ಅವರ ವಿಜ್ಞಾನ ವ್ಯಾಸಂಗಕೆ ವೈಜ್ಞಾನಿಕ ಶಬ್ದಕೋಶಗಳು ವಿಶ್ವಕೋಶಗಳು ಕಾರಂತರ ಸಂಗ್ರಹದಲ್ಲಿ ಅಪಾರವಾಗಿದ್ದವು. ಇಂಗ್ಲಿಷ್ ಭಾಷೆಯಲ್ಲಿ ದೊರೆಯುವ ವಿಜ್ಞಾನ ಸಾಹಿತ್ಯವನ್ನು ಓದಿ ಆನಂದಿಸಿದ ಕಾರಂತರು ನಮ್ಮ ಜನಕ್ಕೆ ಎಟುಕುವಂತೆ ಕನ್ನಡ ಭಾಷೆಯಲ್ಲಿ ಹಲವಾರು ವಿಜ್ಞಾನದ ಬರವಣಿಗೆಗಳನ್ನು ಬರೆದರು.

ವಸಾಹತು ಕಾಲದಲ್ಲಿ ಆಂಗ್ಲ ಭಾಷೆಯಲ್ಲಿ ವಿಜ್ಞಾನ ಪ್ರೌಢ ಶಿಕ್ಷಣ ಪಡೆದವರು ಹಾಗೂ ಸಂಶೋಧಕರು ಶಾಲಾ ಕಾಲೇಜುಗಳಲ್ಲಿ ಸಂಶೋಧನಾಲಯಗಳಲ್ಲಿ ತಮ್ಮ ತಮ್ಮ ಉದ್ಯೋಗಗಳಲ್ಲಿ ನಿರತರಾಗಿದ್ದಾರು. ಸಾರ್ವಜನಿಕ ಎಲ್ಲಾ ವ್ಯವಹಾರಗಳನ್ನು ಆಂಗ್ಲ ಭಾಷೆಯಲ್ಲಿಯೇ ನಡೆಯುತ್ತಿದ್ದರಿಂದ ಕನ್ನಡದಲ್ಲಿ ಬರೆಯಲು ಅವಕಾಶವಾಗಲೀ ಪ್ರೇರಣೆಯಾಗಲಿ ದೊರೆಯಲಿಲ್ಲ. ಹೀಗಾಗಿ ಕಾರಂತರೆ ವಿಜ್ಞಾನಿಗಳು ಮಾಡಬೇಕಾದ ಕೆಲಸವನ್ನು ಮಾಡಿದರು. ತಾವು ಕಂಡ ಆನಂದಿಸಿದ ವಿಷಯಗಳನ್ನು ತಮ್ಮ ಜನಗಳಿಗೂ ತಿಳಿಸಬೇಕೆಂದು ಹೊರಟ ಕಾರಂತರು ಸಹಜವಾಗಿಯೇ ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ ಸೃಷ್ಟಿಗೆ ಕೈಹಾಕಿದರು. ಕಾರಂತರು ನಮಗೆ ನೀಡಿರುವ ವಿಜ್ಞಾನ ಸಾಹಿತ್ಯವನ್ನು ಕುರಿತು ತಿಳಿದುಕೊಳ್ಳುವ ಮೊದಲು ಅವರು ಮಾಡಿರುವ ಈ ಕೃಷಿಯ ಹಿನ್ನೆಲೆಯನ್ನು ತಿಳಿದುಕೊಳ್ಳುವುದು ಮುಖ್ಯ.

ಖಗೋಳ ವಿಜ್ಞಾನ, ಭೌತವಿಜ್ಞಾನ, ಜೀವವಿಜ್ಞಾನ, ಇಂಜಿನಿಯರಿಂಗ್ ಮುಂತಾದ ವಿವಿಧ ವಿಜ್ಞಾನ ವಿಭಾಗಗಳಿಗೆ ಸೇರಿದಂತೆ ಇನ್ನೂರಕ್ಕೂ ಹೆಚ್ಚು ಲೇಖನಗಳು ಬಾಲಪ್ರಪಂಚದಲ್ಲಿವೆ. ಉಪಯುಕ್ತ ಚಿತ್ರಗಳು ಹೇರಳವಾಗಿದ್ದು, ಗ್ರಂಥದ ಆಕರ್ಷಣೀಯತೆಯನ್ನು ಹೆಚ್ಚಿಸಿವೆ. ಅಂದಿನ ಪರಿಸ್ಥಿತಿಯಲ್ಲಿ ಕನ್ನಡದ ಪ್ರಕಟಣೆಗಳ ಇತಿಹಾಸದಲ್ಲಿ ಅದೊಂದು ಮೈಲಿಗಲ್ಲಾಯಿತು. ಆಧುನಿಕ ವಿಜ್ಞಾನದ ವಿಷಯಗಳನ್ನು ಅಷ್ಟು ವ್ಯಾಪಕವಾಗಿ ಅದುವರೆಗೂ ಯಾರು ಬರೆದಿರಲಿಲ್ಲ.

ಕಾರಂತರು ಹಲವಾರು ವಿಜ್ಞಾನದ ಪುಸ್ತಕಗಳನ್ನು ಬರೆದಿದ್ದಾರೆ. ವಿದ್ಯಾರ್ಥಿಗಳಲ್ಲಿ ವಿಜ್ಞಾನವು ಆಕರ್ಷಕ ವಿಷಯವಾಗಬೇಕೆಂದು ವಿಷಯಾ ನಿರೂಪಣೆಯು ತಿಳಿಯಾಗಿದ್ದು ಹೇರಳವಾದ ರೇಖಾಚಿತ್ರಗಳನ್ನು ಒಳಗೊಂಡಿವೆ. ವಿಜ್ಞಾನದ ಪಾಠಗಳು ಮನದಟ್ಟಾಗುವಂತೆ ಸಹಕಾರಿಯಾಗಿವೆ. ಹಿಂದೆ ಇಂಥಹ ವಿಷಯಗಳಲ್ಲಿ ಕುತೂಹಲ ಇರಲಿಲ್ಲ. ಸಾಮಾನ್ಯ ತಿಳಿವೂ ಇರಲಿಲ್ಲ. ಆದರೆ ಇಂದು ನಾವು ನಮ್ಮ ಸುತ್ತಮುತ್ತಲಿನ ಪರಿಸರವನ್ನು ಪ್ರಾಣಿ–ಪಕ್ಷಿ ಸಂಕುಲವನ್ನು ಗಮನಿಸುತ್ತಾ ಬರುತ್ತಿದ್ದೇವೆ. ಹಲವಾರು ಪ್ರಾಣಿ ಸಂಕಲುಗಳು ನಾಶವಾಗುತ್ತಿವೆ ಎಂಬ ಅರಿವಿದೆ. ಈ

ಪರಿಸರದ ಹಾನಿಯಿಂದ ನಮ್ಮ ಕಣ್ಣ ಮುಂದೆಯೇ ಆಗುತ್ತಿರುವ ಈ ಜೀವಹಾನಿಗೆ ಹೊಣೆ ಯಾರು ಎಂಬುದನ್ನು ತಿಳಿದು ವರ್ತಿಸಬೇಕಾಗುತ್ತದೆ. ಅಂದಿನ ಕಾಲದಲ್ಲಿ ಕನ್ನಡದಲ್ಲಿ ಆಸಕ್ತಿ ಹುಟ್ಟಿಸುವ ಅಧ್ಯಯನ ಕೋಶಗಳ ಕೊರತೆಯನ್ನು ಮನಗಂಡ ಕಾರಂತರು ಬಾಲಪ್ರಪಂಚ ಮತ್ತು ವಿಜ್ಞಾನ ಪ್ರಪಂಚ ಸಂಪುಟಗಳನ್ನು ಬರೆದು ಪ್ರಕಟಿಸಿದರು.

**ಬಾಲ ಪ್ರಪಂಚ**

ಶಿವರಾಮ ಕಾರಂತರು ಮೊಟ್ಟ ಮೊದಲು ಬಹಳಷ್ಟು ಪ್ರಮಾಣದಲ್ಲಿ ವಿಜ್ಞಾನದ ವಿಷಯಗಳನ್ನು ಕುರಿತು ಬರೆದದ್ದು ಬಾಲಪ್ರಪಂಚದಲ್ಲಿ. ಮೂರು ಸಂಪುಟಗಳ ಈ ಬಾಲ ಪ್ರಪಂಚವು ಒಂದೊಂದು ಸಂಪುಟವೂ ಸುಮಾರು ಆರುನೂರು ಪುಟಗಳಷ್ಟಿದೆ. ಈ ಬೃಹತ್ ಗ್ರಂಥ ಪ್ರಕಟವಾದುದ್ದು. ೧೯೩೬ರಲ್ಲಿ ಅದನ್ನು ಪ್ರಕಟಿಸಿದವರು ಬೆಂಗಳೂರಿನ ಸತ್ಯಶೋಧನ ಪ್ರಕಟಣ ಮಂದಿರದವರು. ಇದು ಕೇವಲ ವಿಜ್ಞಾನದ ವಿಷಯಗಳಿಗೆ ಮಾತ್ರ ಸಿಮೀತವಾಗಿಲ್ಲ. ಮಕ್ಕಳ ಶಿಕ್ಷಣಕ್ಕೆ ನೆರವಾಗುವ ಉದ್ದೇಶದಿಂದ ಮಾನವನ ಜ್ಞಾನಭಂಡಾರದ ವಿವಿಧ ಕ್ಷೇತ್ರಗಳಿಂದ ವಿಷಯವನ್ನು ಆಯ್ದು ಈ ಮೂರು ಸಂಪುಟಗಳಲ್ಲಿ ನೀಡಲಾಗಿದೆ. ಈ ಗ್ರಂಥದ ಮುನ್ನುಡಿಯಲ್ಲಿ ಕಾರಂತರು ಹೀಗೆ ವಿವರಿಸಿದ್ದಾರೆ.

> ನಿಜವಾದ ಶಿಕ್ಷಣದ ಕೆಲಸ ಮಕ್ಕಳ ತಲೆಗೆ ವಿಷಯಗಳನ್ನು ತುಂಬುವುದಲ್ಲ. ಮಕ್ಕಳ ಮನಸ್ಸಿನ ಹಸಿವನ್ನು ಹೆಚ್ಚಿಸಬೇಕು. ಅವರಲ್ಲಿ ನಿಜವಾದ ಜ್ಞಾನದ ತೃಷೆಯು ಉಂಟಾಗ ಬೇಕು. ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಮಕ್ಕಳ ಮನಸ್ಸನ್ನು ಅರಳಿಸುವ ಆಸೆ ಪ್ರಾಥಮಿಕ ಶಿಕ್ಷಣದಲ್ಲಿ ಕೈಗೂಡುವುದು ಕಷ್ಟ. ಅದಕ್ಕೆ ಕಾರಣ ವಿಶೇಷ ಶಿಕ್ಷಣ ಪಡೆಯದ ಶಿಕ್ಷಕರ ಕೈಯಲ್ಲಿ ಆ ಹಂತದ ಶಿಕ್ಷಣ ನಡೆಯಬೆಕಾಗಿದೆ. ಆ ಶಿಕ್ಷಕರೇ ಆಗಲಿ ಹೈಸ್ಕೂಲು ಮಟ್ಟದ ವಿದ್ಯಾರ್ಥಿಗಳೇ ಆಗಲಿ ತಮ್ಮ ಸಾಮಾನ್ಯ ತಿಳುವಳಿಕೆಯನ್ನು ಹೆಚ್ಚಿಸಿಕೊಳ್ಳಲು ಇಚ್ಛಿಸಿದರೆ ಅವರಿಗೆ ಕನ್ನಡದಲ್ಲಿ ಗ್ರಂಥಗಳಿಲ್ಲ. ಇಂಗ್ಲಿಷ್‌ನಲ್ಲಿ 'The book of knowledge, world of wonders picforial knowledge'ನಂತ ದೊಡ್ಡ ಗ್ರಂಥಗಳಿವೆ. ಎಂಥ ಶತಮೂರ್ಖನನ್ನು ಆಕರ್ಷಿಸಬಲ್ಲ ನೂರಾರು ಗ್ರಂಥಗಳಿವೆ. ಕನ್ನಡದಲ್ಲೇನು?[೨]

ಈ ಸವಾಲನ್ನು ಎದುರಿಸಲು ನಿಶ್ಚಯಿಸಿದ ಕಾರಂತರು ಬಾಲ ಪ್ರಪಂಚವನ್ನು ಬರೆಯುವ ಕಾರ್ಯವನ್ನು ಕೈಗೊಂಡರು.

ಪ್ರಪಂಚದ ಅನೇಕ ರಹಸ್ಯಗಳ ಶೋಧನೆಗೆ ಇಂದು ಆಧುನಿಕ ವಿಜ್ಞಾನ ನೆರವಾಗಿದೆ. ಇಂಥ ವೈಚಾರಿಕ ಉಪಯೋಗ ಮತ್ತು ಔದ್ಯಮಿಕ ಪ್ರಗತಿಯ ಅರಿವು ಜನ ಸಾಮಾನ್ಯರಿಗೆ ಅವಶ್ಯವಿಲ್ಲವೆ? ಎಂಬುದು ಕಾರಂತರ ಪ್ರಶ್ನೆಯಾಗಿತ್ತು. ಆದರೆ ಆಗಿನ್ನು ವಿಜ್ಞಾನ ಕೃತಿಗಳು ಕನ್ನಡದಲ್ಲಿರಲಿಲ್ಲ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಇಂತಹ ಜ್ಞಾನವನ್ನು ತುಂಬುವ ವಿಜ್ಞಾನದ ಪುಸ್ತಕಗಳು

ಹಲವಾರು ರಚನೆಯಾಗಿದ್ದವು. ವಿವಿಧ ವಯಸ್ಸಿನ ಮಕ್ಕಳ ಅಭಿರುಚಿಗೆ ತಕ್ಕಂತೆ ಪುಸ್ತಕಗಳಿದ್ದವು. ಆದರೆ ನಮ್ಮಲ್ಲಿ ಪ್ರೌಢ ಶಾಲೆಗಳಲ್ಲಿ ಮಕ್ಕಳ ಆಸಕ್ತಿಯ ತಕ್ಕಂತೆ ವಿಚಾರ ಗ್ರಂಥಗಳು ಇರಲಿಲ್ಲ. ಇದನ್ನು ಮನಗಂಡ ಕಾರಂತರು ಬಾಲಪ್ರಪಂಚ ಎಂಬ ಮೂರು ಸಂಪುಟಗಳು, ಅದ್ಭುತ ಜಗತ್ತು ಎರಡು ಸಂಪುಟಗಳನ್ನು ಮಕ್ಕಳಿಗಾಗಿಯೆ ರಚಿಸಿದರು.

ಶಿವರಾಮ ಕಾರಂತರು ಬಾಲ ಪ್ರಪಂಚವನ್ನು ಮಕ್ಕಳ ಹಸಿವನ್ನು ಹೆಚ್ಚಿಸುವ ದೊಡ್ಡ ಸಾಹಸ ಎಂದು ಕರೆದಿದ್ದಾರೆ. ಏಕೆಂದರೆ ಮಕ್ಕಳಿಗೆ ವಿಜ್ಞಾನದ ವಿಷಯಗಳನ್ನು ಕುರಿತು ತಿಳಿಸುವ ಪುಸ್ತಕಗಳು ಅದರಲ್ಲೂ ಕನ್ನಡದಲ್ಲಿ ಲಭ್ಯವಿರಲಿಲ್ಲ. ಇದನ್ನು ಮನಗಂಡ ಕಾರಂತರು ಅಂದಿನ ಕಾಲದಲ್ಲಿ ಶಿಕ್ಷಣವೆನ್ನುವುದು ಮಕ್ಕಳಿಗೆ ಕೇವಲ ಓದು ಬರಹ ಗಣಿತವನ್ನು ಮಾತ್ರ ಕಲಿಸಲಾಗುತ್ತಿತ್ತು. ಮಕ್ಕಳ ಮನಸ್ಸಿನ ಹಂಬಲವನ್ನು ಅರಳಿಸುವ ಯಾವುದೇ ಪ್ರಯತ್ನಗಳು ನಡೆಯುತ್ತಿರಲಿಲ್ಲ. ಮಕ್ಕಳಲ್ಲಿ ವಿವಿಧ ವಿಷಯಗಳನ್ನು ಕುರಿತು ಉತ್ಸಾಹ, ಆಸಕ್ತಿಯನ್ನು ಪ್ರೇರೆಪಿಸುವಂತಹ ಉತ್ತಮವಾದ ಪುಸ್ತಕಗಳು ಆಂಗ್ಲ ಭಾಷೆಯಲ್ಲಿ ಲಭ್ಯವಿದ್ದವು. ಸಾಕಷ್ಟು ವಿಷಯಗಳಿಂದ ಉತ್ತಮವಾದ ಸುತ್ತಿದ್ದವು. ಆದರೆ ಕನ್ನಡ ಭಾಷೆಯಲ್ಲಿ ವೈಜ್ಞಾನಿಕ ವಿಷಯಗಳಿಗೆ ಸಂಬಂಧಪಟ್ಟಂತೆ ಯಾವುದೆ ರೀತಿಯ ಪುಸ್ತಕಗಳು ಇರಲಿಲ್ಲ. ಇದರಿಂದ ಕಾರಂತರು ಬಾಲ ಪ್ರಪಂಚವನ್ನು ಬರೆಯಲು ತೀರ್ಮಾನಿಸಿದರು. ಮಕ್ಕಳಿಗೆ ವೈಜ್ಞಾನಿಕ ತಿಳಿವನ್ನು ನೀಡಲು ಕಾರಂತರು ಬಾಲ ಪ್ರಪಂಚವೆಂಬ ವಿಶ್ವಕೋಶವನ್ನು ರಚಿಸಿದರು. ಮೂರು ಸಂಪುಟಗಳಲ್ಲಿ ಪ್ರಕಟವಾಗಿರುವ ಈ ಗ್ರಂಥವು ಪ್ರತಿಯೊಂದು ಸಂಪುಟವು ೬೦೦ ಪುಟಗಳನ್ನು ಹೊಂದಿದೆ. ಇದರಲ್ಲಿ ಪ್ರಕೃತಿ ವಿಜ್ಞಾನ, ಸಾಹಿತ್ಯ, ಕಲೆ, ಇತಿಹಾಸ ರಂಗ ಭೌತ ವಿಜ್ಞಾನ, ಯಂತ್ರ ಯುಗ ಹೀಗೆ ಆಯಾ ವಿಷಯಗಳನ್ನು ಕುರಿತು ಹಲವಾರು ಲೇಖನಗಳಿವೆ. ವಿದ್ಯಾರ್ಥಿಗಳಿಗೆ ವಿಷಯವು ಸುಲಭವಾಗಿ ಮನ ಮುಟ್ಟುವಂತೆ ಸರಳವಾದ ನಿರೂಪಣೆಯಲ್ಲಿ ರಚಿಸಿದ್ದಾರೆ. ಮಾಹಿತಿ ಜ್ಞಾನದ ಇಂತಹ ವಿಶ್ವಕೋಶಗಳನ್ನು ಅತ್ಯಂತ ನೀರಸವೂ ಕ್ಲಿಷ್ಟವೂ ಆಗಿರುವಂಥ ವಿಜ್ಞಾನದಂಥ ವಿಷಯಗಳನ್ನು ನಿರೂಪಿಸುವಾಗಲೂ ಆಕರ್ಷಣೀಯವಾಗಿವೆ. ಮುಖ್ಯವಾಗಿ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ಬಾಲ ಪ್ರಪಂಚವನ್ನು ಬರೆದಿರುವುದರಿಂದ ಅವರ ಆಸಕ್ತಿ ಅಭಿರುಚಿಗಳಿಗೆ ಅನುಗುಣವಾಗಿ ವಿಷಯಗಳನ್ನು ಕ್ರಮಬದ್ಧವಾಗಿ ವಿವರಿಸಲಾಗಿದೆ. ಪ್ರಕೃತಿ ವಿಜ್ಞಾನದಲ್ಲಿ ಆಕಾಶದ ಅದ್ಭುತಗಳಿಂದ ತೊಡಗಿ ನಕ್ಷತ್ರ, ಭೂಮಿ, ಚಂದ್ರ, ಜೀವ, ನಾಡುಗಳು ನೆಲೆವಿಡುಗಳು ಮುಂತಾದ ವಿಷಯಗಳನ್ನು ಒಳಗೊಂಡಿವೆ. ಸಾಹಿತ್ಯ ಕಲೆಯಲ್ಲಿ ಕಾಣುವ ಕಣ್ಮನಗಳು, ಗಾಣ ತಿರುಗಿಸುವ ನಾಯಿ, ಇತಿಹಾಸ ಯುಗ ಭೌತ ವಿಜ್ಞಾನ ಅಧ್ಯಾಯದಲ್ಲಿ ನೀರಿನ ಅಪಾರ ಶಕ್ತಿ, ಗಾಳಿ, ಪಂಪುಗಳು, ಗುರುತ್ವಶಕ್ತಿ, ಮುಳುಗಾಟ, ಸಮಯದ ಅಳತೆ ಪರಿವರ್ತನೆಗಳು ಜಲಜನಕ, ಆಮ್ಲಜನಕ ಮೊದಲಾದ ವಿಷಯಗಳನ್ನು ಮಕ್ಕಳಿಗೆ ಅರ್ಥವಾಗುವಂತೆ ಸರಳವಾದ ಭಾಷೆಯಲ್ಲಿ ರಚಿಸಿದ್ದಾರೆ.

ಆಕಾಶವನ್ನು ರಾತ್ರಿ ಕಾಲ ಬರಿಗಣ್ಣಿನಿಂದ ನಾವು ನೋಡಿದರೆ ೫೦೦೦ಕ್ಕೂ ಮಿಕ್ಕಿದಷ್ಟು ತಾರೆಗಳು ನಮಗೆ ಕಾಣಿಸುವುವು. ನಮ್ಮ ದೃಷ್ಟಿಯ ಶಕ್ತಿಯನ್ನು ದೂರದರ್ಶಿಗಳು ಇನ್ನೂ ಹೆಚ್ಚಿಸಿವೆ. ಅವುಗಳ ಸಹಾಯದಿಂದ ೩,೦೦೦ ಮಿಲಿಯಕ್ಕೂ ಹೆಚ್ಚಿನ ಸೂರ್ಯರು ನಮ್ಮ ವಿಶ್ವದಲ್ಲಿರುವವೆಂದು ಕಂಡು ಹಿಡಿದಿದ್ದಾರೆ. ಬರಿಗಣ್ಣಿಗೆ ಇವುಗಳಲ್ಲಿ ಹೆಚ್ಚಿನವು ಕಾಣಿಸುವುದಿಲ್ಲ. ಕಾಣಿಸುವು ದಾದರೂ ತೀರಾ ಸಣ್ಣ ಚುಕ್ಕಿಗಳಂತೆ ಕಾಣುವುವು. ಒಂದು ನಕ್ಷತ್ರವು ಇನ್ನೊಂದಕ್ಕೆ ಬಲು ಸಮೀಪವಾಗಿರುವಂತೆ ತೋರುವುದು. ನಿಜಕ್ಕೂ ಹಾಗಲ್ಲ ನಮ್ಮ ಭೂಮಿಗಿಂತ ೧,೩೦೦ ಪಾಲಿನಷ್ಟು ದೊಡ್ಡದಾಗಿರುವ ಗುರು ಗ್ರಹ ಭೂಮಿಗೆ ಅತೀ ಸಮೀಪವಾಗಿರುವಾಗ ೩೬೯,೦೦೦,೦೦೦ ಮೈಲುಗಳ ದೂರದಲ್ಲಿರುವುದು. ಅದರಿಂದಾಗಿ ಅಷ್ಟು ಚಿಕ್ಕದಾಗಿ ತೋರುವುದು.[೨೦]

ಹೀಗೆ ವಿಜ್ಞಾನದಂಥ ಕ್ಲಿಷ್ಟವಾದ ತಾಂತ್ರಿಕ ವಿಷಯವನ್ನು ತೀರಾ ಸರಳ ಪದಗಳಿಂದ ಆಸಕ್ತಿದಾಯಕವಾಗಿ ನಿರೂಪಿಸುವ ಕಲೆಯನ್ನು ಸಾಧಿಸಿದ್ದರು.

ಜೀವನ ಚರಿತ್ರೆಯ ಅಧ್ಯಾಯದಲ್ಲಿ ಡೇವಿಡ್ ಲಿವಿಂಗ್ ಸ್ಟೋನ್, ಕಾಳಿದಾಸ ಮೊದಲಾದವರ ವಿವರಣೆಯಿದೆ. ಯುರೋಪಿನ ಚಿತ್ರಕಲೆ, ಮೈಕಲ್ ಎಂಜಲೊ, ರೋಮ್ ನಗರ ಮುಂತಾದ ವಿಷಯಗಳನ್ನು ಕುರಿತು ಆಕರ್ಷಕವಾದ ವಿವರಣೆಯಿದೆ. ಕೊನೆಯಲ್ಲಿ ಮುಂದೆ ಸಂಭವಿಸಬಹುದಾದ ಯುದ್ಧಗಳು ಕುರಿತು ವಿವರಿಸಲಾಗಿದೆ. ಅರ್ಥ ಶಾಸ್ತ್ರದ ಗುರಿ ಸಂಪತ್ತು, ಅದರ ಉತ್ಪನ್ನ, ವ್ಯಯದ ಸ್ವಭಾವ, ಸಂಪತ್ತಿನ ವಿವರಣೆ, ಉತ್ಪನ್ನದಲ್ಲಿ ವ್ಯವಸ್ಥೆ ಇವು ಕೇವಲ ತಾಂತ್ರಿಕ ವಿಷಯ ನಿರೂಪಣೆಯ ವಿಧಾನಕ್ಕೆ ಸೀಮಿತಗೊಳ್ಳದೆ ಬದುಕಿನ ದಿನ ನಿತ್ಯದಲ್ಲಿ ನಡೆಯುವ ಆಪ್ತ ವಿಷಯಗಳಿಗೂ ಸಂಬಂಧಿಸಿವೆ. ಹೀಗೆ ಈ ಸಂಪುಟದಲ್ಲಿ ಪ್ರಕೃತಿ ವಿಜ್ಞಾನ, ನಾಡುಗಳು, ನೆಲೆ ವಿಡುಗಳು, ಸಾಹಿತ್ಯ ಕಲೆ, ಕ್ರೀಡಾವನ ಇತಿಹಾಸ ರಂಗ, ಭೌತ ವಿಜ್ಞಾನ, ಯಂತ್ರಯುಗ ವಿಶ್ವಕರ್ಮದ ಸಾಹಸ ಜೀವನ ಚರಿತ್ರೆ, ಉದ್ಯೋಗ ರಾಜ್ಯ ಇತ್ಯಾದಿ ಆಯಾ ವಿಷಯಗಳಿಗೆ ಸಂಬಂಧಿಸಿದಂತೆ ಹಲವಾರು ಲೇಖನಗಳಿವೆ.

ಬಾಲ ಪ್ರಪಂಚದ ಎರಡನೇಯ ಸಂಪುಟದಲ್ಲಿ ವಿಷಯ ವಿಂಗಡನೆಯನ್ನು ಮೊದಲನೆಯ ಸಂಪುಟದಂತೆಯೆ ವಿಭಾಗಿಸಿಕೊಂಡಿದ್ದಾರೆ. ಪ್ರಕೃತಿ ಅಧ್ಯಾಯನದಲ್ಲಿ ಉಲ್ಕೆಗಳು, ನಕ್ಷತ್ರಗಳು, ಅಳತೆ, ಸಂಚಾರಿ ಸಹೋದರರು, ಪ್ರಾಣಿಗಳ ಉಸಿರಾಟ, ಕ್ರಿಮಿಕಿಟಗಳ ಸಾಮ್ರಾಜ್ಯ, ಖಗೋಳ ವಿಜ್ಞಾನದ ಬಗ್ಗೆ ಸರಳವಾದ ನಿರೂಪಣೆಯಿದೆ. ಪ್ರೌಢ ಶಾಲಾ ವಿದ್ಯಾರ್ಥಿಗಳ ಗ್ರಹಣ ಶಕ್ತಿಗೆ ಅರ್ಥವಾಗುವಂತೆ ಅವರ ಅಸಕ್ತಿ, ಅಭಿರುಚಿ ಕುತೂಹಲಗಳಿಗೆ ಅನುಗುಣವಾಗಿ ನಿರೂಪಣೆ ಶೈಲಿ ರೂಪುಗೊಂಡಿದೆ. ವಯಸ್ಕರಿಗೂ ತಮ್ಮ ಜ್ಞಾನವನ್ನು ವಿಸ್ತರಿಸಿಕೊಳ್ಳಲು ಬಾಲ ಪ್ರಪಂಚವು ಸಹಕಾರಿಯಾಗಿದೆ. ಪ್ರಕೃತಿ ವಿಜ್ಞಾನದಲ್ಲಿ ನಮ್ಮ ಸಂಚಾರಿ ಸಹೋದರುರು, ಸುಂದರವಾದ

ಹಕ್ಕಿಗಳು ರಾಜನ ಸಂಸಾರ, ಪ್ರಾಣಿಗಳ ಆಹಾರ ಅಭ್ಯಾಸಗಳು ಎಂಬ ಲೇಖನಗಳು ಓದಲು ಆಸಕ್ತಿಯನ್ನು ಹುಟ್ಟಿಸುತ್ತವೆ. ನಾಡು ನೆಲೆವಿಡುಗಳ ಅಧ್ಯಾಯದಲ್ಲಿ ಪ್ರಪಂಚದ ಎಲ್ಲಾ ದೇಶಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಕೊರಿಯ, ಜಪಾನು, ಮರಳು ಗಾಡಿನ ಮಹಾರಾಜ್ಯದಲ್ಲಿ, ದಕ್ಷಿಣ ಯುರೋಪಿನಲ್ಲಿ ಉಷ್ಣವಲಯದ ಬೆಚ್ಚಗಿನ ನಾಡುಗಳು, ಬೆಚ್ಚಗಿನ ಸಾಗರ ತೀರಗಳು, ಆಸ್ಟ್ರೇಲಿಯದ ಜನರು, ಬೆಲ್ಜಿಯಂ ಉದ್ಯೋಗಶೀಲ ಜರ್ಮನಿ, ಮೊದಲಾದ ದೇಶಗಳ ವಿವರಣೆಯಿದೆ. ನಾಡಿನ ನಿಸರ್ಗ, ಜನ ಜೀವನ, ಅಲ್ಲಿನ ಸಂಸ್ಕೃತಿ, ಧರ್ಮ, ರಾಜಕೀಯ ವಿಚಾರಗಳನ್ನು ಬರೆದಿದ್ದಾರೆ. ಸಾಹಿತ್ಯಕಲೆಯಲ್ಲಿ, ನಂದಳಿಕೆ ಲಕ್ಷ್ಮೀನಾರಾಯಣಪ್ಪ, ಮಾಸ್ತಿ ವೆಂಕಟೇಶ ಅಯ್ಯಂಗರ ಪಿಕಾಸೊರವರ ವಿವರಣೆಯಿದೆ. ಸಂಗೀತ, ವಾದ್ಯ, ಪತ್ರಲೇಖನ, ಬಸವೇಶ್ವರನ ವಚನಗಳು, ಗೊಂಬೆಯ ಮನೆ, ಚಿತ್ರಕಲೆ, ಶಿಲ್ಪಕಲೆ, ಸಂಗೀತ, ನಾಟ್ಯಕಲೆ ಕುರಿತು ಲೇಖನಗಳಿವೆ. ಇದರಲ್ಲಿ ಭಾರತೀಯ ಶಿಲ್ಪಕಲೆ, ಮತ್ತು ವಿದೇಶಿ ಶಿಲ್ಪಕಲೆಗಳ ಲೇಖನಗಳಿರುವದರಿಂದ ಶಿಲ್ಪಕಲೆಗಳ ತುಲನಾತ್ಮಕ ಪರಿಚಯವುಂಟಾಗುತ್ತದೆ.

ಕ್ರೀಡಾವನದಲ್ಲಿ ಮಾದರಿ ಉಗಿ ತಿರ್ಬಾನ, ಕಣ್ಣಿನ ಭ್ರಮೆ, ಪ್ರಭಾಲೇಖನಗಳ ಕುರಿತು ಲೇಖನಗಳಿವೆ. ನಂತರ ಇತಿಹಾಸ ರಂಗ ಎಂಬ ಅಧ್ಯಾಯದಲ್ಲಿ ರೋಮಿನ ದುರಾಸೆ, ಕ್ರಿಸ್ತಯುಗ, ರೋಮ್ ರಾಜ್ಯದಲ್ಲಿ ಕ್ರಿಸ್ತ ಧರ್ಮದ ಪ್ರವೇಶ, ಪೂರ್ವ ದೇಶಗಳ ಪೂರ್ವ ದೇಶದ ರಾಜ್ಯಗಳಲ್ಲಿ, ಹರ್ಷ ವರ್ಧನ, ಪುಲಕೇಶಿ, ಪೋಪರ ಪ್ರಾಧಾನ್ಯ, ದಂಡಯಾತ್ರೆಗಳು ಮೊದಲಾದ ಐತಿಹಾಸಿಕ ಲೇಖನಗಳಿವೆ.

ಭೌತವಿಜ್ಞಾನಕ್ಕೆ ಸಂಬಂಧಿಸಿದಂತೆ ಕಾವಿನ ಕಾರುವಾರು, ಕೃತಕ ಗೊಬ್ಬರಗಳು, ಗಂಧಕ, ಬೆಳಕು, ರಂಜಕ, ಬೆಳಕಿನ ರೀತಿಗಳು, ಅಯಸ್ಕಾಂತ ಶಕ್ತಿ, ಬೋರಾನ್ ಸಿಲಿಕಾನ್ ಮೊದಲಾದ ಲೇಖನಗಳಿರುವದರಿಂದ ವಿದ್ಯಾರ್ಥಿಗಳಿಗೆ ಇಂದಿಗೂ ಇದು ಅತಿ ಉಪಯುಕ್ತ ಗ್ರಂಥವಾಗಿದೆ. ಭೌತ ವಿಜ್ಞಾನ ನಿರೂಪಣೆಯು ಅತ್ಯಂತ ಸರಳವಾಗಿದೆ. ಎಂಥಹ ವಿದ್ಯಾರ್ಥಿಗಳನ್ನು ಆಕರ್ಷಿಸಬಲ್ಲದು ಎಂದು ಮನದಟ್ಟಾಗುತ್ತದೆ. ರಸಾಯನ ಸೃಷ್ಟಿ ಕ್ರಮ ಎಂಬ ಅಧ್ಯಾಯದಲ್ಲಿ ರಾಸಾಯನದ ಪರಿವರ್ತನೆಗಳ ಕುರಿತು ಸರಳವಾದ ನಿರೂಪಣೆಯಲ್ಲಿ ವಿವರಿಸಿದ್ದಾರೆ. ವಿಜ್ಞಾನಿಯು ಸಾಧಿಸಿರುವ ಹೊಸ ಹೊಸ ಸೃಷ್ಟಿಗಳ ಹೊಳಹನ್ನು ನೀಡುತ್ತಾರೆ. ರಸಾಯನಗಳನ್ನು ಅವನು ಹೊಡೆದು ಅವುಗಳು ಉಂಟು ಮಾಡಿರುವ ಮೂಲಧಾತುಗಳನ್ನು ಬೇರೆ ಮಾಡಿ ಮತ್ತೆ ತನಗೆ ಬೇಕಾಗುವ ಪ್ರಮಾಣದಲ್ಲಿ ಸೇರಿಸುವುದರಿಂದ ಹೊಸ ವಸ್ತುಗಳನ್ನು ಮಾಡುತ್ತಾನೆ. ಸೃಷ್ಟಿಯಲ್ಲಿ ಉಪ್ಪು ಇದ್ದರೆ ಇವನು ಉಪ್ಪನ್ನು ಮಾಡುತ್ತಾನೆ. ಸಕ್ಕರೆಯನ್ನು ಮಾಡುತ್ತಾನೆ. ವಜ್ರವನ್ನು ಸಹ ಮಾಡಬಹುದೆಂದು ತೋರಿಸಿರುವನು. ಹೀಗೆ ರಾಸಯನಿಕ ವಿಜ್ಞಾನದ ಕುರಿತು ಆಸಕ್ತಿಯನ್ನು ಕೆರಳಿಸುತ್ತಾರೆ.

ಯಂತ್ರಯುಗದಲ್ಲಿ ಮನುಷ್ಯನು ಆರಂಭದಲ್ಲಿ ದೋಣಿಯ ಉಪಯೋಗ, ಮೊದಲಿನ ದೋಣಿಗಳು ಸಾಗರದ ದೆವ್ವಗಳು, ಹಡಗಿನ ಹೊಸ ಬಗೆಗಳು ಪ್ರಯಾಣಿಕ ಸೌಕರ್ಯಗಳು, ವಾಯು ವಿಹಾರಿಗಳು ಗಾಳಿ ಕೊಡೆ, ಜಲ ವಿಮಾನ ಮೊದಲಾದ ವಿಷಯಗಳನ್ನು ಕುರಿತು ಲೇಖನಗಳಿವೆ. ವಿಮಾನಗಳು ಹೇಗೆ ವಾಯುವಿನಲ್ಲಿ ಚಲಿಸಬಲ್ಲವು ಎಂಬ ಲೇಖನದ ನಿರೂಪಣೆಯು ಓದುಗರಲ್ಲಿ ಆಶ್ಚರ್ಯ ಮತ್ತು ಆಸಕ್ತಿಯನ್ನು ಹುಟ್ಟಿಸುತ್ತವೆ. ಹೀಗೆ ಕಾರಂತರು ಯಂತ್ರಗಳಂಥಹ ಕ್ಲಿಷ್ಟವಾದಂತಹ ವಿಷಯಗಳನ್ನು ಅತ್ಯಂತ ಸುಲಭವಾಗಿ ಗ್ರಹಿಸುಕೊಳ್ಳುವಂತೆ ನಿರೂಪಣೆ ಮಾಡುವುದರಲ್ಲಿ ಯಶಸ್ವಿಯಾಗಿದ್ದಾರೆ.

ಬಾಲಪ್ರಪಂಚದ ಮೂರನೆಯ ಸಂಪುಟದಲ್ಲಿ ವಿಷಯ ವಿಂಗಡನೆಯನ್ನು ಈ ಎರಡು ಸಂಪುಟಗಳಲ್ಲಿರುವಂತೆ ವಿಂಗಡಿಸಿದ್ದಾರೆ. ಪ್ರಕೃತಿ ವಿಜ್ಞಾನದಲ್ಲಿ ಮರುಭೂಮಿಯ ಪ್ರಾಣಿಗಳು, ಉನ್ನತ ಪ್ರದೇಶದ ಪ್ರಾಣಿಗಳು, ನಿಸರ್ಗದಲ್ಲೊಂದು ಹದ, ಖಗೋಳದ ಅಳತೆಗಳು, ಹಾರಟದ ವೈಚಿತ್ರ್ಯ, ಅರೋರ ದ್ರುವ ತೇಜಸ್ಸುಗಳು, ಕಳಚುಗೊಂಬುಗಳು, ಮೊದಲಾದ ಲೇಖನಗಳನ್ನು ವಿವರಿಸಿದ್ದಾರೆ. ನಾಡುಗಳು ನೆಲೆ ವೀಡುಗಳು ಅಧ್ಯಾಯದಲ್ಲಿ ಜೆಕೊಸ್ಲೊವಾಕಿಯ ಎಂಬ ನ್ಯೂಜಿಲೆಂಡ್ ಸಮಶೀತೋಷ್ಣ ಮಧ್ಯಪ್ರದೇಶಗಳು, ಶೀತ ಪ್ರದೇಶದ ಕಾಡುಗಳು, ರುಮೇನಿಯೂ, ಆಸ್ಟ್ರೀಯಾ ದೇಶ, ಆಕ್ಷಾಂಶ ರೇಖಾಂಶಗಳು, ಮಂಗೋಲಯ ಮೊದಲಾದ ಲೇಖನಗಳು ಆಯಾ ದೇಶದ ಮಾಹಿತಿಯನ್ನು ನೀಡುತ್ತವೆ.

ಸಾಹಿತ್ಯ ಮತ್ತು ಕಲೆ ಅಧ್ಯಾಯದಲ್ಲಿ ದೇಶಿಯ ಮತ್ತು ವಿದೇಶಿಯ ವಾಸ್ತುಶಿಲ್ಪಗಳ ಬಗ್ಗೆ ಚಿತ್ರಗಳ ಸಹಿತ ವಿವರಗಳಿವೆ. ಕಾರಂತರೇ ಬರೆದಿರುವ ಕವನ ನಾಟಕಗಳಿವೆ. ಭೌತ ವಿಜ್ಞಾನ ವಿಭಾಗದಲ್ಲಿ ವಿದ್ಯುತ್, ವಿಶ್ವಕಿರಣ ಐನ್‌ಸ್ಟೀನ್‌ರ ಸಾಪೇಕ್ಷವಾದ, ಸ್ಥಿತಿಸ್ಥಾಪಕತ್ವ ಇತ್ಯಾದಿಗಳ ಬಗ್ಗೆ ವೈಜ್ಞಾನಿಕ ಮಾಹಿತಿಗಳಿವೆ. ಬಾಲಪ್ರಪಂಚದ ಪ್ರತಿಯೊಂದು ಸಂಪುಟವು ವಸ್ತು ವಿಷಯ, ನಿರೂಪಣಾ ಶೈಲಿ, ಓದುಗರ ಮನಸ್ಸನ್ನು ಸೆಳೆಯುವಲ್ಲಿ ಸಫಲವಾಗಿದೆ. ಮುಖ್ಯವಾಗಿ ಪ್ರೌಢ ಶಾಲೆ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಬಾಲ ಪ್ರಪಂಚ ರೂಪುಗೊಂಡಿದ್ದರೂ ಹಿರಿಯರಿಗೂ ಪ್ರಪಂಚದಲ್ಲಿರುವ ವಿವಿಧ ವಿಷಯಗಳನ್ನು ತಿಳಿದುಕೊಳ್ಳಲು ಸಹಾಯಕವಾಗಿದೆ.

ಬಾಲಪ್ರಪಂಚವು ಖಗೋಳ, ಸೌರವ್ಯೂಹ, ಭೂವಿಜ್ಞಾನ, ಪ್ರಕೃತಿ ವಿಜ್ಞಾನ, ಭೂ ವಿಜ್ಞಾನ, ಜೀವಸೃಷ್ಟಿ, ಜೀವದ ನಾನಾ ಬಗೆಗಳು, ಜೀವ ವಿಕಾಸ, ಪ್ರಾಚೀನ ಜೀವ ರೂಪಗಳು ಭೂಮಿಯಲ್ಲಿ ಜೀವಿಗಳ ಹಂಚಿಕೆ, ಭೂಖಂಡಗಳ ಪರಿಚಯ, ನಾನಾದೇಶಗಳ ಜನಗಳ ಪರಿಚಯ ಸಸ್ಯಜೀವಿನ, ಸಸ್ಯವರ್ಗಗಳು, ಮನುಷ್ಯನ ವಿವಿಧ ಕಸುಬುಗಳು, ಕಲೆ, ಕಲೋಪಾಸನೆ,

ಸಾಹಿತ್ಯ, ಸಂಗೀತ, ಸಂಗೀತ ಸಾಹಿತ್ಯಗಳ ನಾನಾ ಪ್ರಕಾರಗಳು ಯಂತ್ರ, ತಂತ್ರ, ವಿದ್ಯೆ ತಂತ್ರ ಜಗತ್ತಿನ ಅದ್ಭುತಗಳು, ಪ್ರಾಪಂಚಿಕ ಇತಿಹಾಸದ ರೂಪರೇಷೆಗಳು, ರಾಜಕೀಯ ಯುದ್ಧಗಳು ಧರ್ಮ ಪ್ರವೃತ್ತಿ ಸಾಗರಗಳು, ನಾಗರಿಕ ಜೀವನ, ಹವಾಶಾಸ್ತ್ರ, ಮೊದಲಾದ ವಿಚಾರಗಳ ಮೇಲೆ ಮೂರು ಭಾಗಗಳಲ್ಲಿ ಲೆಖನಗಳಿವೆ. ಮೊದಲ ಭಾಗದಲ್ಲಿ ಒಂದು ವಿಚಾರದ ರೂಪು ರೇಷೆಗಳನ್ನು ಪ್ರಸ್ತಾಪಿಸಿದ್ದಾರೆ. ಇಷ್ಟು ವಿಚಾರಗಳ ಮೇಲೆ ವಿವಿಧ ಶಾಸ್ತ್ರಗಳ ಮೇಲೆ ಸಾಹಿತ್ಯ ಸಂಗೀತ ನಾನಾ ಪ್ರಕಾರಗಳನ್ನು ಕನ್ನಡದಲ್ಲಿ ರಚಿತವಾದ ಮೊದಲ ಸಂಪುಟವಾಗಿದೆ. ಇಷ್ಟೇ ಅಲ್ಲದೇ ಇಂಥ ವಿಶ್ವಕೋಶಗಳ ಮಾದರಿಯ ಇತರ ಬರಹಗಳನ್ನು ಕನ್ನಡದಲ್ಲಿ ಬರೆದರು. ಸುಮಾರು ನಲ್ವತ್ತು ವರ್ಷಗಳಲ್ಲಿ ಇವರು ಬರೆದ ಬಾಲ ಪ್ರಪಂಚ, ವಿಜ್ಞಾನ ಪ್ರಪಂಚ, (ನಾಲ್ಕು ಭಾಗಗಳು ಮತ್ತು ಅದ್ಭುತ ಜಗತ್ತು (ಎರಡು ಭಾಗಗಳು) ಇವು ಕನನ್ನಡದ ವಿಶ್ವಕೋಶದ ಮಾದರಿಯಲ್ಲಿ ರಚಿತಗೊಂಡ ಮಾದರಿ ಗ್ರಂಥಗಳಾಗಿವೆ.

**ಬಾಲಪ್ರಪಂಚದ ವಿಶಿಷ್ಟತೆ**

ಬಾಲಪ್ರಪಂಚದಲ್ಲಿರುವ ಹಲವಾರು ವಿಷಯಗಳು ನೇರ ಭಾಷಾಂತರಗಳಲ್ಲ. ಇಂಗ್ಲಿಷ್ ಭಾಷೆಯ ವಿವಿಧ ಪುಸ್ತಕಗಳಿಂದ ವಿಚಾರಗಳನ್ನು ಸಂಗ್ರಹಿಸಿದ್ದರೂ ಕಾರಂತರು ಪ್ರತಿ ವಿಷಯದ ಮೇಲೂ ತನ್ನದೇ ಆದ ಸ್ವತಂತ್ರವಾದ ಲೇಖನವನ್ನು ಬರೆದಿದ್ದಾರೆ. ಇದರಲ್ಲಿನ ವಿಷಯ ನಿರೂಪಣೆಯ ಕ್ರಮವು ನೇರವಾಗಿದೆ ಮತ್ತು ಸ್ಪಷ್ಟವಾಗಿದೆ. ಪಾರಿಭಾಷಿಕ ಪದಗಳನ್ನು ಬಳಸದೆ ಸರಳವಾಗಿದೆ. ಉದಾಹರಣೆಗೆ ಬೆಳಕಿನ ರೀತಿಗಳು ಎಂಬ ಲೇಖನವನ್ನು ಗಮನಿಸಿದಾಗ

> ಸೂರ್ಯನು ನಮ್ಮ ಭೂಮಿಯಿಂದ ಸರಾಸರಿ ೯೨,೯೬೦,೦೦೦ ಮೈಲು (೧೪೯, ೫೯೧,೦೦೦) ಕಿ.ಮೀ.ಗಳ ದೂರದಲ್ಲಿರುವನಾದರೂ ಅವನಿಂದ ನಮಗೆ ಬೆಳಕು ಸಿಗಲು, ಅವನೆಂಥ ಉರಿಯ ಜ್ವಾಲೆಯಾಗಿರಬೇಡ! ಮಧ್ಯಾಹ್ನದಲ್ಲಿ ಬರಿಗಣ್ಣಿನಿಂದ ಅವನನ್ನು ನೋಡುವುದಕ್ಕೆ ಬರುವಂತಿಲ್ಲ. ನೀಲ ಕನ್ನಡಿಯೊಂದನ್ನು ಕಣ್ಣೆದುರು ಹಿಡಿದು ಅವನನ್ನು ಕಾಣಬೇಕು. ನಮ್ಮ ಸೃಷ್ಟಿಯ ಯಾವ ಬೆಳಕೂ ಸೂರ್ಯ ಬೆಳಕಿನ ಮುಂದಲ್ಲ. ನಮ್ಮ ಸೃಷ್ಟಿಯಲ್ಲಿ ಮನುಷ್ಯನು ನಿರ್ಮಿಸಿದ ಅತ್ಯಂತ ಪ್ರಕಾಶಮಾನ ಬೆಳಕೆಂದರೆ ಆರ್ಕ್ ದೀಪದ್ದು. ಸೂರ್ಯನ ಬೆಳಕು ಇದಕ್ಕಿಂತ ನಾಲ್ಕು ಪಾಲು ಹೆಚ್ಚಿರ ಬಹುದು ಎನ್ನುತ್ತಾರೆ.[೩೧]

ಇದರಲ್ಲಿ ಸಾಮಾನ್ಯನಿಗೂ ಸುಲಭವಾದ ಶೈಲಿಯಲ್ಲಿ ಕಾರಂತರು ನಿರೂಪಿಸಿದ್ದಾರೆ. ಕೈಗಾರಿಕೆಗೆ ಸಂಬಂಧಿಸಿದ ವಿಷಯದ ನಿರೂಪಣೆಯ ಶೈಲಿಯನ್ನು ಗಮನಿಸಬಹುದು. ಈ ನಿರೂಪಣೆಗಳಲ್ಲಿ ಶಬ್ದಗಳ ಆಡಂಬರವಿಲ್ಲ ಪಾರಿಭಾಷಿಕ ಪದಗಳಿಲ್ಲ. ಹೇಳುವ ವಿಷಯವನ್ನು ಅತೀ ವಿವರಣೆಗಳ ಪ್ರಯೋಗವಿಲ್ಲದೆ ನಿರೂಪಿಸಲಾಗಿದೆ. ಇಡೀ ಬಾಲಪ್ರಪಂಚದ ಕೃತಿಯಲ್ಲಿ

ಯಾವುದೇ ವಿಷಯವನ್ನು ನೋಡಿದರೂ ಇಷ್ಟೇ ಸರಳವಾದ ನಿರೂಪಣೆಗಳನ್ನು ಕಾಣಬಹುದು. ಸಾಧ್ಯವಿರುವಲ್ಲಿ ಚಿತ್ರಗಳನ್ನು ಒದಗಿಸಿ ವಿಷಯದ ಸ್ಪಷ್ಟತೆಗೆ ಅನುಕೂಲ ಮಾಡಿದ್ದಾರೆ.

**ಅದ್ಭುತ ಜಗತ್ತು**

ಕಾರಂತರ ಮನಸ್ಸು ಮಕ್ಕಳ ಮನಸ್ಸಿನಂತೆಯೇ ಹಂಬಲವುಳ್ಳದ್ದು. ಚಿಕ್ಕ ವಯಸ್ಸಿನ ಮಕ್ಕಳಿಗೆಂದೆ ಬರೆದಿರುವ ಈ ಪುಸ್ತಕವು ಮೊದಲನೆಯ ಭಾಗವು ಖಗೋಳ ಪ್ರವೇಶ ಆಕಾಶದ ವಿವಿಧ ಕಾಯಗಳ ವಿವರಗಳನ್ನು ಮಕ್ಕಳಿಗೆ ವರ್ಣಮಯ ಚಿತ್ರಗಳಿರುವ ಗ್ರಂಥ. ಇದರಲ್ಲಿ ಇಪ್ಪತ್ತೇಳು ನಕ್ಷತ್ರಗಳ ಅವುಗಳ ರಾಶಿಗಳ ಇತರ ಮುಖ್ಯ ನಕ್ಷತ್ರ; ದ್ವಂದ್ವ ನಕ್ಷತ್ರ, ಸೌರವ್ಯೂಹ, ಸೂರ್ಯನ ಕಲೆಗಳು, ಮೊದಲಾದವುಗಳನ್ನೆಲ್ಲಾ ವರ್ಣಮಯ ಚಿತ್ರಗಳೊಡನೆ ವಿವರಿಸಲಾಗಿದ್ದು ಚಿಕ್ಕಮಕ್ಕಳಿಗೆ ಈ ಪುಸ್ತಕವು ಅತ್ಯಂತ ಪ್ರಮುಖವಾದುದಾಗಿದೆ.

ಎರಡನೆಯ ಭಾಗದಲ್ಲಿ ಭೂಮಿಯ ವಿವಿಧ ಭಾಗಗಳನ್ನು ಕುರಿತು ವಿವರಣೆಯಿದೆ. ಭೂಮಿಯ ಸೃಷ್ಟಿ, ಇತರ ರಚನೆ, ವಿವಿಧ ಯುಗಗಳಲ್ಲಿ ಭೂಭಾಗಗಳಲ್ಲಿ ಕಂಡುಬಂದ ರೂಪಾಂತರಗಳು. ಇವನ್ನೆಲ್ಲಾ ಚಿತ್ರಪೂರ್ಣವಾಗಿ ವಿವರಿಸಲಾಗಿದೆ. ಭೂಮಿಯ ರೂಪಾಂತರ ಗಳನ್ನು ವಿವರವಾಗಿ ಒದಗಿಸಿದ್ದಾರೆ. ಇವೇ ಅಲ್ಲದೆ ಭೂಕಂಪ, ಜ್ವಾಲಾಮುಖಿಗಳು ವಿವಿಧ ಪರ್ವತಾವಳಿಗಳು, ಪರ್ವತಗಳ ಸಾಲುಗಳ ವೈವಿಧ್ಯ ವಿಕಾಸ ಮತ್ತು ರೂಪಾಂತರ ಸಾಗರಗಳಲ್ಲಿ ಜಲಪ್ರವಾಹಗಳು ಹವೆಯ ಕಾರ್ಯ ಪ್ರಾಚೀನ ಮತ್ತು ಆರ್ವಾಚೀನ ಯುಗಗಳು ಇವನ್ನೆಲ್ಲಾ ಕುರಿತು ಕಾರಂತರು ಸರಳವಾದ ಶೈಲಿಯಲ್ಲಿ ಸುಮಾರು ಹತ್ತು ವರ್ಷದ ಮಕ್ಕಳಿಗೆ ಸುಲಭವಾಗಿ ಅರ್ಥವಾಗುವಂತೆ ವಿವರಿಸಿದ್ದಾರೆ.

**೨. ವಿಜ್ಞಾನ ಪ್ರಪಂಚ**

ವಿಜ್ಞಾನವೆಂಬುದು ಮಾನವ ಪ್ರಯತ್ನಗಳ ಸಂಕೇತ. ವಿಜ್ಞಾನವು ನಾರಾರು ವರ್ಷಗಳಿಂದ ಮಾನವ ಜೀವನದ ಮೇಲೆ ಪ್ರಭಾವ ಬೀರುತ್ತಲೇ ಬಂದಿದೆ. ವೈಜ್ಞಾನಿಕ ಅರಿವಿನಿಂದಾಗಿ ಇಂದು ಮಾನವ ಹಲವಾರು ಮೂಢನಂಬಿಕೆಗಳು ದೂರಾಗಿವೆ. ವಿಧ್ಯಾರ್ಥಿಗಳಿಗೆ ವೈಜ್ಞಾನಿಕ ಶಿಕ್ಷಣವನ್ನು ಪ್ರಾಥಮಿಕ ಶಾಲೆಯಿಂದ ಒದಗಿಸಿಕೊಡಬೇಕೆಂದು ಕಾರಂತರ ಚಿಂತನೆಯಾಗಿತ್ತು. ವಿಜ್ಞಾನದ ಶಿಕ್ಷಣದಿಂದ ಮಕ್ಕಳಲ್ಲಿ ಕುತೂಹಲ, ಸೃಷ್ಟಿಶೀಲತೆ, ವಸ್ತುನಿಷ್ಠತೆ ಮತ್ತು ಪ್ರಶ್ನಿಸುವ ಸಾಮರ್ಥ್ಯವನ್ನು ಮಕ್ಕಳಲ್ಲಿ ಬೆಳೆಸುವಲ್ಲಿ ವೈಜ್ಞಾನಿಕ ಶಿಕ್ಷಣವು ಅತೀ ಮುಖ್ಯ ಪಾತ್ರ ವಹಿಸುತ್ತದೆ. ವಿಜ್ಞಾನದ ವಿಷಯವು ಅತ್ಯಂತ ಸರಳವೂ ಹೌದು ಅತ್ಯಂತ ಸಂಕೀರ್ಣವೂ ಹೌದು. ಇಂಥಹ ವಿಜ್ಞಾನವನ್ನು ಪ್ರಾಥಮಿಕ ಶಿಕ್ಷಣ ಹಂತದಲ್ಲಿ ಮಕ್ಕಳಿಗೆ ಕಲಿಸುವುದು ಹೇಗೆ? ವಿಜ್ಞಾನಕ್ಕೆ ಸಂಬಂಧಿಸಿ ದಂತೆ ಮುಖ್ಯವಾಗಿ ಅವರು ತಿಳಿದುಕೊಳ್ಳಬೇಕಾದುದೇನು ಎಂಬ ವಿಷಯವನ್ನು ಕುರಿತು ಕಾರಂತರು ತಿಳಿಸುತ್ತಾರೆ.

ಬಾಲಪ್ರಪಂಚ ಪ್ರಕಟವಾಗಿ ಇಪ್ಪತ್ತು ವರ್ಷಗಳ ನಂತರ ವಿಜ್ಞಾನ ಪ್ರಪಂಚ ಕೃತಿಗೆ ಕೈಹಾಕಿದರು. ಹೈಸ್ಕೂಲ್ ವಿದ್ಯಾರ್ಥಿಗಳು ಮತ್ತು ಸಾಮಾನ್ಯ ಓದುಗರಿಗಾಗಿ ವಿಜ್ಞಾನ ಪ್ರಪಂಚವನ್ನು ಐದು ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆ ಹಾಕಿಕೊಂಡರು. ಕಾರಂತರಿಗೆ ಬಾಲಪ್ರಪಂಚವನ್ನು ಮುದ್ರಿಸುವ ಕಾಲದಲ್ಲಿ ಪ್ರಕಾಶನ ಮತ್ತು ಮುದ್ರಣಗಳ ತೊಡಕು ತೊಂದರೆ ಮೊದಲಾದ ಕಷ್ಟನಷ್ಟಗಳೆನ್ನೆಲ್ಲಾ ಅನುಭವಿಸಿದ್ದರಿಂದ ವಿಜ್ಞಾನ ಪ್ರಪಂಚವನ್ನು ಕೊನೆಗೆ ಸಾಲವನ್ನು ಮಾಡಿ ಪುಸ್ತಕವನ್ನು ಪ್ರಕಟಿಸಲು ನಿರ್ಣಯಿಸಿದರು. ಒಂದು ಸಂಪುಟ ಪ್ರಕಟವಾದ ಮೇಲೆ ಜನರು ಅಥವಾ ಸರಕಾರ ಅದನ್ನು ಕಂಡು ಮೆಚ್ಚಿ ಒಂದಿಷ್ಟು ನೆರವನ್ನು ಕೊಡಬಹುದು ಎಂಬ ಭರವಸೆಯಿಂದ ವಿಜ್ಞಾನ ಪ್ರಪಂಚದ ಗ್ರಂಥಗಳನ್ನು ರಚಿಸಲು ಮುಂದಾದರು.

ಕಾರಂತರು ಈ ಯೋಜನೆಯ ಸಲುವಾಗಿ ಮೊದಲು ಅದಕ್ಕೆ ಬೇಕಾದ ಹಲವಾರು ಪುಸ್ತಕಗಳನ್ನೂ, ವಿಶ್ವಕೋಶಗಳನ್ನೂ ತಂದು ಅಧ್ಯಯನ ಮಾಡಿದರು. 'ಈ ಜಗತ್ತು' ಎಂಬುದು ಅದರ ಮೊದಲಿನ ಸಂಪುಟ, ಇದರಲ್ಲಿ ಖಗೋಳ ಮತ್ತು ಭೌತ ವಿಜ್ಞಾನ, ಸಾಗರ ಮತ್ತು ವಾತಾವರಣ ವಿಜ್ಞಾನಗಳನ್ನು ಕುರಿತು ಬರೆಯಲು ಯೋಚಿಸಿದರು. ಮೊದಲ ಸಂಪುಟವನ್ನು ೧೯೫೯ರಲ್ಲಿ ಪ್ರಕಟವಾಯಿತು. ಆರ್ಥಿಕ ತೊಂದರೆಯಿಂದ ನಾಲ್ಕು ಸಂಪುಟಗಳಲ್ಲಿ ಈ ಗ್ರಂಥವನ್ನು ಮುಗಿಸಿದರು. ಶಿವರಾಮ ಕಾರಂತರು ಕ್ರಮಬದ್ಧವಾದ ವಿಜ್ಞಾನ ಶಿಕ್ಷಣ ಪಡೆದು ಸಂಶೋಧನೆ ನಡೆಸಿರುವ ವಿಜ್ಞಾನಿಯಲ್ಲ. ವಿಜ್ಞಾನ ಬೋಧನೆಯನ್ನು ಉದ್ಯೋಗವಾಗಿ ಅವಲಂಬಿಸಿರುವ ಪ್ರಾಧ್ಯಾಪಕರೂ ಅಲ್ಲ. ಆದರೂ ನಮ್ಮ ನಾಡಿನ ಮಕ್ಕಳಿಗಾಗಿ ಜನಸಾಮಾನ್ಯರಿಗಾಗಿ ವಿಜ್ಞಾನ ಭಾಷೆಯಲ್ಲಿ ವಿಜ್ಞಾನದ ಬೇರೆ ಬೇರೆ ಕ್ಷೇತ್ರಗಳಿಗೆ ಸಂಬಂಧಿಸಿದ ವಿವಿಧ ವಿಷಯಗಳನ್ನು ಕುರಿತು ಅವರು ಬರೆದಿರುವಷ್ಟು ವಿಫುಲವಾಗಿ ಯಾವ ಸಾಹಿತಿಯೂ ಬರೆದಿಲ್ಲ. ನಿತ್ಯ ಜೀವನದಲ್ಲಿ ನಮ್ಮ ಸುತ್ತಮುತ್ತ ಕಾಣಸಿಗುವ ನೈಸರ್ಗಿಕ ವ್ಯಾಪಾರಗಳು ಸಸ್ಯ ಮತ್ತು ಪ್ರಾಣಿ ಜೀವನ ಆಕಾಶದಲ್ಲಿ ಕಾಣುವ ಗ್ರಹನಕ್ಷತ್ರಾದಿಗಳ ಮುಂತಾದವುಗಳ ಬಗ್ಗೆ ಚಿಕ್ಕ ಮಕ್ಕಳ ಕುತೂಹಲವನ್ನು ಕೆರಳಿಸುವ ಪ್ರಶ್ನೆಗಳನ್ನು ಎತ್ತಿಕೊಂಡು ಮಕ್ಕಳ ಭಾಷೆಯಲ್ಲಿ ಸರಳ ವಿಜ್ಞಾನ ಸಾಹಿತ್ಯವನ್ನು ರಚಿಸಿದ್ದಾರೆ. ವಯಸ್ಕರಾದ ಆದರೆ ತಜ್ಞರಲ್ಲದ ಜನ ಸಾಮಾನ್ಯರಿಗಾಗಿ ಖಗೋಳ ವಿಜ್ಞಾನ, ಭೂ ವಿಜ್ಞಾನ, ಜೀವ ವಿಜ್ಞಾನಗಳ ವಿಷಯವಾಗಿ, ಅನುವಂಶಿಕತೆ, ವಿಕಾಸವಾದ, ಸಾಪೇಕ್ಷವಾದಗಳ ವಿಷಯವಾಗಿ ಅನ್ವಯಾತ್ಮಕ ವಿಜ್ಞಾನ ಶಾಖೆಗಳಾದ ಇಂಜನಿಯರಿಂಗ್, ಎಲೆಕ್ಟ್ರಾನಿಕ್, ವೈದ್ಯಶಾಸ್ತ್ರಗಳ ವಿಷಯವಾಗಿ ಜನಪ್ರಿಯ ವಿಜ್ಞಾನ ಸಾಹಿತ್ಯವನ್ನು ಒದಗಿಸಿದ್ದಾರೆ. ಸ್ವಂತ ಕೃತಿಗಳನ್ನಲ್ಲದೆ ಉತ್ತಮ ಇಂಗ್ಲಿಷ್ ಗ್ರಂಥಗಳನ್ನು ಅನುವಾದ ಮಾಡಿ ಕನ್ನಡ ಓದುಗರಿಗೆ ನೀಡಿದ್ದಾರೆ. ಕಾರಂತರು ಬದುಕಿನ ಎಲ್ಲಾ ಮುಖಗಳಲ್ಲಿಯೂ ಅಪರಿಮಿತವಾದ ಪ್ರಾಮಾಣಿಕಯುಳ್ಳ ಬುದ್ಧಿ ಜೀವಿ ಎಂದು ಹೇಳಬಹುದು. ಕಣ್ಣಿಗೆ ಕಾಣಿಸುವ ಕಿವಿಗೆ ಕೇಳಿಸುವ ಪ್ರತಿಯೊಂದು

ವಿಷಯದಲ್ಲಿಯೂ ಕುತೂಹಲ ಮತ್ತು ಆಸಕ್ತಿಯನ್ನು ಕೆರಳಿಸುವ ಪ್ರತಿಯೊಂದನ್ನು ಕೆದಕಿ ನೋಡಿ ಸಾಧ್ಯವಾದಷ್ಟು ತಿಳಿದುಕೊಳ್ಳಬೇಕೆಂಬ ಉತ್ಸಾಹ ಮತ್ತು ಛಲವನ್ನು ಹೊಂದಿರುತ್ತಿದ್ದರು. ಕಾರಂತರು **ಪಠ್ಯಪುಸ್ತಕಗಳು** ಎಂಬ ಲೇಖನದಲ್ಲಿ ವಿಜ್ಞಾನದ ಬರವಣಿಗೆಗಳನ್ನು ಬರೆಯಲು ಕಾರಣಗಳನ್ನು ತಿಳಿಸಿದ್ದಾರೆ. ಅಂದಿನ ಕಾಲದಲ್ಲಿ ಮಕ್ಕಳ ಬಗ್ಗೆ ಇಂತಹ ಸಾಕಷ್ಟು ಪುಸ್ತಕಗಳು ರಚನೆಯಾಗಿರಲಿಲ್ಲ.

> ಹಲವಾರು ಶಾಲೆಗಳಿಗೆ ಭೇಟಿ ನೀಡಿದಾಗ ಅಲ್ಲಿನ ಶಾಲೆಗಳ ದುರಾವಸ್ಥೆ ಹೇಳತೀರದು ಯಾವ ಉಪಾಧ್ಯಾಯನಿಗೂ ಅವನ ಪಠ್ಯಪುಸ್ತಕ ಅಥವಾ ಹಳೆ ದಿವಂಗತ ಪಠ್ಯಪುಸ್ತಕ ಬಿಟ್ಟರೆ ಅವನ ಹತ್ತಿರ ಎರಡನೇ ಪುಸ್ತಕ ಇಡೀ ಕಪಾಟಿನಲ್ಲಿರಲಿಲ್ಲ ಅವನು ಮಕ್ಕಳಿಗೆ ಹೇಳಿ ಕೊಡುವುದೇನನ್ನು.[೨೨]

ಉಪಾಧ್ಯಾಯರಿಗೆ ಯಾವುದೇ ತರಹ ಹೆಚ್ಚಿನ ಜ್ಞಾನಕ್ಕಾಗಿ ಪಠ್ಯಪುಸ್ತಕಗಳಿಲ್ಲದ ಕಾಲದಲ್ಲಿ ಸ್ವತಃ ತಾವೇ ವಿಜ್ಞಾನದ ಗ್ರಂಥಗಳನ್ನು ಬರೆಯಲು ಪ್ರಾರಂಭಿಸಿದರು. ಮುಖ್ಯವಾಗಿ ವಿಜ್ಞಾನದ ಬರವಣಿಗೆಗಳನ್ನು ಬರೆಯಲು ಕಾರಣ ಮಕ್ಕಳಿಗೆ ತಿಳಿಯಲಾರದ್ದನ್ನು ಹೇಳಿಕೊಡಬೇಕು ಎಂಬ ಉದ್ದೇಶವನ್ನು ಇಟ್ಟುಕೊಂಡಿದ್ದರು. ಹಲವಾರು ಪುಸ್ತಕಗಳನ್ನು ಅಧ್ಯಯನ ಮಾಡಿದರು ಕಾರಂತರು ಆಂಗ್ಲ ಭಾಷೆಯಲ್ಲಿ ವಿವಿಧ ರೀತಿಯ ಪುಸ್ತಕಗಳನ್ನು ಕಾದಂಬರಿಗಳಿಗಿಂತ ಚೆನ್ನಾಗಿ ಮೇಲಿನ ಮಟ್ಟದ ವಿಜ್ಞಾನದಲ್ಲಿ ಬರೆದಿರುವುದನ್ನು ಗಮನಿಸಿದ್ದರು. ಆದರೆ ಅದು ನಮ್ಮಲ್ಲಿಗೆ ಬರುವಾಗ ಎಲ್ಲ ಸತ್ವವನ್ನು ಕಳೆದುಕೊಂಡು ನಿರ್ಜೀವ ವಾಸ್ತವಂಶಗಳ ನಿರೂಪಣೆ ಆಗುವುದೇಕೆ ಎಂದು ಕಾರಂತರು ಚಿಂತಿಸತೊಡಗಿದರು. ಅವರು ಬಾಲ ಪ್ರಪಂಚ ಮತ್ತು ವಿಜ್ಞಾನ ಪ್ರಪಂಚವನ್ನು ಆದಷ್ಟು ಸುಲಭವಾಗಿ ಅರ್ಥಮಾಡಿಕೊಳ್ಳಲು ರಚಿಸಿದ್ದರು. ವಿಜ್ಞಾನದ ಪದಗಳಿಗೆ ಸಂಬಂದಿಸಿದಂತೆ ಓದುಗನು ಅರ್ಥಮಾಡಿಕೊಳ್ಳುವುದಕ್ಕೆ ತುಂಬಾ ಸುಲಭವಾದ ಪದಗಳನ್ನು ಬಳಸಿದ್ದಾರೆ. ಇಂತಹ ಪ್ರಯತ್ನದಲ್ಲಿ ಹೇಳುವ ವಿಷಯವನ್ನು ಎಷ್ಟು ಹೇಳಬೇಕು, ಎಷ್ಟು ಹೇಳಬಾರದು ಎಂಬುದನ್ನು ನಿಶ್ಚಯಿಸಿಕೊಂಡು ತುಂಬಾ ತಿಳಿಯಾದ ಭಾಷೆಯಲ್ಲಿ ನಿರೂಪಣೆ ಮಾಡಿದ್ದಾರೆ. ಇಂಗ್ಲಿಷ್ ಪಠ್ಯಪುಸ್ತಕಗಳನ್ನು ಗಮನಿಸಿದರೆ ಅವುಗಳಲ್ಲಿ ಎಂಥೆಂಥಹ ವಿಷಯಗಳಿವೆ. ಕಥೆಗಳು, ರಸವತ್ತಾದ ಪ್ರಶ್ನೋತ್ತರಗಳು ಆಕರ್ಷಣದಾಯಕವಾದ ವಿಷಯಗಳ ವಿವರಣೆಗಳು. ಈ ವಿಷಯಗಳ ಮೇಲಿನ ಪ್ರೇಮವೇ ಮಕ್ಕಳಿಗೆ ಓದನ್ನು ಪ್ರೇರೆಪಿಸುವಂತಿವೆ. ಪಠ್ಯಪುಸ್ತಕಗಳು ಆಯಾಯಾ ತರಗತಿಗೆ ಸರಿಯಾದ ಶೈಲಿಯಲ್ಲೂ ಇವೆ. ಆದರೆ ನಮ್ಮ ಜಿಲ್ಲೆಯ ಶಾಲೆಗಳಲ್ಲಿ ಉಪಯೋಗಿಸುವ ಪುಸ್ತಕಗಳಲ್ಲಿ ಈ ಆದರ್ಶವು ಕಾಣುವುದೇ ಇಲ್ಲ. ನಮ್ಮಲ್ಲಿರುವ ಪಠ್ಯ ಗ್ರಂಥಗಳನ್ನು ನೋಡಿದರೆ ಸರಿಯಾಗಿ ಉಪಾಧ್ಯಾಯರಿಗೂ ತಿಳಿಯುವ ಶಬ್ದಗಳಿಲ್ಲ. ಎಲ್ಲಿ ನೋಡಿದರೂ ಸಂಸ್ಕೃತದ ಶಬ್ದಗಳಿಂದ ತುಂಬಿ ಹೋಗಿವೆ. ಪ್ರಾಥಮಿಕ

ಶಾಲಾಮಕ್ಕಳಿಗೂ ಹೆಜ್ಜೆ ಹೆಜ್ಜೆಗೂ ಉಕ್ಕಿನ ಕಡಲೆಗಳನ್ನು ಅಗೆಯುವಂತಾಗುತ್ತದೆ. ನಮ್ಮ ಪಠ್ಯ ವಿಷಯಗಳು, ಪಠ್ಯಪುಸ್ತಕಗಳು ಒಮ್ಮೆ ಪರಿಶೋಧಿಸಲ್ಪಡಬೇಕು ಎಂದು ಕಾರಂತರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಶಿಕ್ಷಕನಾದವನು ಮಗುವಿನಲ್ಲಿ ಜ್ಞಾನವನ್ನು ನೇರವಾಗಿ ತುಂಬಿಸುವುದಕ್ಕೆ ಹೋಗದೆ ಅದು ಸಹಜವಾಗಿ ಬೆಳೆಯಲು ಬೇಕಾದ ಆವರಣವನ್ನು ಕಲ್ಪಿಸುವುದೂ ಹಾಗೂ ಮಗುವಿಗೆ ತಾನು ತಿಳಿಸುವುದಕ್ಕಿಂತ ತಿಳಿದುದನ್ನು ತಾನಾಗಿಯೇ ಹೇಳಬೇಕು ಎಂಬ ವಿಚಾರಗಳಲ್ಲಿ ಶಿಕ್ಷಕರು ಶ್ರಮ ಪಡಬೇಕು. ಶಾಲಾ ಆವರಣದಿಂದ ಮಕ್ಕಳ ಅಭಿರುಚಿ ಬೆಳೆಯುವುದಕ್ಕೆ ಆಸಕ್ತಿ ಹೆಚ್ಚಿಸುವುದಕ್ಕೆ ಪ್ರೇರಣೆ ನೀಡಬೇಕು. ಎನ್ನುವುದೇ ಕಾರಂತರ ಆಶಯವಾಗಿತ್ತು.

ಒಟ್ಟಿನಲ್ಲಿ ವಿಜ್ಞಾನ ಪ್ರಪಂಚದ ವ್ಯಾಪ್ತಿ ಬೆರಗುಗೊಳಿಸುವಷ್ಟು ವಿಸ್ತಾರವಾದದ್ದು. ಕೊನೆಯ ಸಂಪುಟದ ಮುನ್ನುಡಿಯಲ್ಲಿ ಕಾರಂತರು ಬರೆಯುತ್ತಿರುವ ವಿಷಯಗಳು ನನ್ನವಲ್ಲ ನಾನು ಈ ವಿಷಯಗಳಿಗಾಗಿ ಅನೇಕ ಗ್ರಂಥಗಳಿಗೆ ಲೇಖನಗಳಿಗೆ ಋಣಿಯು. ಇಲ್ಲಿರುವ ಎಲ್ಲವೂ ವಿವಿಧ ಮೂಲಗಳಿಂದ ಸಂಗ್ರಹಿಸಿದವುಗಳೇ. ಬರಿಯ ಅಂಚೆಯವನ ಕೆಲಸ ನನ್ನದು ಎಂದು ಹೇಳಿಕೊಂಡಿದ್ದಾರೆ.

ವಿಜ್ಞಾನವನ್ನು ಕನ್ನಡ ಭಾಷೆಯಲ್ಲಿ ಅರಳಿಸುವುದಕ್ಕೆ ಬೇಕಾದ ನಿರೂಪಣಾ ಸಾಮರ್ಥ್ಯವನ್ನು ಇಂದಿನ ವಿಜ್ಞಾನ ಪಠ್ಯಪುಸ್ತಗಳಲ್ಲಿ ಕಾಣಲಾರೆವು. ಆದರೆ ಶಿವರಾಮಕಾರಂತರು ತಮ್ಮ ವಿಜ್ಞಾನ ಪ್ರಪಂಚದಲ್ಲಿ ಸರಳ ನಿರೂಪಣೆಯ ಶೈಲಿಯನ್ನು ಕಾಣಬಹುದು.

ಕಾರಂತರ ಈ ವೈಜ್ಞಾನಿಕ ಬರಹಗಳು ಸ್ವಂತ ಕೃತಿಗಳಿಗೆ ಮಾತ್ರ ಸೀಮಿತವಾಗಿಲ್ಲ. ಅವರು ಅನುವಾದ ಕಾರ್ಯವನ್ನು ಮಾಡಿದ್ದಾರೆ. ೧೯೫೬ರಲ್ಲಿ 'ರಾಶೆಲ್ ಎಲ್ ಕಾರ್ಸನ್'ರವರ 'The sea around'ಎಂಬ ಕೃತಿಯನ್ನು ಅನುವಾದಿಸಿ ನಮ್ಮ ಸುತ್ತಲಿನ ಕಡಲು ಎಂಬ ಹೆಸರಿನಲ್ಲಿ ಪ್ರಕಟಿಸಿದರು. **ಮಾರ್ಗರೇಟ್ ಓಹೈಡ್**ರವರ 'Atoms today and tomorro' ಎಂಬ ಗ್ರಂಥವನ್ನು ಅನುವಾದಿಸಿ ಪರಮಾಣು ಇಂದು ನಾಳೆ ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಇವು ಎರಡು ಸ್ವಂತ ಪ್ರಕಟಣೆಗಳಾಗಿದ್ದವು. ಈ ಅನುವಾದಗಳಲ್ಲಿ ಸಾಗರಗಳ ಭೂವೈಜ್ಞಾನಿಕ ಇತಿಹಾಸ, ಸಾಗರ ವಾಸಿಗಳಾದ ಸಸ್ಯ ಮತ್ತು ಪ್ರಾಣಿಗಳು ಸಾಗರಗಳ ತಳದಲ್ಲಿರುವ ಭೂಭಾಗ ಮುಂತಾದ ವಿಷಯಗಳನ್ನೆಲ್ಲಾ ಅತ್ಯಂತ ರಮ್ಯವಾಗಿ ಸರಳ ಶೈಲಿಯಲ್ಲಿ ಅನುವಾದಿಸಿದ್ದಾರೆ. ವಿಜ್ಞಾನ ಶಾಖೆಗಳಾದ ಜೀವ ವಿಜ್ಞಾನ, ಭೂ ವಿಜ್ಞಾನಗಳನ್ನು ಕುರಿತು ಅವರ ಬರಹಗಳು ಹೆಚ್ಚು ಶೋಭಿಸುತ್ತವೆ. ಪ್ರಾಣಿ ಮತ್ತು ಸಸ್ಯಜೀವನ ಭೂ ಇತಿಹಾಸಗಳ ವಿಷಯದಲ್ಲಿ ಓದುಗರ ಕುತೂಹಲ ಆಸಕ್ತಿಗಳನ್ನು ಕೆರಳಿಸುವುದರಲ್ಲಿ ಅವರು ಯಶಸ್ವಿಯಾಗಿದದಾರೆ. ಪ್ರೌಢ ವಿಜ್ಞಾನ

ವಿಷಯಗಳನ್ನು ಕುರಿತು ಕನ್ನಡದಲ್ಲಿ ಬರೆಯುವುದು ಸಾಧ್ಯವಿಲ್ಲವೆಂಬ ಅರ್ಥದಲ್ಲಿ ಕೂಗನ್ನು ಅಡಗಿಸಲು ಅದು ಸಹಕಾರಿಯಾಗಿದೆ. ವಿಷಯದ ಮೇಲಿನ ಪ್ರಭುತ್ವ, ತಿಳಿಸಬೇಕೆಂಬ ಅಭಿಲಾಷೆ ಈ ಎರಡೂ ಇದ್ದುದೇ ಆದರೆ ಭಾಷೆ ಅಡ್ಡಿ ಮಾಡದೆಂಬುದನ್ನು ಅವರ ಬರಹ ತೋರಿಸಿ ಕೊಟ್ಟಿದೆ.

ಈ ಸಂಪುಟದ ಬರವಣಿಗೆಯು ಮುಗಿದ ಮೇಲೆ ಇದಕ್ಕೆ ಬೇಕಾದ ಚಿತ್ರಗಳನ್ನು ಆಕೃತಿಗಳನ್ನು ಅವರೆ ಸ್ವತಃ ಬರೆಯುತ್ತಿದ್ದರು. ಈ ಸಂಪುಟಕ್ಕೆ ಬೇಕಾದ ಫೋಟುಗಳನ್ನು ದಿಲ್ಲಿ ಮತ್ತು ಮದ್ರಾಸಿನ ಸಂಸ್ಥೆಯವರು ಕಾರಂತರಿಗೆ ಅಪಾರವಾದ ನೆರವನ್ನು ಒದಗಿಸಿದರು. ಕೊನೆಗೆ ಈ ಜಗತ್ತು ಸಂಪುಟವು ಐದುನೂರು ಪುಟಗಳಲ್ಲಿ ಮುದ್ರಿಸಿದರು. ಆದರೆ ಈ ಪುಸ್ತಕಕ್ಕೆ ಹಾಕಿದ ಹಣ ತಿರುಗಿ ಬರುವುದು ಅಂದಿನ ಕಾಲದಲ್ಲಿ ತುಂಬಾ ಕಷ್ಟವಾಗಿತ್ತು. ಈ ಪುಸ್ತಕ ಖರೀದಿಗಾಗಿ ಕಾರಂತರ ಕೇಂದ್ರ ಸರಕಾರ, ರಾಜ್ಯ ಸರಕಾರಗಳಿಗೂ ಬಹಳಷ್ಟು ಅಲೆದಾಡಿದರೂ ಯಾವುದೇ ರೀತಿಯ ಪ್ರಯೋಜನವಾಗಲಿಲ್ಲ. ಕೊನೆಗೆ ವಿಜ್ಞಾನ ಮತ್ತು ಸಾಂಸ್ಕೃತಿಕ ಇಲಾಖೆಯಿಂದ ಐದು ಸಾವಿರ ರೂ.ಗಳ ಧನ ಸಹಾಯ ದೊರೆಯಿತು. ನಂತರದ ವರ್ಷಗಳಲ್ಲಿ ವಿಜ್ಞಾನ ಪ್ರಪಂಚದ ಎರಡನೆ, ಸಂಪುಟವಾದ ಜೀವ, ಜೀವನ ಎಂಬ ಸಂಪುಟವನ್ನು ರಚಿಸಿದರು. ಈ ಕೃತಿಯು ಜೀವ ವಿಜ್ಞಾನದ ವಿವಿಧ ಮುಖಗಳನ್ನು ಕುರಿತು ಹಲವಾರು ವಿಷಯಗಳನ್ನು ಒಳಗೊಂಡಿತ್ತು. ೧೯೬೧ರಲ್ಲಿ ಮೂರನೆಯ ಸಂಪುಟ 'ವಸ್ತು ಚೈತನ್ಯ' ಮತ್ತು ನಾಲ್ಕನೆಯ ಸಂಪುಟ ವಿಜ್ಞಾನ ಸಾಧನ ಎಂದು ನಾಲ್ಕು ಸಂಪುಟಗಳಿಗೆ ಮುಗಿಸುವ ನಿರ್ಣಯ ಮಾಡಿದರು. ಕಾರಂತರು ನಾಲ್ಕು ಸಂಪುಟಗಳನ್ನು ಬರೆದು ಮುಗಿಸುವ ಹೊತ್ತಿಗೆ ಹಲವಾರು ಸಾವಿರ ರೂಪಾಯಿಗಳಷ್ಟು ಸಾಲವಿತ್ತು. ಒಂದೊಂದು ಸಂಪುಟಕ್ಕೂ ಕೇವಲ ಇಪ್ಪತ್ತು ರೂಪಾಯಿಗಳ ಬೆಲೆ ಇಟ್ಟರೂ ಸಂಸ್ಥೆಗಳು ಅದನ್ನು ತೆಗೆದಕೊಳ್ಳಲು ಹಿಂದೇಟು ಹಾಕುತ್ತಿದ್ದವು. ಕರ್ನಾಟಕದಲ್ಲೆಲ್ಲಾ ಅಲೆದಾಡಿ ಹಲವಾರು ಶಾಲೆಗಳಿಗೆ ಭೇಟಿ ನೀಡಿ ವಿಜ್ಞಾನದ ಬರಹಗಳನ್ನು ಕುರಿತು ವಿವರಗಳನ್ನು ಒದಗಿಸಿದರೂ ಕೇವಲ ಒಂದೇ ಒಂದು ಶಾಲೆಯಿಂದ ಆ ಸಂಪುಟಗಳಿಗೆ ಬೇಡಿಕೆ ಬರಲಿಲ್ಲ. ಕಾರಂತರು ಯಾರ ಸಲುವಾಗಿ ಇಷ್ಟೆಲ್ಲವನ್ನು ಮಾಡಿದರೊ ಅವರಿಗೆ ಅದು ಬೇಡವಾಗದ ಅವರ ಮನಸ್ಸಿಗೆ ತೀರಾ ನೋವುಂಟಾಯಿತು. ಇದೇ ಸಮಯದಲ್ಲಿ ಕಾರಂತರ ಮಿತ್ರರು ಉಡುಪಿಯಲ್ಲಿ ಅವರಿಗೆ ಒಂದು ಉತ್ಸವವನ್ನು ಏರ್ಪಡಿಸಿದರು. ಇದೇ ಕಾಲಕ್ಕೆ ಕರ್ನಾಟಕ ಮತ್ತು ಮೈಸೂರು ವಿಶ್ವವಿದ್ಯಾಲಯಗಳು ಡಿ.ಲಿಟ್. ಪದವಿಯನ್ನು ಘೋಷಿಸಿದವು. ಬೇರೆ ನಗರಗಳಲ್ಲಿ ಕಾರಂತರಿಗೆ ಸನ್ಮಾನಗಳನ್ನು ಏರ್ಪಡಿಸಿ ನಿಧಿಯನ್ನು ಅರ್ಪಿಸಿದರು. ಈ ಹಣದಿಂದ ಪ್ರಕಾಶನದ ಸಾಲದ ಹೊರೆಯನ್ನು ಕಡಿಮೆ ಮಾಡಿಕೊಂಡರು. ಬಾಲ ಪ್ರಪಂಚ ಅರ್ಥಕೋಶ ಮತ್ತು ವಿಜ್ಞಾನ

ಪ್ರಪಂಚದಂತಹ ಕೆಲಸಗಳು ಅವರ ಬದುಕಿನ ಹಲವಾರು ವರ್ಷಗಳನ್ನು ಇದಕ್ಕಾಗಿ ಮುಡಾಪಿಗಿಟ್ಟರು. ಇಂಥಹ ಸಮಯದಲ್ಲಿ ಅವರು ಹೊರಗಿನ ಹಲವಾರು ಚಟುವಟಿಕೆಗಳನ್ನು ಬದಿಗೊತ್ತಿ ಈ ಕೆಲಸಗಳಲ್ಲೆ ಮಗ್ನರಾಗಿ ರುತ್ತಿದ್ದರು. ಮುಂದೆ ಕಾರಂತರು ಮಕ್ಕಳ ಸಲುವಾಗಿ ವೈಜ್ಞಾನಿಕ ದೃಷ್ಟಿಯಿಂದ ಪ್ರೇರೇಪಿಸುವ ಇಪ್ಪತ್ತಾನ್ನಲ್ಕು ಗ್ರಂಥಗಳನ್ನು ಬರೆಯುವ ಯೋಚನೆಯನ್ನು ಮಾಡಿದರು, ಈ ಯೋಜನೆಯ ಪ್ರಥಮ ಸಂಪುಟವು ನಾಲ್ಕು ಭಾಗಗಳಿಂದ ಕೂಡಿದ್ದು **ಅದ್ಭುತ ಜಗತ್ತು** ಎಂಬ ಗ್ರಂಥದಲ್ಲಿ ಮೊದಲ ಭಾಗ ಖಗೋಳ ವಿಜ್ಞಾನ, ಎರಡನೆಯದು ಭೂ ವಿಜ್ಞಾನ, ಮೂರನೆಯದು ಸಾಗರ ವಿಜ್ಞಾನ, ನಾಲ್ಕನೆಯದು ವಾತವಾರಣ ವಿಜ್ಞಾನ ಎಂದು ಈ ಪುಸ್ತಕವನ್ನು ಬರೆದು ಹಲವಾರು ರೇಖಾ ಚಿತ್ರಗಳನ್ನು ಒದಗಿಸಿದರು. ಖಗೋಳ ವಿಜ್ಞಾನದಲ್ಲಿ ನಡೆದ ಹಲವು ಸಂಶೋಧನೆಗಳ ವಿಚಾರವೂ ಈ ಪುಸ್ತಕದಲ್ಲಿದೆ. ಚಂದ್ರಲೋಕದ ಸಮೀಪದ ದೃಶ್ಯಗಳಿಂದ ತೊಡಗಿ ಹಲವಾರು ಚಿತ್ರಗಳನ್ನು ಕಾಣಬಹುದು.

ವಿಜ್ಞಾನದ ಪಠ್ಯಪುಸ್ತಕಗಳು ಕೇವಲ ಮಾಹಿತಿ ಸಂಗತಿಗಳ, ಸೂತ್ರ ಸಿದ್ಧಾಂತಗಳ ವಿವಿಧ ನಮೂನೆಯ ಉಪಕರಣಗಳನ್ನು ಪ್ರದರ್ಶಿಸುವುದಲ್ಲ. ವೈಜ್ಞಾನಿಕ ವಿಷಯಗಳನ್ನು ವಿಚಾರಗಳನ್ನು ತರ್ಕ ಬದ್ಧವಾಗಿ ಸಕಾರಣವಾಗಿ ಪ್ರಶ್ನೆಗಳನ್ನು ಕೇಳಿಕೊಂಡು ಉತ್ತರಗಳನ್ನು ಕಂಡುಕೊಳ್ಳುವ ಮಾರ್ಗ. ವಿಜ್ಞಾನವೆಂಬುದು ಒಂದು ಜೀವನ ಶೈಲಿ, ಹೀಗಾಗಿ ಶೋಧನೆಯ ಮಾರ್ಗವೆಂಬಂತೆ ಬೋಧಿಸಬೇಕು. ಈ ದೃಷ್ಟಿಯಿಂದ ಪರಿಶೀಲಿಸಿದಾಗ ಪಠ್ಯಪುಸ್ತಕದ ಬೋದನೆ, ನೀರಸ ಉಪನ್ಯಾಸ, ಪಠ್ಯದಲ್ಲಿರುವ ನಿರ್ದಿಷ್ಟ ಪ್ರಶ್ನೆಗೆ ಕಂಠಪಾಠ, ಇಂತಹ ಕ್ರಮದಿಂದ ವಿಜ್ಞಾನವೆಂದರೆ ಮಕ್ಕಳಿಗೆ ಕಲಿಯಲು ಆಸಕ್ತಿಯಿಲ್ಲದಂತಾಗಿದೆ. ವಿದ್ಯಾರ್ಥಿಗಳು ವಿಜ್ಞಾನವನ್ನು ಎಷ್ಟೇ ಓದಿದರೂ ಅವರಲ್ಲಿ ವೈಜ್ಞಾನಿಕ ಮನೋಭಾವ ಹೆಚ್ಚಾಗಿ ಬೆಳೆಯುವುದಿಲ್ಲ. ಆದುದರಿಂದ ಮುಖ್ಯವಾಗಿ ವಿಜ್ಞಾನದ ಶಿಕ್ಷಣವು ಕಲಿಸಬೇಕಾದ ಶಿಕ್ಷಕರು ತರಗತಿಗಳಲ್ಲಿ ಮತ್ತು ತರಗತಿಯ ಹೊರಗೆ ಹಲವಾರು ಬಗೆಯ ಪ್ರಯೋಗಗಳು, ಪ್ರಾತ್ಯಕ್ಷಿಕೆಗಳ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕು. ವಿದ್ಯಾರ್ಥಿಗಳೇ ಆಸಕ್ತಿಯಿಂದ ಇಂತಹ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಂತಾಗಬೇಕು. ಇಂತಹ ಚಟುವಟಿಕೆಗಳಲ್ಲಿ ಚರ್ಚೆ ಸಂವಾದಗಳನ್ನು ನಡೆಸುವಂತಾಗಬೇಕು. ಹಲವಾರು ಪ್ರಯೋಗಗಳು, ಪ್ರಾತ್ಯಕ್ಷಿಕೆಗಳು ಭೇಟಿಗಳು, ಹೊರಸಂಚಾರ, ಚಿತ್ರ ಪ್ರದರ್ಶನ ಪ್ರಶ್ನೋತ್ತರ ಇತ್ಯಾದಿಗಳ ಮೂಲಕ ವಿಜ್ಞಾನವನ್ನು ಜೀವಂತಗೊಳಿಸಬೇಕು. ಪ್ರತಿ ತರಗತಿಯಲ್ಲೂ ಮಕ್ಕಳು ಪ್ರಶ್ನೇ ಕೇಳಲು ಅವಕಾಶ ಗಳನ್ನು ಕಲ್ಪಿಸುವುದು, ವಿಜ್ಞಾನದ ಪುಸ್ತಕಗಳು ಪತ್ರಿಕೆಗಳು ಎಲ್ಲವೂ ಸುಲಭವಾಗಿ ಮಕ್ಕಳಿಗೆ ದೊರೆಯುವಂತೆ ಮಾಡುವುದು. ಪ್ರಾಥಮಿಕ ಹಂತದಲ್ಲಿ ವಿಜ್ಞಾನದ ಬೋಧನೆಯು ಪರಸ್ಪರ ಸಂಪರ್ಕದ ಕ್ರಿಯೆಯಾಗಬೇಕು. ಮಕ್ಕಳ ಬುದ್ಧಿಶಕ್ತಿ, ಚಿಂತನ ಶಕ್ತಿ, ಕುತೂಹಲ, ಪ್ರಶ್ನಿಸಿ ಉತ್ತರವನ್ನು ಹುಡುಕುವ ಪ್ರವೃತ್ತಿ ಬೆಳೆಯುವುದಕ್ಕೆ ಅವಕಾಶ ಮಾಡಿಕೊಡಬೇಕು.

ವಿಜ್ಞಾನದ ಅಧ್ಯಯನ ಸಾರ್ಥಕವಾಗುತ್ತದೆ. ವಿಜ್ಞಾನ ಸಾಕ್ಷರತೆಯನ್ನು ಮಕ್ಕಳಲ್ಲಿ ಬಿಂಬಿಸುವಲ್ಲಿ ಶಿಕ್ಷಕರು ಪ್ರಮುಖವಾಗಿ ಕಾರ್ಯ ನಿರ್ವಹಿಸಬೇಕು.

೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯು ಮಾಡಿರುವ ಶಿಫಾರಸ್ಸಿನ ಮೇರೆಗೆ ವಿಜ್ಞಾನ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಲು ವಿಜ್ಞಾನ ಶಿಕ್ಷಣ ಸುಧಾರಣೆಯ ಕಾರ್ಯಕ್ರಮವನ್ನು ೧೯೮೭-೮೮ರಲ್ಲಿ ಹಮ್ಮಿಕೊಳ್ಳಲಾಯಿತು. ಈ ಯೋಜನೆಯಂತೆ ಹಿರಿಯ ಪ್ರಾಥಮಿಕ ಶಾಲೆಗಳಿಗೆ ವಿಜ್ಞಾನದ ಉಪಕರಣಗಳನ್ನು ಒದಗಿಸುವುದು, ಜಿಲ್ಲಾಕೇಂದ್ರಗಳಲ್ಲಿ ವಿಜ್ಞಾನ ಶಿಕ್ಷಣಕ್ಕಾಗಿ ಸಂಪನ್ಮೂಲ ಕೇಂದ್ರಗಳ ಸ್ಥಾಪನೆ, ಬೋಧನಾ ಸಾಮಗ್ರಿಗಳ ತಯಾರಿ, ವಿಜ್ಞಾನ ಶಿಕ್ಷಕರ ತರಬೇತಿ, ಹೀಗೆ ಹಲವಾರು ಯೋಜನೆಗಳಿಗೆ ಕೇಂದ್ರ ಸರಕಾರ ಅನುದಾನವನ್ನು ಒದಗಿಸಿತು. ಅತ್ಯಲ್ಪ ವೆಚ್ಚವಾಗಿ ಅಥವಾ ವೆಚ್ಚರಹಿತವಾಗಿ ಸ್ಥಳೀಯ ನೆಲೆಯಲ್ಲಿ ವಿಜ್ಞಾನ ಉಪಕರಣಗಳ ಮತ್ತು ಬೋಧನಾ ಸಲಕರಣೆಗಳ ತಯಾರಿಗೂ ಆದ್ಯತೆಯನ್ನು ನೀಡಲಾಗಿದೆ. ಇಷ್ಟೆಲ್ಲಾ ಮಾಡಿದರೂ ವಿಜ್ಞಾನ ಶಿಕ್ಷಣ ಕ್ಷೇತ್ರದಲ್ಲಿನ ಸಮಸ್ಯೆಗಳು ಬಗೆಹರಿದಿಲ್ಲ. ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿಜ್ಞಾನವನ್ನು ಕಲಿಸುವ ಶಿಕ್ಷಕರ ವಿಜ್ಞಾನ ವಿಷಯಗಳಲ್ಲಿ ಜ್ಞಾನ ನಿರಾಶಾದಾಯಕವಾಗಿದೆ. ಇಂದಿಗೂ ಹಲವಾರು ಪ್ರಾಥಮಿಕ ಶಾಲೆಗಳಲ್ಲಿ ಪ್ರಯೋಗಾಲಯಗಳಾಗಲಿ, ವಾಚನಾಲಯಗಳಾಗಲೀ ಕಂಡುಬರುವುದಿಲ್ಲ, ಇವುಗಳನ್ನು ಶಾಲೆಗಳಿಗೆ ಒದಗಿಸುವುದು ಮಾತ್ರವಲ್ಲದೆ ಅದರ ನಿರ್ವಹಣೆಯನ್ನು ಮಾಡುತ್ತಿಲ್ಲ. ಕೇವಲ ಪರೀಕ್ಷೆ ಅಂಕಗಳು ಉತ್ತೀರ್ಣತೆ ಇದೇ ಪ್ರಧಾನ ವ್ಯವಸ್ಥೆಯಲ್ಲಿ ಪ್ರಯೋಗಗಳನ್ನು ಮಾಡಲಾಗುತ್ತಿದೆ. ವಿಜ್ಞಾನ ವಿಷಯಗಳನ್ನು ಸರಿಯಾಗಿ ವಿದ್ಯಾರ್ಥಿಗಳಿಗೆ ಮನದಟ್ಟಾಗುವಂತೆ ಹೇಳುವಲ್ಲಿ ವಿಫಲವಾಗಿವೆ.

**ಶಿವರಾಮ ಕಾರಂತರ ಮಕ್ಕಳ ಕೃತಿಗಳು**

ಕಾರಂತರು ಮಕ್ಕಳ ಮನಸ್ಸನ್ನು ತಿಳಿದು ಆಳವಾಗಿ ಅಧ್ಯಯನ ಮಾಡಿ ಮಕ್ಕಳಿಗೆ ಸುಲಭವಾಗಿ ಅರ್ಥವಾಗುವಂತೆ ಪಠ್ಯಗಳನ್ನು ರಚಿಸುತ್ತಿದ್ದರು. ಅವರ ಪಠ್ಯಗಳಲ್ಲಿ ಬರುವ ಪ್ರಾಣಿಗಳು, ಪಕ್ಷಿಗಳು, ಮಾತುಗಳ ಮೂಲಕ ವ್ಯಕ್ತಪಡಿಸುವ ಶಬ್ದಗಳ ಬಳಕೆ, ಕಥೆಯ ನಿರೂಪಣೆ, ನಾಟಕದ ಸಂಭಾಷಣೆ ಮಕ್ಕಳ ಮನಸ್ಸನ್ನು ಕೆರಳಿಸುವಂತಾಗಿದೆ. ವಿವಿಧ ವಯೋಮಾನದ ಮಕ್ಕಳಿಗೆ ಅವರವರ ಆಸಕ್ತಿಗನುಗುಣವಾಗಿ ಪಠ್ಯಗಳನ್ನು ರಚಿಸಬೇಕೆಂಬ ಚಿಂತನೆಯನ್ನು ಹೊಂದಿದ್ದರು. ಕಾರಂತರು ರಚಿಸಿದ ಹಲವಾರು ಮಕ್ಕಳ ಕೃತಿಗಳು ಕಥೆಗಳು, ಪದ್ಯಗಳು, ನಾಟಕಗಳು ಮಕ್ಕಳಿಗೆ ಸಂತೋಷವನ್ನು ನೀಡುತ್ತಿದ್ದವು. ಮಂಗನ ಮದುವೆ ನಾಟಕವನ್ನು ನೋಡಿದರೆ ಪುಟ್ಟ ಮಕ್ಕಳಿಗೆ ಸಂತೋಷವನ್ನು ನೀಡುವ ನಾಟಕವಾಗಿದೆ. ಈ ನಾಟಕದಲ್ಲಿ ಬರುವ ಪ್ರತಿ ಸನ್ನಿವೇಶದಲ್ಲಿಯೂ ಮನುಷ್ಯನಿಗೆ ಪ್ರಾಣಿಗಳ ಸಹಕಾರ ಅಲ್ಲಿ

ಯಾವುದೇ ದ್ವೇಷ ಭಾವನೆ ಇಲ್ಲ. ಸುಮಂತನನ್ನು ಹುಡುಕಿಕೊಂಡು ಹೋದ ವಸಂತನಿಗೆ ಪ್ರತಿಯೊಂದು ಹಂತದಲ್ಲಿಯೂ ಗೆಲವು ಮತ್ತು ಸಹಕಾರ. ಇಲ್ಲಿ ಸುಲಭವಾಗಿ ಸುಮಂತನನ್ನು ಪಡೆದುಕೊಳ್ಳುವುದು. ಮಕ್ಕಳ ನೆಮ್ಮದಿಯನ್ನು ಕೊಡುವ ಕಥೆಯಾಗಿದೆ. ಇಲ್ಲಿ ಎಲ್ಲಿಯೂ ವೈಚಾರಿಕತೆ ಇಲ್ಲ ನೇರವಾದ ಕತೆಯಾಗಿದೆ.

ಕಾರಂತರು ಮಕ್ಕಳ ಸಾಹಿತ್ಯಗಳಾದ ಗದ್ಯ, ನಾಟಕ, ಪದ್ಯ ಇವುಗಳಲ್ಲಿ ಪ್ರತಿಯೊಂದು ಹಂತದಲ್ಲಿ ಪ್ರಕೃತಿ ವರ್ಣನೆಯಿದೆ. ಮಕ್ಕಳು ಪ್ರಕೃತಿಯಲ್ಲಿರುವ ಪ್ರಾಣಿ, ಪಕ್ಷಿ, ಗಿಡ, ಮರ, ನೀರು, ಮಣ್ಣು ಇವುಗಳ ಜೊತೆಗೆ ಬದುಕಬೇಕು ಎಂಬ ಆಶಯವನ್ನು ಕಾಣಬಹುದು. ಇದನ್ನೆಲ್ಲಾ ಗಮನಿಸಿದಾಗ ರೂಸೊ, ಟಾಗೋರರ ವಿಚಾರಗಳ ಪ್ರಭಾವ ಕಾರಂತರ ಮೇಲೆ ಬಿದ್ದಿರುವುದನ್ನು ಗಮನಿಸಬಹುದು.

ಕಾರಂತರು ತಮ್ಮ ಸೃಜನಶೀಲ ಮತ್ತು ಸೃಜನೇತರ ಬಾಲ ಸಾಹಿತ್ಯ ಸೃಷ್ಟಿಗೆ ಪಾಶ್ಚಾತ್ಯ ದೇಶಗಳಲ್ಲಿ ಈ ಕ್ಷೇತ್ರಗಳಲ್ಲಿ ನಡೆಸಿದ ಕೃಷಿ ಹಾಗೂ ಚಿಂತನೆಗಳನ್ನು ಮಾದರಿಯಾಗಿ ಇರಿಸಿ ಕೊಂಡಿದ್ದರು. ಶಿವರಾಮ ಕಾರಂತರ ಬಾಲಪ್ರಪಂಚದ ವಿಷಯ ನಿರೂಪಣೆಯ ಕ್ರಮವು ನೇರವಾಗಿದೆ ಮತ್ತು ಸ್ಪಷ್ಟವಾಗಿದೆ. ಯಾವುದೇ ಪಾರಿಭಾಷಿಕ ಪದಗಳನ್ನು ಅಳವಡಿಸದೇ ಅತ್ಯಂತ ಸರಳವಾಗಿ ನಿರೂಪಿಸಿದ್ದಾರೆ. ಶಬ್ದಗಳ ಆಡಂಬರವಿಲ್ಲ. ಉದ್ದುದ್ದ ಇಲ್ಲದೆ ಕ್ಲಿಷ್ಟ ಪಾರಿಭಾಷಿಕ ಪದಗಳ ಪ್ರಯೋಗವಿಲ್ಲ. ಯಾವ ವಿಷಯವನ್ನು ಎಷ್ಟು ಹೇಳಬೇಕೋ ಅಷ್ಟನ್ನೇ ಹೇಳಿದ್ದಾರೆ. ದೀರ್ಘವಾದಂತಹ ವಿವರಣೆಗಳು ಇಲ್ಲ.

ವಿಜ್ಞಾನ ಪ್ರಪಂಚದಲ್ಲಿ ಸಾಮಾನ್ಯ ಜನರಿಗೆ ಅರ್ಥವಾಗುವಂತಹ ವೈಜ್ಞಾನಿಕ ತತ್ವಗಳು, ನಿಯಮಗಳು ವಾದಗಳನ್ನು ವಿವರಿಸಿದ್ದಾರೆ. ಪ್ರಚಲಿತ ಸಂಶೋಧನೆ, ವಿಜ್ಞಾನ ಸಾಧನೆಗಳನ್ನು ಪರಿಚಯ ಮಾಡಿಕೊಡುವುದು ಜನರಲ್ಲಿ ವೈಜ್ಞಾನಿಕ ಕುತೂಹಲ, ಆಸಕ್ತಿಗಳನ್ನು ವೈಜ್ಞಾನಿಕ ಮನೋಧರ್ಮವನ್ನು ಬೆಳೆಸುವುದು ಇವರ ಉದ್ದೇಶವಾಗಿದೆ. ಗಂಭೀರವಾದ ಕಾದಂಬರಿಗಳನ್ನು ಬರೆದ ಕಾರಂತರು ಬಹಳ ಸರಳವಾದ ಭಾಷೆಯಲ್ಲಿ ಮಕ್ಕಳ ಗೀತೆಗಳನ್ನು ಮಕ್ಕಳ ಕಥೆಗಳನ್ನು ಬರೆದಿದ್ದಾರೆ. ತಮ್ಮದಲ್ಲದ ಕ್ಷೇತ್ರವಾದ ವಿಜ್ಞಾನ ಕ್ಷೇತ್ರವನ್ನು ಪ್ರವೇಶಿಸಿ ಕಲಿತು ಜ್ಞಾನವನ್ನು ಕರಗತಗೊಳಿಸಿಕೊಂಡು ಮತ್ತು ಆಡಂಬರವಿಲ್ಲದ ಭಾಷೆಯಲ್ಲಿ ಬಾಲಪ್ರಪಂಚ, ವಿಜ್ಞಾನ ಪ್ರಪಂಚ ಪ್ರಾಣಿ ಪ್ರಪಂಚ ಮೊದಲಾದ ಸಂಪುಟಗಳನ್ನು ರಚಿಸಿದ್ದಾರೆ.

ಬಹುಮುಖಿ ವ್ಯಕ್ತಿತ್ವದ ಕಾರಂತರು ಶಿಕ್ಷಣ ಕುರಿತು ಮಾಡಿದ ಬಹುತೇಕ ಪ್ರಯೋಗಗಳು ಹಾಗೂ ನಡೆಸಿದ ಚಿಂತನೆಗಳು ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದ್ದೆ ಆದರೂ ಕಾರಂತರೂ ವಯಸ್ಕರ ಶಿಕ್ಷಣದಲ್ಲೂ ಕೆಲವು ಬಗೆಯ ಪ್ರಯೋಗಗಳನ್ನು ಮಾಡಿದ್ದಾರೆ. ಎಳೆಯರು ಹೇಗೆ

ವಯಸ್ಕರಲ್ಲವೋ, ಹಾಗೆಯೇ ಹಾಗೆಯೇ ವಯಸ್ಕರೂ ಎಳೆಯರಲ್ಲ. ಅವರದು ಕೇವಲ ವಯಸ್ಸಿನ ಮೆಟ್ಟಿಲುಗಳಲ್ಲ. ಮನಸ್ಸಿನ ಮೆಟ್ಟಿಲುಗಳು ಹೀಗಾಗಿ ಅವರ ಅಭಿರುಚಿಗಳನ್ನು ಮೊದಲೇ ಕಂಡುಕೊಳ್ಳಬೇಕು ಎಂಬುದು ಕಾರಂತರ ನಿಲುವಾಗಿತ್ತು.

ಪ್ರಾಥಮಿಕ ಶಿಕ್ಷಣ ಕಾರಂತರ ಆಸಕ್ತಿಯ ಕ್ಷೇತ್ರ. ಅವರ ಶೈಕ್ಷಣಿಕ ಪ್ರಯೋಗಗಳು ಪ್ರಾಥಮಿಕ ಮಕ್ಕಳ ಸಲುವಾಗಿಯೇ ಕೈಗೊಂಡರು. ಮಕ್ಕಳ ಇಂದ್ರೀಯ ಪ್ರಪಂಚವನ್ನು ಜಡಗೊಳಿಸಿ ಅವರ ಭಾವ ಜೀವನವನ್ನು ಬರಡುಗೊಳಿಸುವ ಹತ್ತು ಮಕ್ಕಳಿಗೆ ಚೆನ್ನಾಗಿ ಕುಳಿತು ಆಡಲು ಜಾಗ ಇಲ್ಲದಲ್ಲೂ ಹಣ ಸುರಿದು ಶಿಶು ಸೇವೆಗೆ ಹೊರಟ ಬಾಲವಾಡಿಗಳ ಮೇಲೆ ಅವರು ಆಕ್ರೋಶವನ್ನು ವ್ಯಕ್ತಪಡಿಸುತ್ತಾರೆ. ಮಕ್ಕಳ ಕಿವಿ, ಕಣ್ಣು, ಮನಸ್ಸು, ಬೆಳೆಸದ ಬಾಲವಾಡಿಗಳು ಮಕ್ಕಳ ಹಿಂಸಾಲಯಗಳು ಎಂದೇ ಹೇಳುತ್ತಾರೆ. ಮೂರು ಮೂರುವರೆ ವರ್ಷದ ಮಕ್ಕಳನ್ನು ತಂದು ಕೂಡಿಸಿ ಅವುಗಳ ಮೇಲೆ ಗಣಿತ, ವಿಜ್ಞಾನ ಮೊದಲಾದ ಕಠಿಣ ವಿಷಯಗಳ ಹೊರೆಯನ್ನು ಹೊರಿಸುವ ಹಿರಿಯರು ಎಂದೂ ಮಕ್ಕಳ ಹಿತಾಕಾಂಕ್ಷಿಗಳಲ್ಲ ಅವರು ಮಕ್ಕಳ ಪಾಲಿನ ಮೃತ್ಯಗಳು ಎನ್ನುತ್ತಾರೆ. ಶಿವರಾಮ ಕಾರಂತರು ಉಪಾಧ್ಯಾಯರೊಂದಿಗೆ ಜಿಲ್ಲೆಯ ಇತರೆ ಪ್ರಾಥಮಿಕ ಶಾಲೆಗಳ ಸಂದರ್ಶನ ಮಾಡುತ್ತಿದ್ದರು. ಹೀಗೆ ಶಾಲೆಗಳಿಗೆ ಭೇಟಿ ನೀಡುವಾಗ ಹಲವಾರು ತರಗತಿಗಳಲ್ಲಿ ಬೇರೆ ಬೇರೆ ವಯಸ್ಸಿನ ಮಕ್ಕಳು ಪ್ರತಿ ದಿನ ಒಂದೇ ಸ್ಥಳದಲ್ಲಿ ಕೇವಲ ನಾಲ್ಕು ಗೋಡೆಗಳ ಮಧ್ಯೆ ಕುಳಿತು ನಿರಾಸಕ್ತಿಯ ಪಾಟ ಕೆಳುವ ಮಕ್ಕಳನ್ನು ಕಂಡ ಕಾರಂತರು

> ಅವರ ನಿಷ್ಕ್ರಿಯ ದೇಹ ಮತ್ತು ಮುಖಗಳನ್ನು ಕಂಡಾಗ ಇಷ್ಟೊಂದು ಚುರುಕಿನ ವ್ಯಕ್ತಿತ್ವಗಳನ್ನು ಹೇಗೆ ಪಂಜರದಲ್ಲಿ ಇರಿಸಿದ ಗಿಳಿಗಳಂತೆ ನಿರಾಶೆ ಗೊಳಿಸುತ್ತಿದ್ದಾರೆ ಎಂಬ ಭಾವನೆ ನನ್ನಲ್ಲಿ ಮೊಳೆಯುತ್ತಿತ್ತು[೩೩]

ಪ್ರತಿಯೊಂದು ಶಾಲೆಯಲ್ಲಿ ಮಕ್ಕಳನ್ನು ಬೆಳಗ್ಗೆಯಿಂದ ಸಂಜೆಯವರೆಗೆ ಬಲವಂತದ ಕಲಿಕೆಗೆ ಗುರಿಪಡಿಸಿ ಕೊನೆಗೆ ಆರೇಳು ವರ್ಷಗಳ ನಂತರ ಕೊನೆಯಲ್ಲಿ ಸಾಧಿಸುವುದೇನು? ಎಂಬ ವಿಷಯವನ್ನು ಕುರಿತು ದೀರ್ಘವಾಗಿ ಯೋಚನೆ ಮಾಡುತ್ತಿದ್ದರು. ಕೇವಲ ಮಕ್ಕಳಿಗೆ ಓದುವುದು ಬರೆಯುವುದನ್ನು ಕಲಿಸಲು ಇಷ್ಟೊಂದು ಶ್ರಮ ಯಾಕೆ ಎಂದು ಮಕ್ಕಳಲ್ಲಿ ಆಸಕ್ತಿ ಹುಟ್ಟಿಸಲಾರದುದಕ್ಕಲ್ಲವೆ ಅದು ಅಂತಹ ರೂಪ ತಾಳಿದ್ದು ಎನ್ನುವಂತಹ ಪ್ರಶ್ನೆಗಳು ಅವರನ್ನು ಯಾವಾಗಲೂ ಕಾಡುತ್ತಿದ್ದವು. ಇಂತಹ ಹಲವಾರು ಪ್ರಶ್ನೆಗಳಿಗೆ ಬಾಲವನದಲ್ಲಿ ಪ್ರಯೋಗಗಳ ಮುಖಾಂತರ ಉತ್ತರವನ್ನು ಕಂಡುಕೊಳ್ಳಲು ಪ್ರಯತ್ನಿಸಿದರು ಜನರ ಪ್ರೇರಣೆ ಸಿಗದೆ ಅದು ನಿಂತು ಹೋಯಿತು.

ಆದರೆ ಕಾರಂತರಿಗೆ ನೂತನ ಪ್ರಯೋಗಗಳನ್ನು ಅವರ ಮಕ್ಕಳ ಮೇಲೆಯೇ ನಡೆಸಲು ಅವಕಾಶ ದೊರೆಯಿತು. ಅವರ ನಾಲ್ಕು ಮಕ್ಕಳು ಬಾಲವನದಲ್ಲೆ ಬೆಳೆದರು. ಮಕ್ಕಳಿಗೆ ಶಾಲೆಯನ್ನು ಕಲಿಸಲು ಯಾವ ಸ್ಥಳ ಆಯ್ಕೆ ಮಾಡಿ ಬಾಲವನವನ್ನು ಸ್ಥಾಪಿಸಿದ್ದರೋ ಅದನ್ನೆ ಕಾರಂತರು ತಮ್ಮ ಮನೆಯನ್ನಾಗಿ ಮಾಡಿಕೊಂಡರು. ಶಾಲೆಗಾಗಿ ಮಾಡಿದ್ದ ಕಟ್ಟಡವೆನೋ ಉಳಿಯಿತು. ಮಕ್ಕಳು ಆಟವಾಡಲು ಮಾಡಿಸಿದ ವಿವಿಧ ಸಲಕರಣೆಗಳು ಮೃಗಾಲಯ ಎಲ್ಲವೂ ಕ್ರಮೇಣ ನಶಿಸುತ್ತಾ ಬಂದವು. ಕಾರಂತರಿಗೆ ಮಕ್ಕಳಾಗುವ ಕಾಲಕ್ಕಾಗಲೇ ಇವು ಯಾವುವು ಉಳಿಯಲಿಲ್ಲ. ಮನೆಯ ಸುತ್ತಮುತ್ತಲಿನ ಗುಡ್ಡ ಕಾಡು, ಮರಗಳು ಮಾತ್ರ ಉಳಿದಿದ್ದವು, ಮನೆಯ ಸುತ್ತ ಮುತ್ತಲೂ ನಿಸರ್ಗ ತುಂಬಾ ಸುಂದರವಾಗಿ ಕಾಣಿಸುತ್ತಿತ್ತು.

ಶಿವರಾಮ ಕಾರಂತರಿಗೆ ನಾಲ್ಕು ಜನ ಮಕ್ಕಳು. ಅದರಲ್ಲಿ ಇಬ್ಬರು ಗಂಡು ಮಕ್ಕಳು ಇಬ್ಬರು ಹೆಣ್ಣು ಮಕ್ಕಳು. ಈ ನಾಲ್ಕು ಮಕ್ಕಳು ಪ್ರಾಥಮಿಕ ಶಾಲೆಗೆ ಹೋಗದೆ ಮನೆಯಲ್ಲಿಯೆ ಪ್ರಾಥಮಿಕ ಶಾಲೆಯನ್ನು ಕಲಿತರು. ತಮ್ಮ ಐದನೆಯ ವಯಸ್ಸಿನವರೆಗೆ ಮನೆಯಲ್ಲಿಯೇ ಯಾವ ಯಾವ ಆಟಗಳನ್ನು ಆಡಿ ಬೆಳೆದ್ದಿರೋ ಅವೇ ಆಟಗಳನ್ನು ಮುಂದೆವರೆಸುತ್ತಾ ಸಾಗಿದರು. ಮನೆಯ ವಿಶಾಲವಾದ ಹಿತ್ತಲಿನಲ್ಲಿ ಅಲೆದಾಡಿ, ಅಲ್ಲಿಗೆ ಯಾವ ಹಕ್ಕಿ ಬಂದಿವೆ? ಯಾವ ಪತಂಗ ಹಾರುತಿದೆ? ಯಾವುದು ಎಲ್ಲಿ ವಾಸ ಮಾಡುತ್ತದೆ- ಇಂಥ ಅನ್ವೇಷಣೆಗಳ ಕುತೂಹಲವನ್ನು ಬೆಳೆಯಿಸಿಕೊಂಡರು ಹಿಂದೆ ಮನೆಯ ಬಳಿಯಿದ್ದ ಮೃಗಾಲಯ ಮತ್ತು ಇತರ ಆಟದ ಸಾಮಗ್ರಿಗಳು ಇಲ್ಲದಿರುವುದನ್ನು ಕಂಡ ಮಕ್ಕಳು ಆಗಾಗ ನಿರಾಸೆಯಾಗುತ್ತಿದ್ದರು. ಕಾರಂತರು ಅವರ ಸಲುವಾಗಿ ಮೊಲವನ್ನೋ ಕಪಿಯನ್ನೊ, ನವಿಲನ್ನೋ ತಂದು ಸಾಕುತ್ತಿದ್ದರು. ಎರಡು ನಾಯಿಗಳನ್ನು ಸಾಕಿದ್ದರು. ಮಕ್ಕಳು ದಿನ ನಿತ್ಯ ಹೊರಗೆ ಅಲೆದಾಡಿ ತಾಯಿಯೊಡನೆಯೋ ತಂದೆಯೊಡನೆಯೋ ಹಲವಾರು ಪ್ರಶ್ನೆಗಳನ್ನು ಹಾಕುತ್ತಿದ್ದರು. ಕಾರಂತರಲ್ಲಿದ್ದ ಹಲವಾರು ಚಿತ್ರಗಳನ್ನು ಕಂಡು ಆಕರ್ಷಣೆಯಾಗಿ ಚಿತ್ರ ಬರೆಯುವುದರಲ್ಲಿ ಆಸಕ್ತಿಯನ್ನು ತೋರಿಸುತ್ತಿದ್ದರು. ಮಕ್ಕಳಿಗೆ ಆಟವಾಡಲು ಕಾಗದ, ಕತ್ತರಿ, ಮಣ್ಣು ಮೊದಲಾದ ಸಾಮಗ್ರಿಗಳನ್ನು ಒದಗಿಸುತ್ತಿದ್ದರು. ಮನೆಯ ಹಿತ್ತಲಲ್ಲಿ ಮಕ್ಕಳಿಗಾಗಿಯೇ ಒಂದು ಸಣ್ಣ ಜೋಪಡಿಯನ್ನು ಪ್ರತ್ಯೇಕವಾಗಿ ಕಟ್ಟಿಸಿಕೊಟ್ಟರು. ಪ್ರತಿ ದಿನ ಕಾರಂತರು ರಾತ್ರಿಹೊತ್ತು ಒಂದೊಂದು ಹೊಸ ಕಥೆಯನ್ನು ಹೇಳಿಕೊಡುವುದು, ಕಾಗದ ಬಣ್ಣ, ಗೊಂಬೆಗಳನ್ನು ಒದಗಿಸುತ್ತಿದ್ದರು. ಸಣ್ಣ ಪುಟ್ಟ ನಾಟಕಗಳನ್ನು ಆಡಿಸುತ್ತಿದ್ದರು. ಹೀಗೆ ಅವರ ನಾಲ್ಕು ಮಕ್ಕಳು ಇಂತಹ ಚಟುವಟಿಕೆಗಳಲ್ಲಿ ಸಮಯವನ್ನು ಕಳೆಯುತ್ತಿದ್ದರು. ದಿನಕ್ಕೆ ಒಂದು ವರೆ ಘಂಟೆ ಕಾಲ ಓದಿಸುತ್ತಿದ್ದರು. ಹೀಗೆ ಸುಮಾರು ಎರಡು ವರ್ಷಗಳು ಕಳೆದ ಮೇಲೆ ಮಕ್ಕಳು ತಾವಾಗಿಯೇ ಉತ್ಸಾಹದಿಂದ ಬರೆಯಲು ಪ್ರಾರಂಭಿಸಿದರು. ಸರಳ ಗಣಿತವನ್ನು ಮಾತ್ರ ಮಕ್ಕಳಿಗೆ ಕಲಿಸಿದರು. ಉದ್ದೇಶಪೂರ್ವಕವಾಗಿ ಯಾವ ವಿಷಯವನ್ನು ಕಲಿಸಲಿಲ್ಲ, ಮಕ್ಕಳು ಕೇಳಿದ ಯಾವುದೇ ಪ್ರಶ್ನೆಗೂ ಇಲ್ಲ ಎನ್ನದೆ ಉತ್ತರಿಸುತ್ತಿದ್ದರು.

> ಇಷ್ಟರಿಂದಲೇ ನಾಲ್ಕು ಮಕ್ಕಳು ಮುಂದೆ ಹಾಯ್‌ಸ್ಕೂಲಿನ ಫಸ್ಟ್ ಫಾರ್ಮಿಗೆ ನೇರಾಗಿ ಪ್ರವೇಶಿಸಲು ಸಾಧ್ಯವಾಯಿತು. ಮಕ್ಕಳಿಗೆ ಪ್ರಾಥಮಿಕ ಶಿಕ್ಷಣದಲ್ಲಿ ನಾವು ಕೊಡುವ ಪೀಡೆ ಅವರ ಆಯುಷ್ಯದ ಬಹುಭಾಗವನ್ನು ವ್ಯರ್ಥಗೊಳಿಸಿ ಅವರ ಕುತೂಹಲಕ್ಕೆ ತಣ್ಣೀರೆರಚುವ ಪ್ರಯತ್ನ ಎಂಬ ನನ್ನ ಅನಿಸಿಕೆ ಇದರಿಂದ ಪ್ರತ್ಯೇಕ್ಷ ಸಾಕ್ಷಿ ದೊರೆತಂತಾಯಿತು[೩೪]

ಎಂದು ತಮ್ಮ ಅನುಭವವನ್ನು ಕುರಿತು ಹೇಳುತ್ತಾರೆ. ಕಾರಂತರು ತಮ್ಮ ಹೊಸ ಪ್ರಯೋಗಗಳ ಮೂಲಕ ಪ್ರಾಥಮಿಕ ಮಕ್ಕಳಿಗೆ ಸುಲಭವಾಗಿ ಓದು ಬರಹವನ್ನು ಕಲಿಸಿ ಅವರಲ್ಲಿ ಉತ್ಸಾಹವನ್ನು ತುಂಬ ಬಹುದೆಂದು ಅರಿತರು. ಮಕ್ಕಳಿಗೆ ಆರಂಭದ ಕಲಿಕೆಯಿಂದಲೇ ನಿಸರ್ಗದ ಜೊತೆ ಸಂಬಂಧ ಪ್ರಾಣಿ ಪಕ್ಷಿಗಳ ತಿಳುವಳಿಕೆ, ಆಟ ಪಾಟಗಳಿಂದಲೇ ಮಕ್ಕಳಿಗೆ ವಿದ್ಯೆಯನ್ನು ಕಲಿಸಬಹುದೆಂದು ತೋರಿಸಿಕೊಟ್ಟರು. ಇಷ್ಟು ಸುಲಭದಲ್ಲಿ ಆಗಬಹುದಾದ ಕೆಲಸವನ್ನು ಆರೇಳು ವರ್ಷಗಳ ಕಾಲ ಮಕ್ಕಳನ್ನು ಪೀಡಿಸುವ ಶಿಕ್ಷಣ ಕ್ರಮವನ್ನು ಅವರು ತಿರಸ್ಕರಿಸುತ್ತಾರೆ. ಮೊದಲಿಗೆ ವಿದ್ಯಾರ್ಥಿಗಳಲ್ಲಿ ಜ್ಞಾನವನ್ನು ಕುರಿತ ಅಭಿರುಚಿಯನ್ನು ಹುಟ್ಟಿಸಬೇಕು, ಅನಂತರ ಓದು ಬರಹವನ್ನು ತೀರಾ ಸುಲಭವಾಗಿ ಕಲಿಯಲು ಆಸಕ್ತಿ ಬರುತ್ತದೆ. ಗಣಿತದ ವಿಷಯವನ್ನು ಮಕ್ಕಳಲ್ಲಿ ಭಯವನ್ನು ಹುಟ್ಟಿಸುವಂತೆ ಹೇಳವೆ ಆಟದ ಮೂಲಕ ಕಲಿಸಿದರೆ ವಿದ್ಯಾರ್ಥಿಗಳಿಗೆ ತುಂಬಾ ಅನುಕೂಲವಾಗುತ್ತದೆ. ಮಕ್ಕಳ ಆಟವನ್ನು ತಡೆಯಲು ಪ್ರಯತ್ನಿಸ ಬಾರದು, ಮಕ್ಕಳಿಗೆ ಚಿಕ್ಕಂದಿನಿಂದಲೇ ಮಕ್ಕಳಲ್ಲಿ ನಿಸರ್ಗ ಪ್ರೇಮವನ್ನು ಬೆಳೆಸಬೇಕು. ಇದರಿಂದ ಮಕ್ಕಳು ನಿರ್ಭಯವಾಗಿ ಕಲಿಯಲು ಅನುಕೂಲವಾಗುತ್ತದೆ ಅವರಿಗೆ ಯಾವುದು ಹೆಚ್ಚು ಆಸಕ್ತಿಯೋ ಅದನ್ನು ಕಲಿಯಲು ಅವರಿಗೆ ಸ್ವಾತಂತ್ರ್ಯವನ್ನು ನೀಡಬೇಕು. ಶಿಕ್ಷಣ ವ್ಯವಸ್ಥೆಯಲ್ಲಿ ಯಾವುದೇ ವಿಷಯದಲ್ಲಾಗಲ್ಲಿ ಮಕ್ಕಳಲ್ಲಿ ಆಸಕ್ತಿಯನ್ನು ಹುಟ್ಟಿಸದೆ ಹೊರತು ಅವರಲ್ಲಿ ವಿದ್ಯೆಯನ್ನು ಕಲಿಸಲಾಗುವುದಿಲ್ಲ. ಅವರಲ್ಲಿ ಆಸಕ್ತಿಯನ್ನು ಕೆರಳಿಸುವ ಬರಹಗಳು, ಆವರಣ ಮುಂತಾದ ಸೌಲಭ್ಯವನ್ನು ಒದಗಿಸಿದಾಗ ಅತ್ಯಂತ ಕಠಿಣವಾದಂತಹ ವಿಷಯಗಳು ಮಕ್ಕಳಿಗೆ ಕಲಿಯಲು ಸುಲಭವಾಗುತ್ತವೆ. ಮಕ್ಕಳು ಮುಂದೆ ದೊಡ್ಡವರಾಗಿ ಯಾವ ವಿಷಯವನ್ನು ಕಲಿತರೆ ತಮ್ಮ ಜೀವನಕ್ಕೆ ಪ್ರಯೋಜನವಿದೆ ಎಂಬ ಅರಿವನ್ನು ಮೂಡಿಸುವುದು ಅವರು ಉನ್ನತ ವ್ಯಾಸಂಗಕ್ಕೆ ಹೋಗುವ ತನಕವೂ ಮಕ್ಕಳಲ್ಲಿ ಆಯಾ ವಿಷಯದ ಸಂಪೂರ್ಣವಾಗಿ ಆಸಕ್ತಿಯನ್ನು ಬೆಳೆಸಬೇಕು. ಇಲ್ಲದೆ ಹೋದರೆ ವಿದ್ಯಾರ್ಥಿಯು ತಾನು ಕಲಿತ ವಿದ್ಯೆಯನ್ನು ಬೇಗ ಮರೆತು ಹೋಗುತ್ತದೆ. ತನ್ನಲ್ಲಿಡಗಿರುವ ಸುಪ್ತ ಶಕ್ತಿಯ ಹೊರತರುವುದೆ ನಿಜವಾದ ಶಿಕ್ಷಣದ ಕೆಲಸವಾಗಬೇಕು.

ಸಾಂಪ್ರದಾಯಿಕ ತಿಳುವಳಿಕೆಯಂತೆ ಶಾಲೆಗಳು ಮಕ್ಕಳ ಶಿಕ್ಷಣಕ್ಕಾಗಿ ಇವೆ. ಅಲ್ಲಿ ಗುರುವು ಏನು ಅರಿಯದ ಮಕ್ಕಳಿಗೆ ಹೇಳಿಕೊಡುತ್ತಾನೆ. ಶಿಷ್ಯ ಅವುಗಳನ್ನೆಲ್ಲಾ ಪರಿಗ್ರಹಿಸಬೇಕು ಎಂಬ

ಕಲ್ಪನೆ ನಮ್ಮಲ್ಲಿ ಇತ್ತು. ಮಕ್ಕಳಲ್ಲಿ ಸ್ವತಂತ್ರವಾದ ಸೃಷ್ಟಿ ಶಕ್ತಿ ಇದ್ದು ಯೋಗ್ಯ ಪರಿಸ್ಥಿತಿಯನ್ನು ಕಲ್ಪಿಸಿಕೊಟ್ಟಲ್ಲಿ ಅವರೇ ನವೀನ ಉತ್ಪತ್ತಿಯನ್ನು ಮಾಡಬಲ್ಲರೆಂದರು ಹೇಳಿದರು. ವಿದ್ಯಾರ್ಥಿಗಳು ಉಪಾಧ್ಯಾಯರನ್ನು ಅನುಸರಿಸಬೇಕಾದ ಬಂಡಿಗಳಲ್ಲ ಎನ್ನುತ್ತಿದ್ದರು. ಮಕ್ಕಳು ತಮ್ಮ ಸುತ್ತಮುತ್ತಲಿನ ಆಟಗಳಲ್ಲಿ ಪ್ರತಿಕ್ಷಣಕ್ಕೂ ಏನನ್ನೋ ಹೊಸ ಹೊಸದಾಗಿ ಸೃಷ್ಟಿಸಲು ಯತ್ನಿಸುತ್ತಾರೆ.

ಬಾಲ್ಯದ ಶಿಕ್ಷಣ ಮಗುವಿಗೆ ಯಾವ ಬಗೆಯಲ್ಲಿ ಸಿಗಬೇಕು ಎಂಬುದನ್ನು ಕಾರಂತರು ತಮ್ಮ ಚಿಂತನೆಯಿಂದ ನಿರೂಪಿಸುತ್ತಾರೆ. ನಮ್ಮ ಶಾಲಾ ಶಿಕ್ಷಣ ವ್ಯವಸ್ಥೆಯಲ್ಲಿ ಮಗುವಿಗೆ ಕಲಿಯುವ ಸ್ವಾತಂತ್ರ್ಯವನ್ನು ನೀಡುತ್ತಿಲ್ಲ. ಬದಲಾಗಿ ಅದೊಂದು ಯಾಂತ್ರಿಕ ಕ್ರಿಯೆಯಾಗಿ ಹೋಗಿದ್ದು ಶಿಸ್ತಿನ ಹೆಸರಲ್ಲಿ ಮಗುವಿನ ಸಹಜ ಸ್ವಾಭಾವವನ್ನು ಕಸಿದುಕೊಳ್ಳುವ ಕೆಲಸವನ್ನು ಮಾಡುತ್ತಿದೆ ಎಂದು ಹೇಳುತ್ತಾರೆ. ಹಳ್ಳಿಯ ಬಾಲಕರಿಗೆ ಕೊಡುವ ಶಿಕ್ಷಣವು ಅವರ ಗ್ರಾಮ ಜೀವನಕ್ಕೆ ಸಹಕಾರಿಯಾಗುವಂತಿರಬೇಕು. ಅದು ಅವರ ಹೈಸ್ಕೂಲ್ ಶಿಕ್ಷಣಕ್ಕೆ ಅಡಿಗಲ್ಲು ಮಾತ್ರವಾಗಿರಬಾರದು. ಬದಲಾಗಿ ಅಲ್ಲಿನ ಪಠ್ಯಗಳು ಅವರ ನಿತ್ಯ ಜೀವನಕ್ಕೆ ಪ್ರತ್ಯೇಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಸಹಾಯವನ್ನುಂಟು ಮಾಡುತ್ತಿರಬೇಕು. ವೃತ್ತಿ ಪಾಠವು ಜೀವನಕ್ಕೆ ಸಹಾಯವನ್ನುಂಟು ಮಾಡುತ್ತಿರಬೇಕು. ಮೊದಲ ತರಗತಿಯಿಂದಲೇ ಬರೆಯಲು ಕಲಿಸುವ ಬದಲು ಮೊದಲು ಓದಿನ ರುಚಿ ಹಿಡಿಸಿ ಆ ಬಳಿಕ ಬರೆಯುವುದನ್ನು ಕಲಿಸಬೇಕು ಎಂದು ಹೇಳುತ್ತಾರೆ. ಈ ಚಿಂತನೆಯ ಹಿಂದೆ ಮಗುವಿನ ಮನಸ್ಸಿನ ಸಾಮರ್ಥ್ಯವನ್ನು ಗ್ರಹಿಸಿಕೊಂಡ ಒಂದು ಬಗೆಯ ತಜ್ಞತೆ ಇದೆ. ಮೊದಲು ಓದು ಆ ಬಳಿಕ ಬರವಣಿಗೆ. ಇದು ಕಾರಂತರ ಗ್ರಹಿಕೆಯ ಶಿಕ್ಷಣದ ಕ್ರಮವಾಗಿತ್ತು. ಇದರ ಸಾಧ್ಯತೆಯನ್ನು ನಮ್ಮ ಆಧುನಿಕ ಕಾಲದ ಶಿಕ್ಷಣ ವ್ಯವಸ್ಥೆಯ ಬೇರೆ ಬೇರೆ ಹಂತದ ಬೇರೆ ಬೇರೆ ಮುಖಗಳನ್ನು ಪ್ರಯೋಗಕ್ಕೆ ಒಳಪಡಿಸಬೇಕಾದ ಅವಶ್ಯಕತೆ ಇದೆ.

ಮಕ್ಕಳು ಶಾಲೆಗಳಲ್ಲಿ ಪಡೆಯುವ ಜ್ಞಾನಕ್ಕೂ ಮತ್ತು ಮುಂದೆ ತಮ್ಮ ಜೀವನದಲ್ಲಿ ಎದುರಿಸಬಹುದಾದ ಸಮಸ್ಯೆಗಳಿಗೂ ಯಾವುದೇ ಸಂಬಂಧ ಇಲ್ಲದಿರುವುದನ್ನು ಕಂಡು ಕಾರಂತರು ಶಿಕ್ಷಣ ವ್ಯವಸ್ಥೆಯನ್ನು ಬಹು ಕಟುವಾಗಿಯೇ ಟೀಕಿಸುತ್ತಾರೆ. ಮಕ್ಕಳ ಪಠ್ಯಪುಸ್ತಕ ಗಳಲ್ಲಿರುವ ಡ್ರಾಯಿಂಗ್ ಪಾಠವು ಕೇವಲ ಡೊಂಬರಾಟವಾಗಿದೆ. ಪರಿಸರದಲ್ಲಿ ಕೇಳಿ ಕಲಿಯಬೇಕಾದ ಜೀವಂತ ಭಾಷೆಯನ್ನು ಶಾಲೆಯ ನಾಲ್ಕು ಗೋಡೆಗಳ ಮಧ್ಯೆ ಕಲಿಯಬೇಕಾದ ಪರಿಸ್ಥಿತಿಯುಂಟಾಗಿದೆ. ಪ್ರೌಢ ಪ್ರಜೆಗಳಿಗೆ ಹೇಳಬೇಕಾದ ವಿಷಯಗಳನ್ನು ಎಳೆಯ ಮಕ್ಕಳಿಗೆ ಕಲಿಸಲಾಗುತ್ತಿದೆ. ಪಠ್ಯಪುಸ್ತಕವೊಂದು ಮುಖ್ಯವಾಗಿ ಯಾವ ಉದ್ದೇಶವನ್ನು ಸಾಧಿಸಬೇಕಾಗಿತ್ತೋ ಅದಕ್ಕಿಂತ ಭಿನ್ನವಾಗಿ ತದ್ವಿರುದ್ಧವಾಗಿ ಮೂಲ ಉದ್ದೇಶವೇ ವಿಫಲವಾಗುವಂತೆ ಅದನ್ನು ಜಾರಿಗೊಳಿಸಲಾಗಿದೆ ಎಂದು ಟೀಕಿಸುತ್ತಾರೆ.

ಶಿಕ್ಷಣದ ಬಗೆಗಿನ ಕಾರಂತರ ಒಟ್ಟು ಬರವಣಿಗೆಯಲ್ಲಿ ಗುಣ ಪಕ್ಷಪಾತ ಎದ್ದುಕಾಣುತ್ತದೆ. ಆದರೆ ಶಿಕ್ಷಣದ ಸಾರ್ವತ್ರೀಕರಣದ ಅಗತ್ಯ. ಸಮೂಹ ಶಿಕ್ಷಣದ ಸಮಸ್ಯೆಗಳು, ಅನಕ್ಷರತೆಯ ಪ್ರಮಾಣ ಹೆಚ್ಚುತ್ತಿರುವುದು, ಮಕ್ಕಳು ಶಾಲೆಯನ್ನು ಅರ್ಧದಲ್ಲೇ ಬಿಟ್ಟು ಬಿಡುವ ಪ್ರೌಢ ಶಿಕ್ಷಣವನ್ನು ಬಿಟ್ಟು ಉನ್ನತ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿರುವುದು ಮುಂತಾದ ಸಮಸ್ಯೆಗಳ ಕುರಿತು ಕಾರಂತರ ಲೇಖನಗಳಲ್ಲಿ ಗಮನಾರ್ಹ ಪ್ರಸ್ತಾಪ ಕಂಡಬರುವುದಿಲ್ಲ. ಕಾರಂತರ ಎಲ್ಲಾ ವಿಚಾರಗಳನ್ನು ನಾವು ಒಪ್ಪಬಹುದು. ಇಲ್ಲವೇ ಒಪ್ಪದಿರಬಹುದು. ಆದರೆ ಶಿಕ್ಷಣ ಕ್ಷೇತ್ರದ ವಿವಿಧ ಮುಖಗಳ ಬಗೆಗೆ ಅತ್ಯಂತ ಅಧಿಕೃತವಾಗಿ ಹೇಳಿದ ಲೇಖಕರಲ್ಲಿ ಇನ್ನೊಬ್ಬರು ಇಲ್ಲ ಎಂದೇ ಹೇಳಬಹುದು.

ಕೆಲಸಕ್ಕಾಗಿ ಹೋದವನು ಶಿಕ್ಷಕನಾಗುವುದಿಲ್ಲ ಎನ್ನುವ ಕಾರಂತರು ಶಿಕ್ಷಕನಾದವನು ಸದಾಕಾಲ ಮಕ್ಕಳಿಗೆ ಹೇಗೆ ಕಲಿಸುವುದೆಂದು ಕಲಿಯುತ್ತಿರಬೇಕು ಎಂಬುದನ್ನು ಸೂಚಿಸುತ್ತಾರೆ. ಮಕ್ಕಳ ಮನಸ್ಸನ್ನು ರಂಜಿಸಲು ಶಿಕ್ಷಕನು ಪಠ್ಯಪುಸ್ತಕಗಳಲ್ಲಿರುವ ಮಾಹಿತಿಗಿಂತಲೂ ಹೆಚ್ಚಾಗಿ ತಿಳಿದಿರಬೇಕಾಗಿರುತ್ತದೆ. ಪಾಠವನ್ನು ಹೇಗೆ ಮಾಡಿದರೆ ಮಗು ಅರ್ಥ ಮಾಡಿಕೊಳ್ಳುತ್ತದೆ ಎಂಬುದು ಶಿಕ್ಷಣಕನಿಗೆ ತಿಳಿದಿರಬೇಕಾಗುತ್ತದೆ. ಹೀಗೆ ಮುಂತಾದ ಮಾತುಗಳು ಶಿಕ್ಷಕರಿಗೆ ಸ್ಫೂರ್ತಿಯಾಗಿವೆ. ಮಗು ಮಣ್ಣಿನ ಮುದ್ದೆಯಲ್ಲ. ಅದಕ್ಕೂ ಬದುಕಿದೆ. ಅದು ಮುಂದೆ ಬದುಕುವ ವಿಶ್ವಾಸವನ್ನು ದೊಡ್ಡದು ಮಾಡಿ ಹೇಗಾದರೂ ಬದುಕುವುದು ಮುಖ್ಯವಲ್ಲ. ಬದುಕು ಸುಂದರವಾಗಬೇಕು. ಅದಕ್ಕೆ ನಮ್ಮ ಶಿಕ್ಷಕರು ಪ್ರಯತ್ನ ಮಾಡಬೇಕು. ಈ ಮಾತುಗಳು ಶಿಕ್ಷಕರ ಸಮುದಾಯಕ್ಕೆ ಸರ್ವಕಾಲಿಕ ಸಂದೇಶದಂತಿದೆ.

**ಅಡಿ ಟಿಪ್ಪಣಿಗಳು**

೧. ಶಿವರಾಮ ಕಾರಂತ, ಸ್ಮೃತಿ ಪಟಲದಿಂದ, ೨೦೧೦, ಐಬಿಎಚ್ ಪ್ರಕಾಶನ, ಬೆಂಗಳೂರು, ಪು. ೩೯೪

೨. ಅದೇ., ಪು. ೩೯೬

೩. ಅದೇ., ಪು. ೩೯೯

೪. ಅದೇ., ಪು. ೩೯೬

೫. ಅದೇ., ಪು. ೪೨೪

೬. ಅದೇ., ಪು. ೪೨೫

೭. ಅದೇ., ಪು. ೪೩೦

೮. ಅದೇ., ಪು. ೪೨೪

೯. ಅದೇ., ಪು. ೪೦೭

೧೦. ಅದೇ., ಪು. ೪೦೮

೧೧. ಅದೇ., ಪು. ೪೧೧

೧೨. ಅದೇ., ಪು. ೪೩೧

೧೩. ಅದೇ., ಪು. ೪೩೨

೧೪. ಅದೇ ಪು. ೪೧೦

೧೫. ಶಿವರಾಮ ಕಾರಂತ, ೧೯೯೨, ಸಿರಿಗನ್ನಡ ಪಾಠಮಾಲೆ–೨, ಮುನ್ನುಡಿ, ಎಸ್.ಬಿ.ಎಸ್. ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

೧೬. ಅದೇ., ಓದುವ ಆಟ, ಪು. ೧

೧೭. ಅದೇ., ಪು. ೩

೧೮. ಶಿವರಾಮ ಕಾರಂತ, ೨೦೧೧, ಢಂ ಢಂ ಢೋಲು, ಮುನ್ನುಡಿ, ಸ್ವಪ್ನಬುಕ್‌ಹೌಸ್, ಬೆಂಗಳೂರು.

೧೯. ಮಾಲಿನಿ ಮಲ್ಯ ಬಿ., ೧೯೯೪, ಶಿವರಾಮ ಕಾರಂತರ ಲೇಖನಗಳು, ೨ನೇ ಸಂಪುಟ, ಭಾಷೆ, ಶಿಕ್ಷಣ, ಸಂಸ್ಕೃತಿ, ಸಂಶೋಧನೆ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಪು. ೧೮೭

೨೦. ಶಿವರಾಮ ಕಾರಂತ, ೨೦೧೦, ಸ್ಮೃತಿ ಪಟಲದಿಂದ, ಐಬಿಎಚ್ ಪ್ರಕಾಶನ, ಬೆಂಗಳೂರು, ಪು. ೪೪೯

೨೧. ಶಿವರಾಮ ಕಾರಂತ, ಸಿರಿಗನ್ನಡ ಅರ್ಥಕೋಶ, ಮುನ್ನುಡಿ

೨೨. ಶಿವರಾಮ ಕಾರಂತ, ಸ್ಮೃತಿ ಪಟಲದಿಂದ, ೨೦೧೦, ಐಬಿಎಚ್ ಪ್ರಕಾಶನ, ಬೆಂಗಳೂರು, ಪು. ೪೫೩

೨೩. ಅದೇ., ಪು. ೪೫೪

೨೪. ಅದೇ., ಪು. ೪೫೬

೨೫. ಅದೇ., ಪು. ೪೫೪

೨೬. ಅದೇ., ಪು. ೪೫೬

೨೭. ಶಿವರಾಮ ಕಾರಂತ, ಹುಚ್ಚು ಮನಸ್ಸಿನ ಹತ್ತು ಮುಖಗಳು, ೧೯೮೪, ಅಕ್ಷರ ಪ್ರಕಾಶನ, ಸಾಗರ, ಪು. ೦೧

೨೮. ಶಿವರಾಮ ಕಾರಂತ, ಪಕ್ಷಿಗಳ ಅದ್ಭುತ ಲೋಕ, ೨೦೦೨, ಜಡಭರತ ಪ್ರಕಾಶನ, ಧಾರವಾಡ, ಮುನ್ನುಡಿ

೨೯. ಶಿವರಾಮ ಕಾರಂತ, ೧೯೩೬, ಬಾಲಪ್ರಪಂಚ, ಸತ್ಯಶೋಧನ ಪ್ರಕಟಣಮಂದಿರ, ಬೆಂಗಳೂರು, ಪು. ೦೧

೩೦. ಅದೇ., ಪು. ೬೦

೩೧. ಅದೇ., ಪು. ೬೦

೩೨. ಮಾಲಿನಿ ಮಲ್ಯ ಬಿ., ಶಿವರಾಮ ಕಾರಂತರ ಲೇಖನಗಳು, ೨ನೇ ಸಂಪುಟ, ೧೯೪೪ ಭಾಷೆ, ಶಿಕ್ಷಣ, ಸಂಸ್ಕೃತಿ, ಸಂಶೋಧನೆ, 'ಪಠ್ಯ ಪುಸ್ತಕಗಳು' ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಪು. ೧೨೭

೩೩. ಅದೇ ಪು. ೪೪೩

೩೪. ಅದೇ ಪು. ೪೪೫

ಅಧ್ಯಾಯ ಐದು

## ಸ್ವಾತಂತ್ರ್ಯಾನಂತರದ ಶಿಕ್ಷಣವ್ಯವಸ್ಥೆ: ಶಿವರಾಮ ಕಾರಂತರ ಶಿಕ್ಷಣ ಚಿಂತನೆಯ ಮುಖಾಮುಖಿ

೫.೧. ಸ್ವಾತಂತ್ರ್ಯೋತ್ತರ ಶೈಕ್ಷಣಿಕ ಆಯೋಗಗಳು

೫.೨. ರಾಷ್ಟ್ರೀಯ ಶಿಕ್ಷಣನೀತಿ

೫.೩. ಸ್ವಾತಂತ್ರ್ಯೋತ್ತರ ಶಿಕ್ಷಣ–ಕಾರಂತರ ಶಿಕ್ಷಣ ವಿಚಾರಗಳು

೫.೪. ಕಾರಂತರ ಪ್ರಾಥಮಿಕ ಭಾಷಾ ಶಿಕ್ಷಣ

೫.೫. ಕಾರಂತರ ಶಿಕ್ಷಣನೀತಿ

೫.೬. ಕಾರಂತರ ಶಿಕ್ಷಣ ಮತ್ತು ಸಾಮಾಜಿಕ ಪ್ರತಿಕ್ರಿಯೆ

ಅಧ್ಯಾಯ ಐದು

# ಸ್ವಾತಂತ್ರ್ಯೋತ್ತರ ಭಾರತದ ಶಿಕ್ಷಣ ವ್ಯವಸ್ಥೆ : ಶಿವರಾಮ ಕಾರಂತರ ಶಿಕ್ಷಣ ಚಿಂತನೆಯ ಮುಖಾಮುಖಿ

**ಭಾ**ರತದ ಪ್ರಜೆಗಳ ಆಂತರಿಕ ಮತ್ತು ಬಾಹ್ಯ ಜೀವನದ ಬೆಳವಣಿಗೆಯನ್ನು ಬ್ರಿಟಿಷರು ತಮ್ಮ ಆಡಳಿತದ ಕ್ರಮಗಳಿಂದ ಬದಲಾವಣೆಯನ್ನು ತರಲು ಪ್ರಯತ್ನಿಸಿದರು. ಇವರ ಆಡಳಿತದ ನಿಯಮಗಳು ಭಾರತೀಯ ಸಮಾಜ ವ್ಯವಸ್ಥೆಗೆ ಪೂರಕವಾಗಿರಲ್ಲಿಲ್ಲ. ಇಪ್ಪತ್ತನೆಯ ಶತಮಾನವು ಭಾರತದ ಇತಿಹಾಸದಲ್ಲಿ ಅತ್ಯಂತ ಸಂಕೀರ್ಣವಾದ ಶತಮಾನ. ಹಲವಾರು ಬಗೆಯ ಸಮಸ್ಯೆಗಳನ್ನು, ಸವಾಲುಗಳನ್ನು ಎದುರಿಸುತ್ತಾ ಬಿಕ್ಕಟ್ಟುಗಳಿಂದ ಬಿಡಿಸಿಕೊಳ್ಳುತ್ತಾ ಇದರ ಪರಿಹಾರದ ಒಡಲಲ್ಲಿಯೇ ಹುಟ್ಟಿಕೊಂಡ ಬೇರೆ ಸ್ವರೂಪದ ಸಮಸ್ಯೆಗಳಿಗೆ ಎದುರಾಗುತ್ತಾ ಸಾಗಬೇಕಾದ ಒತ್ತಡ ಮತ್ತು ಆತಂಕಗಳಲ್ಲಿ ಆ ಶತಮಾನವನ್ನು ಭಾರತವು ಕಳೆದಿದೆ. ಬ್ರಿಟಿಷ್ ವಸಾಹತುಶಾಹಿಯ ಹಿಡಿತದಿಂದ ಬಿಡುಗಡೆ ಪಡೆಯುವ ಸಲುವಾಗಿ ಬ್ರಿಟಿಷ್ ಸಾಮ್ರಾಜ್ಯ ಶಾಹಿಯಿಂದ ಅಹಿಂಸಾ ಮಾರ್ಗದಲ್ಲಿ ಹೋರಾಟವನ್ನು ನಡೆಸಿ ಸ್ವಾತಂತ್ರ್ಯವನ್ನು ಪಡೆದರು. ನಂತರ ಹಲವಾರು ಹೊಸ ಸ್ವರೂಪದ ಸಮಸ್ಯೆಗಳು ಹುಟ್ಟಿಕೊಂಡವು. ಪಾಶ್ಚಾತ್ಯ ಸಂಸ್ಕೃತಿಯ ಮತ್ತು ಭಾರತೀಯ ಸಂಸ್ಕೃತಿಗಳ ಮುಖಾಮುಖಿಯಲ್ಲಿ ಪಡೆಯುವ ಮತ್ತು ತಿರಸ್ಕರಿಸುವ ಅನಿವಾರ್ಯ ಸಂಕೀರ್ಣ ಸವಾಲುಗಳು, ಶತಶತಮಾನಗಳಿಂದ ನಡೆದು ಬಂದ ಜಾತಿ–ಜಾತಿಗಳ ನಡುವಿನ ಮೇಲು ಕೀಳು ಎಂಬಂತಹ ಸಾಮಾಜಿಕ ಅಸಮಾನತೆ ಮತ ಧರ್ಮಗಳ ನಡುವಿನ ಅನುಮಾನ

ಆತಂಕ ಘರ್ಷಣೆ, ಗಲಭೆಗಳು ಒಡ್ಡಿದ ಬಿಕ್ಕಟ್ಟುಗಳು, ಪುರುಷ ಮೇಲು ಸ್ತ್ರೀ ಕೀಳು ಎಂಬಂಥ ಲಿಂಗಾಧಾರಿತ ಪರಂಪರಾಗತವಾದ ನೂರಾರು ಸಮಸ್ಯೆಗಳು ಸವಾಲುಗಳು ಎದುರಾದವು. ಇಂತಹ ಪ್ರಮುಖ ಸಮಸ್ಯೆಗಳಲ್ಲಿ ಶಿಕ್ಷಣವೂ ಒಂದಾಗಿತ್ತು. ಭಾರತೀಯ ಜನತೆ ಮೌಢ್ಯತೆಯಿಂದ ಪಾರಾಗಿ ಜ್ಞಾನದ ಬೆಳಕು ಕಾಣಬೇಕಾದರೆ ಮತ್ತು ಸ್ವಾವಲಂಬಿಗಳಾಗಿ ಬದುಕಬೇಕಾದರೆ ಬಹುಮುಖ್ಯವಾಗಿ ಬೃಹತ್ ರಾಷ್ಟ್ರ ನಿರ್ಮಾಣವಾಗಬೇಕೆಂಬ ಆಶಯದಿಂದ ಸ್ವತಂತ್ರ ಭಾರತದ ಸಂವಿಧಾನದಲ್ಲಿ ಶಿಕ್ಷಣಕ್ಕೆ ಪ್ರಾಮುಖ್ಯತೆಯನ್ನು ನೀಡಲಾಯಿತು. ಸ್ವತಂತ್ರ ಭಾರತದಲ್ಲಿ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳಲ್ಲಿ ಸಮಗ್ರತೆಯನ್ನು ಸಾಧಿಸಲು ಶಿಕ್ಷಣದಲ್ಲಿ ಬದಲಾವಣೆ ಮಾಡಲು ಭಾರತ ಸರ್ಕಾರ ಯೋಚಿಸತೊಡಗಿತು. ಹೀಗಿದ್ದ ಸಂದರ್ಭದಲ್ಲಿ ೧೯೪೮ ರಲ್ಲಿ ಕೇಂದ್ರಶಿಕ್ಷಣ ಸಲಹಾ ಮಂಡಳಿಯು ಶಿಕ್ಷಣದ ಅಭಿವೃದ್ಧಿಗೆ ಸೂಕ್ತ ಸಲಹೆಗಳನ್ನು ಕೊಡಲು ಅಂದು ಶಿಕ್ಷಣ ಸಮಿತಿಗಳನ್ನು ರಚಿಸಿತು. ಭಾರತೀಯ ಶೈಕ್ಷಣಿಕ ವ್ಯವಸ್ಥೆಯನ್ನು ಸರಿಯಾಗಿ ಪರಿಶೀಲಿಸಿ ಉತ್ತಮ ಸಲಹೆ ಹಾಗೂ ಪರಿಹಾರಗಳನ್ನು ಕಂಡುಕೊಳ್ಳಲು ೧೯೫೨ ಸೆಪ್ಟೆಂಬರ್ ೨೦ರಂದು ಒಂದು ಪ್ರೌಢಶಿಕ್ಷಣ ಆಯೋಗವನ್ನು ನೇಮಿಸಲಾಯಿತು. ಇದರ ಅಧ್ಯಕ್ಷತೆಯನ್ನು ಖ್ಯಾತ ಶಿಕ್ಷಣತಜ್ಞರಾದ ಲಕ್ಷ್ಮಣ ಮೊದಲಿಯರ್ ವಹಿಸಿದ್ದರು. ಇವರ ಹೆಸರಿನಿಂದಲೇ ಮೊದಲಿಯರ್ ಆಯೋಗ ಎಂದು ಕರೆಯುತ್ತಾರೆ. ಈ ಆಯೋಗವು ಅಂದಿನ ಶಿಕ್ಷಣ ವ್ಯವಸ್ಥೆಯನ್ನು ಪರಿಶೀಲಿಸಿ ಹಲವಾರು ಅಂಶಗಳನ್ನು ಸರ್ಕಾರಕ್ಕೆ ಶಿಫಾರಸ್ಸು ಮಾಡಿತು. ಅದರ ಮುಖ್ಯ ಸೂಚನೆಗಳು ಎಂದರೆ ಸಾಮಾಜಿಕ ಜೀವನದ ವಾಸ್ತವತೆ ಮತ್ತು ಮಗುವಿನ ವ್ಯಕ್ತಿತ್ವಕ್ಕೆ ಅನುಸಾರವಾಗಿ ಶೈಕ್ಷಣಿಕ ಪಠ್ಯಕ್ರಮವು ಸಹಾಯಕವಾಗುವಂತಿರಬೇಕು. ಮಗುವಿನ ವೈಯಕ್ತಿಕ ವ್ಯತ್ಯಾಸಗಳನ್ನು ಗಣನೆಗೆ ತೆಗೆದುಕೊಂಡು ಆಸಕ್ತಿ, ಅಭಿರುಚಿಗೆ ತಕ್ಕಂತೆ ಪಠ್ಯವಸ್ತು ವೈವಿಧ್ಯಮಯ ಮತ್ತು ಸ್ಥಿತಿ ಸ್ಥಾಪಕತೆಯನ್ನು ಹೊಂದಿರಬೇಕೇಂದೂ, ಮಗವಿನ ಸಾಮಾಜಿಕ ಪರಿಸರಕ್ಕೆ ಹೊಂದಿಕೊಳ್ಳುವಂತೆ ಪಠ್ಯವಸ್ತು ಇರಬೇಕು. ಪಠ್ಯವಸ್ತುವಿನ ವಿಷಯಗಳು ಮಗುವನ್ನು ಪ್ರತ್ಯೇಕಗೊಳಿಸದಂತೆ ನಿರ್ಬಂಧವನ್ನು ಹೇರದೆ ವಿಷಯಗಳು ಒಂದಕ್ಕೊಂದು ಅಂತರ್‌ಸಂಬಂಧ ಕಲ್ಪಿಸುವಂತೆ ಶಿಫಾರಸ್ಸು ಮಾಡಿತು. ಅಲ್ಲದೆ ಪಠ್ಯವಸ್ತುವು ಮಗುವಿಗೆ ಸಾಮಾಜಿಕ ಅವಶ್ಯಕತೆಗಳನ್ನು ಪೂರೈಸುವಂತಿರಬೇಕೆಂಬ ಹಲವಾರು ಅಂಶಗಳನ್ನು ಶಿಫಾರಸ್ಸು ಮಾಡಿತು.

ಪಠ್ಯಪುಸ್ತಕಗಳಲ್ಲಿ ಇಂಗ್ಲಿಷ್, ಸಮಾಜ, ಸಾಮಾನ್ಯವಿಜ್ಞಾನ, ಗಣಿತ, ಕಲೆ ಮತ್ತು ಸಂಗೀತ, ದೈಹಿಕ ಶಿಕ್ಷಣ ಮುಂತಾದ ವಿಷಯಗಳನ್ನು ಸೇರ್ಪಡೆ ಮಾಡಬೇಕೆಂದು ಸೂಚಿಸಿತು. ಐಚ್ಛಿಕ ವಿಷಯಗಳಲ್ಲಿ ಏಳು ಗುಂಪುಗಳನ್ನಾಗಿ ಮಾಡಿ ವಿದ್ಯಾರ್ಥಿಗಳು ವಿಶೇಷವಾಗಿ ತಮಗೆ ಇಷ್ಟ ವಾದಂತಹ ಮೂರು ವಿಷಯಗಳನ್ನು ಆಯ್ಕೆ ಮಾಡಿಕೊಳ್ಳಬಹುದಾಗಿತ್ತು. ಮಾನವಿಕ ಶಾಸ್ತ್ರಗಳು,

ವಿಜ್ಞಾನಗಳು, ತಾಂತ್ರಿಕ ವಿಷಯಗಳು ವಾಣಿಜ್ಯ ವಿಷಯಗಳು ಕೃಷಿ ವಿಷಯಗಳು, ಲಲಿತಕಲೆ ವಿಷಯಗಳಲ್ಲಿ ಮುಕ್ತವಾಗಿ ವಿದ್ಯಾರ್ಥಿಗಳನ್ನು ತೊಡಗುವಂತೆ ಅವಕಾಶ ಕಲ್ಪಿಸಲಾಯಿತು. ಬಾಲಕಿಯರಿಗೆ ಪ್ರತ್ಯೇಕವಾಗಿ ಗೃಹವಿಜ್ಞಾನವನ್ನು ಕಲಿಯಲು ಅವಕಾಶ ನೀಡಲಾಯಿತು. ಈ ಆಯೋಗವು ಉತ್ತಮ ವಿಷಯಗಳನ್ನು ಒಳಗೊಂಡಿರುವಂತೆ ಶಿಫಾರಸ್ಸು ಮಾಡಿತು. ಪಠ್ಯಪುಸ್ತಕಗಳ ಆಯ್ಕೆಯ ಸಮುದಾಯಕ್ಕೆ ಪೂರ್ಣಸ್ವಾತಂತ್ರ್ಯ ಮತ್ತು ಹೆಚ್ಚು ಅಧಿಕಾರ ಕೊಟ್ಟು ಹಲವು ಹಂತದಲ್ಲಿ ಅಭ್ಯಾಸವನ್ನು ಮಾಡಲು ಅನುಕೂಲ ಮಾಡಿಕೊಟ್ಟಿತು. ಶಿಕ್ಷಕರಿಗೆ ಉತ್ತಮ ಸೌಲಭ್ಯ ಲಭಿಸುವಂತೆಮಾಡಿ ಉತ್ತಮ ಕಾರ್ಯನಿರ್ವಹಿಸುವಂತೆ ವ್ಯವಸ್ಥೆ ಮಾಡಲಾಯಿತು. ಭೋದನಾ ವಿಧಾನವು ಕೇವಲ ಮಕ್ಕಳಿಗೆ ಜ್ಞಾನವನ್ನು ಕೊಡುವುದಲ್ಲದೆ. ಇದರ ಗುರಿ, ಉದ್ದೇಶ, ಮತ್ತು ಉತ್ತಮ ಮೌಲ್ಯಗಳಿಂದ ಮಕ್ಕಳಲ್ಲಿ ಆಸಕ್ತಿ, ಅಭಿರುಚಿ ಮೂಡಿಸುವಂತಿರಬೇಕು. ಹಾಗೆಯೇ ಮಕ್ಕಳ ವೈಯಕ್ತಿಕ ಭಿನ್ನತೆ ಮತ್ತು ಬುದ್ಧಿಮಟ್ಟವನ್ನು ಗಣನೆಗೆ ತೆಗೆದುಕೊಂಡು ವಿದ್ಯಾರ್ಥಿಗಳು ತಮ್ಮ ಜ್ಞಾನದಲ್ಲಿ ಪ್ರಗತಿಹೊಂದಲು ಭೋದನಾ ವಿಧಾನವನ್ನು ಕೈಗೊಳ್ಳಬೇಕೆಂದು ತಿಳಿಸಿತು.

ಗ್ರಾಮೀಣ ಪ್ರದೇಶದಲ್ಲಿ ಕೃಷಿ ಪ್ರಧಾನವಾದ ಶಾಲೆಗಳನ್ನು ಹಾಗೂ ಪಟ್ಟಣಗಳಲ್ಲಿ ಔದ್ಯೋಗಿಕ ಕೇಂದ್ರಗಳ ಸಮೀಪದಲ್ಲಿ ತಾಂತ್ರಿಕಶಾಲೆಗಳನ್ನು ತೆರೆಯುವುದು, ಮಾತೃಭಾಷೆ ಜೊತೆಗೆ ಇಂಗ್ಲಿಷ್ ಹಾಗೂ ಹಿಂದಿ ಭಾಷಾಮಾಧ್ಯಮಗಳ ಮೂಲಕ ವಿದ್ಯಾರ್ಥಿಗಳು ಸಮಾಜ ವಿಜ್ಞಾನ ಹಾಗೂ ವಿಜ್ಞಾನ ಇವು ಅವಶ್ಯವಾಗಿ ಕಲಿಯಬೇಕಾದ ವಿಷಯಗಳಾಗಿದ್ದವು. ಮಾಧ್ಯಮಿಕ ಶಾಲೆಯ ಎರಡನೆಯ ವರ್ಷದಲ್ಲಿ ವಿದ್ಯಾರ್ಥಿಗಳು ಮಾನವಿಕ ವಿಜ್ಞಾನ ತಾಂತ್ರಿಕ, ವಾಣಿಜ್ಯ, ಕೃಷಿ, ಲಲಿತಕಲೆ, ಗೃಹವಿಜ್ಞಾನ ಈ ವಿಷಯಗಳಲ್ಲಿ ಯಾವುದಾದರೂ ಒಂದು ವಿಷಯವನ್ನು ಆಯ್ಕೆ ಮಾಡಬೇಕಿತ್ತು. ಇದರ ಜೊತೆಗೆ ಧಾರ್ಮಿಕ ಹಾಗೂ ನೈತಿಕ ಶಿಕ್ಷಣವನ್ನು ಕೊಡುವುದು ಹಾಗೂ ಶೈಕ್ಷಣಿಕ ಹಾಗೂ ವೃತ್ತಿ ನಿರ್ದೇಶನ ಮಾಡುವುದು, ನಲವತ್ತು ವರ್ಷದೊಳಗಿನ ಎಲ್ಲಾ ಶಿಕ್ಷಕರು ಶಾರೀರಿಕಶಿಕ್ಷಣದಲ್ಲಿ ಪಾಲ್ಗೊಳ್ಳುವಂತೆ ಶಿಫಾರಸ್ಸು ಗಳನ್ನು ಮಾಡಿತು. ಆದರೆ ಕಾರ್ಯರೂಪಕ್ಕೆ ತರುವಾಗ ಶಿಕ್ಷಣಕ್ಷೇತ್ರಕ್ಕೆ ಪೂರ್ಣ ಪ್ರಯೋಜನ ವಾಗಿಲ್ಲವೆಂದೇ ಹೇಳಬಹುದು. ಈ ಆಯೋಗವು ದೋಷ ಮತ್ತು ಮಿತಿಗಳಿಂದ ಕೂಡಿದೆ. ಪ್ರಾಥಮಿಕ ಶಿಕ್ಷಣದಲ್ಲಿ ಬೇರೆ ಭಾಷೆಯನ್ನು ಕಲಿಸುವುದು ಮತ್ತು ಸ್ತ್ರೀಯರಿಗೆ ಹೆಚ್ಚಿನ ಆದ್ಯತೆ ನೀಡಲಿಲ್ಲ. ಪಠ್ಯವಸ್ತುವಿನಲ್ಲಿ ಏಕಕಾಲಕ್ಕೆ ಮಕ್ಕಳಿಗೆ ಮೂರು ಭಾಷೆಗಳನ್ನು ಕಲಿಸುವುದನ್ನು ಶಿಫಾರಸ್ಸು ಮಾಡಿರುವುದರಿಂದ ವಿದ್ಯಾರ್ಥಿಗಳಿಗೆ ಹೆಚ್ಚು ಹೊರೆಯಾಗಿದೆ. ಇದರಿಂದ ಈ ಆಯೋಗವು ಶಿಕ್ಷಣ ಕ್ಷೇತ್ರದಲ್ಲಿ ಸಂಪೂರ್ಣವಾಗಿ ಯಶಸ್ವಿಯಾಗಲಿಲ್ಲ.

ಭಾರತದ ಶಿಕ್ಷಣ ವ್ಯವಸ್ಥೆಯಲ್ಲಿ ಸುಧಾರಣೆಯನ್ನು ತರಲು ಭಾರತ ಸರ್ಕಾರವು ಇನ್ನಿತರ ಸಮಿತಿಗಳನ್ನು ರಚಿಸಲಾಯಿತು. ತಾರಾಚಂದ ಸಮಿತಿ, ವಿಶ್ವವಿದ್ಯಾಲಯಗಳ ಆಯೋಗ, ಮಾಧ್ಯಮಿಕ ಆಯೋಗ, ಕೊಠಾರಿ ಆಯೋಗ, ವೃತ್ತಿ ಶಿಕ್ಷಣ ಆಯೋಗ ಮತ್ತು ರಾಷ್ಟ್ರೀಯ ಶಿಕ್ಷಣ ನೀತಿ ಹಲವಾರು ಪ್ರಮುಖ ಆಯೋಗಗಳನ್ನು ರಚಿಸಿ ಶಿಕ್ಷಣವ್ಯವಸ್ಥೆಯಲ್ಲಿ ಸುಧಾರಣೆಗಳನ್ನು ತರಲು ಪ್ರಯತ್ನಿಸಲಾಯಿತು. ಕೇಂದ್ರ ಶಿಕ್ಷಣ ಸಲಹಾ ಮಂಡಲಿಯು ತಾರಾಚಂದ ಅವರ ಮುಖಂಡತ್ವದಲ್ಲಿ ಸೆಕೆಂಡರಿ ಶಿಕ್ಷಣವನ್ನು ಪರಿಶೀಲಿಸಿ ಸಮಸ್ಯೆಗಳನ್ನು ಬಗೆಹರಿಸಿ ಸಲಹೆಗಳನ್ನು ನೀಡಲು ಸಮಿತಿಯನ್ನು ರಚಿಸಲಾಯಿತು. ಆ ಸಮಿತಿಯು ಪದವಿಯನ್ನು ಪಡೆಯುವ ಶಿಕ್ಷಣವನ್ನು ಪ್ರಾರಂಭಿಸುವ ಪೂರ್ವದಲ್ಲಿ ವಿದ್ಯಾರ್ಥಿಯು ಹನ್ನೆರಡು ವರ್ಷಗಳ ಅವಧಿಯಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಪಡೆದಿರಬೇಕು. ವಿಶ್ವವಿದ್ಯಾಲಯದಲ್ಲಿ ಶಿಕ್ಷಣ ಮಾಧ್ಯಮವು ಇಂಗ್ಲಿಷ್ ಭಾಷೆಯಾದದ್ದರಿಂದ ಐದನೇ ತರಗತಿಯಿಂದ ಹನ್ನೆರಡನೇ ತರಗತಿಯವರೆಗೆ ಇಂಗ್ಲಿಷ್ ಭಾಷೆಯ ಕಲಿಕೆಯು ಕಡ್ಡಾಯವಾಗಿರಬೇಕೆಂದು ಸಲಹೆಯನ್ನು ನೀಡಿತು. ಪಬ್ಲಿಕ್ ಸ್ಕೂಲ್‌ಗಳನ್ನು ತೆರೆದು ಅವುಗಳಲ್ಲಿ ಪ್ರವೇಶ ಪಡೆಯಲು ಶಿಕ್ಷಣ ಗುಣಮಟ್ಟವೇ ಪ್ರಧಾನವಾಗಿರಬೇಕು ಎಂದು ಇತ್ಯಾದಿ ಪ್ರಮುಖ ಶಿಫಾರಸ್ಸುಗಳನ್ನು ಮಾಡಿತು. ಇದಾದ ನಂತರ ೧೯೬೪ರಲ್ಲಿ ಕೊಠಾರಿ ಅವರ ಸಹಯೋಗದಲ್ಲಿ ಶಿಕ್ಷಣ ಆಯೋಗವು ಅಸ್ತಿತ್ವಕ್ಕೆ ಬಂದಿತು. ಈ ಆಯೋಗವು ಇಡೀ ಶಿಕ್ಷಣಕ್ರಮವನ್ನು ಸಮಗ್ರವಾಗಿ ಶಿಶುವಿಹಾರದಿಂದ ವಿಶ್ವವಿದ್ಯಾಲಯದವರೆಗೆ ಪರಿಶೀಲಿಸಿತು. ಈ ಕೊಠಾರಿ ಆಯೋಗವು ನೂರುದಿನಗಳ ಕಾಲ ದೇಶ ಪರ್ಯಾಟನೆ ಮಾಡಿ ಜನರ ನಡುವೆ ಬೇಕಾದ ಅಂಕಿ ಅಂಶಗಳನ್ನು ಸಂದರ್ಶನದ ಮೂಲಕ ಸಂಗ್ರಹಿಸಿ ಇದಕ್ಕೆ ಸಂಬಂಧಪಟ್ಟ ಎರಡು ವಿಚಾರ ಗೋಷ್ಠಿಗಳನ್ನು ನಡೆಸಿತು. ಇದರಲ್ಲಿ ಶೈಕ್ಷಣಿಕ ಸಮಸ್ಯೆಗಳನ್ನು ಸುದೀರ್ಘವಾಗಿ ಸಂಗ್ರಹಿಸಿತು. ಈ ವರದಿಯು ಮೂರು ಭಾಗಗಳಿಂದ ಕೂಡಿದ್ದು ೧೯ ಅಧ್ಯಾಯಗಳನ್ನು ಒಳಗೊಂಡಿದೆ. ೧೯೬೬ರಲ್ಲಿ ವರದಿಯನ್ನು ಕೇಂದ್ರ ಸರ್ಕಾರಕ್ಕೆ ಮಂಡಿಸಿತು. ಶಾಲಾ ಶಿಕ್ಷಣವನ್ನು ಕಿರಿಯ ಪ್ರಾಥಮಿಕ, ಉನ್ನತ ಪ್ರಾಥಮಿಕ, ಹಿರಿಯ ಪ್ರೌಢಶಾಲೆ ಮತ್ತು ಉನ್ನತ ಪ್ರೌಢಶಾಲೆ ಎಂದು ವಿಂಗಡಿಸಿ ವಿವಿಧ ಹಂತಗಳಲ್ಲಿ ಯಾವ ಯಾವ ಪಠ್ಯವಸ್ತು ಇರಬೇಕೆಂದು ತಿಳಿಸಿತು. ಕಿರಿಯ ಪ್ರಾಥಮಿಕಶಾಲೆ ೧ ರಿಂದ ೪ನೆಯ ತರಗತಿಯವರೆಗೆ ಇದ್ದು ಅಲ್ಲಿ ಮಾತೃಭಾಷೆ ಇಲ್ಲವೇ ಪ್ರಾಂತೀಯಭಾಷೆ ಒಂದನ್ನು ಮಾತ್ರ ಕಲಿಸಬೇಕೆಂದು ಹೇಳುತ್ತದೆ. ಮೂರನೆಯ ಮತ್ತು ನಾಲ್ಕನೆಯ ತರಗತಿಯ ಮಕ್ಕಳಿಗೆ ಗಣಿತ, ವಿಜ್ಞಾನ ಮತ್ತು ಸಮಾಜ ಕಡ್ಡಾಯವಾಗಿ ಕಲಿಸಬೇಕೆಂದು ಹೇಳುತ್ತದೆ. ಎರಡನೆಯ ಹಂತದಲ್ಲಿ ಹಿಂದಿ, ಇಂಗ್ಲಿಷ್, ಗಣಿತ, ವಿಜ್ಞಾನ, ಸಮಾಜದ ಪರಿಚಯ ಮುಂತಾದವು ಕಲಿಸಬೇಕೆಂದು ತಿಳಿಸುತ್ತದೆ.

ಮೂರನೆಯ ಹಂತದಲ್ಲಿ ಮಾತೃಭಾಷೆ ಅಥವಾ ಪ್ರಾಂತೀಯಭಾಷೆ, ಹಿಂದಿ, ಇಂಗ್ಲಿಷ್, ಈ ಮೂರು ಭಾಷೆಗಳನ್ನು ಈ ಹಂತದಲ್ಲಿ ಕಡ್ಡಾಯವಾಗಿ ಕಲಿಸಬೇಕೆಂದು ತಿಳಿಸುತ್ತದೆ. ಜೊತೆಗೆ ಗಣಿತ, ವಿಜ್ಞಾನ, ಭೂಗೋಳ, ಪೌರನೀತಿ, ಸಮಾಜಸೇವೆಯ ವಿಷಯ ದೈಹಿಕ ಶಿಕ್ಷಣ, ನೈತಿಕ ಶಿಕ್ಷಣವನ್ನು ನೀಡಬೇಕೆಂದು ತಿಳಿಸುತ್ತದೆ. ಉನ್ನತ ಪ್ರೌಢಶಾಲೆಯಲ್ಲಿ ಕಲಿಸಬೇಕಾದ ವಿಷಯಗಳನ್ನು ತಿಳಿಸುತ್ತದೆ. ಭಾಷೆ, ಇತಿಹಾಸ, ಭೂಗೋಳ, ತರ್ಕಶಾಸ್ತ್ರ, ಮನಃಶಾಸ್ತ್ರ, ಸಮಾಜಶಾಸ್ತ್ರ, ಕಲೆ, ರಸಾಯನಶಾಸ್ತ್ರ, ಗಣಿತ, ಜೀವಶಾಸ್ತ್ರ, ಭೂಗರ್ಭ ಶಾಸ್ತ್ರ, ಗೃಹವಿಜ್ಞಾನ, ಇವುಗಳಲ್ಲಿ ಯಾವುದಾದರೂ ಮೂರು ವಿಷಯಗಳನ್ನು ಆಯ್ಕೆ ಮಾಡಿಕೊಳ್ಳಬಹುದಾಗಿತ್ತು. ಶಾಲೆಗಳಲ್ಲಿ ಭೋದನಾ ವಿಧಾನವು ಅತ್ಯಂತ ಪರಿಣಾಮಕಾರಿಯಾಗಿ ಇರಬೇಕೆಂದು ಸೂಚಿಸಿತ್ತು. ಭೋದನಾ ವಿಧಾನದಲ್ಲಿ ಶಿಕ್ಷಕರಿಗೆ ಪರಿಪೂರ್ಣ ಸ್ವಾತಂತ್ರ್ಯ ನೀಡುವುದು ಮತ್ತು ಹೊಸ ಭೋದನಾ ವಿಧಾನಗಳ ತಂತ್ರ ಮತ್ತು ಕೌಶಲಗಳ ಬಗ್ಗೆ ಕಾರ್ಯಾಗಾರ, ಮಾದರಿ ಪಾಠಗಳನ್ನು ಕೊಡುವುದಕ್ಕೆ ಶಿಕ್ಷಣ ಸಂಸ್ಥೆಗಳನ್ನು ಏರ್ಪಾಡು ಮಾಡುವುದು. ಶಿಕ್ಷಕರಿಗೆ ಉತ್ತಮ ತರಬೇತಿಯನ್ನು ನೀಡುವುದು ಮುಂತಾದ ಅಂಶಗಳನ್ನು ತಿಳಿಸಿತ್ತು. ಇಡೀ ರಾಷ್ಟ್ರದಲ್ಲಿ ಏಕರೂಪ ಶಿಕ್ಷಣವನ್ನು ನೀಡಬೇಕೆಂದು ಶಿಫಾರಸ್ಸು ಮಾಡಿತು. ಪ್ರತಿಯೊಂದು ಶಾಲೆಗೆ ಸಮಾನ ಅವಕಾಶ ಕಲ್ಪಿಸಬೇಕೆಂದು ಆಯಾ ರಾಜ್ಯಗಳ ಮಾತೃಭಾಷೆಗಳೊಂದಿಗೆ ಇಂಗ್ಲಿಷ್ ಹಿಂದಿಯನ್ನು ಕಲಿಸಬೇಕೆಂದೂ ಸೂಚಿಸಿತ್ತು. ಸ್ವಾತಂತ್ರ್ಯ ನಂತರ ಭಾರತವು ಶೈಕ್ಷಣಿಕ ಬೆಳವಣಿಗೆಗೆ ಹಲವಾರು ಆಯೋಗಗಳನ್ನು ರಚನೆ ಮಾಡಿದರೂ ವಿದ್ಯಾರ್ಥಿಗಳಲ್ಲಿ ಹುದುಗಿದ ಅಂತಃಶಕ್ತಿಯನ್ನು ಹೊರತೆಗೆದು ಸಂಪೂರ್ಣವಾಗಿ ವಿಕಾಸ ಹೊಂದುವಂತೆ ಮಾಡುವಲ್ಲಿ ಸಫಲವಾಗಲಿಲ್ಲ. ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಭಾರತದ ಶೈಕ್ಷಣಿಕರಂಗದ ಸುಧಾರಣೆಗೆ ಹಲವಾರು ಪ್ರಯತ್ನಗಳು ನಡೆದರೂ ಇನ್ನೂ ಶೇ. ೬೦ರಷ್ಟು ಜನರು ಅನಕ್ಷರಸ್ಥರಾಗಿಯೇ ಉಳಿದಿದ್ದಾರೆ. ಭಾರತದಲ್ಲಿ ಇನ್ನೂ ಶೇ. ೩೦ರಷ್ಟು ಮಕ್ಕಳು ಶಾಲೆಯನ್ನೇ ಸೇರುವುದಿಲ್ಲ. ಶಾಲೆಗೆ ಸೇರುವ ಮಕ್ಕಳಲ್ಲಿ ಅರ್ಧದಷ್ಟು ಮಕ್ಕಳು ೫ನೇ ತರಗತಿ ತಲುಪುವುದರೊಳಗೆ ಶಾಲೆಯನ್ನು ಬಿಡುತ್ತಾರೆ. ಮುಕ್ಕಾಲು ಭಾಗದಷ್ಟು ೮ನೇ ತರಗತಿಯಿಂದ ೧೦ನೇ ತರಗತಿಗೆ ಬರುವುದರೊಳಗೆ ಶಾಲೆಯನ್ನು ಬಿಡುತ್ತಾರೆ. ಕೇವಲ ಶೇ.೧೫ರಷ್ಟು ಮಕ್ಕಳು ೧೨ನೇ ತರಗತಿಗೆ ಬರುತ್ತಾರೆ. ಶೇ.೧ಕ್ಕಿಂತಲೂ ಕಡಿಮೆ ಅಭ್ಯರ್ಥಿಗಳು ಪದವಿಯನ್ನು ಪಡೆಯುತ್ತಾರೆ. ಇದನ್ನು ಗಮನಿಸಿದರೆ ಶಿಕ್ಷಣ ವ್ಯವಸ್ಥೆಯಲ್ಲಿ ಇನ್ನೂ ಹಲವಾರು ಬದಲಾವಣೆಗಳನ್ನು ಮಾಡಬೇಕಾಗಿದೆ. ಭಾರತ ಸಂವಿಧಾನ ಜಾರಿಯಾದ ಹತ್ತು ವರ್ಷಗಳೊಳಗೆ ಪ್ರಾಥಮಿಕ ಶಿಕ್ಷಣವನ್ನು ದೇಶದ ೧೪ ವರ್ಷದ ಎಲ್ಲಾ ಮಕ್ಕಳಿಗೂ ಒದಗಿಸಲಾಗುವುದೆಂದು ಘೋಷಿಸಿತು. ಆದರೆ ೧೯೬೦ರಲ್ಲಿ ಈ ಗುರಿ ಸಾಧನೆಯಾಗದೆ ಗುರಿ ದಿನಾಂಕವನ್ನು ೧೯೬೫ಕ್ಕೆ ಮುಂದೂಡಲಾಯಿತು.

ಮೊದಲನೆಯ ಪಂಚವಾರ್ಷಿಕ ಯೋಜನೆಯು ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಆದ್ಯತೆಯನ್ನು ನೀಡಿತು. ಪ್ರಾಥಮಿಕ ಶಿಕ್ಷಣಕ್ಕೆ ಅತಿ ಹೆಚ್ಚು ಪ್ರಾಶಸ್ತ್ಯ ಕೊಟ್ಟಿರುವ ಯೋಜನೆ ಪ್ರಥಮ ಪಂಚವಾರ್ಷಿಕ ಯೋಜನೆ. ಆದರೆ ಪ್ರಾಥಮಿಕ ಶಾಲಾಮಕ್ಕಳ ಶೇ.೧೦೦ರಷ್ಟು ದಾಖಲಾತಿಯನ್ನು ಸಾಧಿಸಲು ಈ ಯೋಜನೆಯಲ್ಲಿ ಸಾಧ್ಯವಾಗಲಿಲ್ಲ. ಹೀಗಾಗಿ ೧೯೫೮ರಲ್ಲಿ ಯೋಜನಾ ಆಯೋಗದ ಶೈಕ್ಷಣಿಕ ಸಮಿತಿಯು ಈ ದಾಖಲಾತಿಯನ್ನು ಇಡಿಯಾಗಿ ಸಾಧಿಸುವ ಕಲ್ಪನೆಯನ್ನು ಕೈಬಿಡಲು ಸೂಚಿಸಿತು. ಇದಕ್ಕೆ ಬದಲಾಗಿ ೬-೧೧ ವಯೋಮಾನ ಹಾಗೂ ೧೧-೧೪ರ ವಯೋಮಾನದ ಮಕ್ಕಳ ಸಾರ್ವತ್ರಿಕ ದಾಖಲಾತಿ ಎಂದು ಎರಡು ವಿಭಾಗಗಳಾಗಿ ವಿಂಗಡಿಸಿಕೊಂಡು ಗುರಿ ಸಾಧನೆಗೆ ಪ್ರಯತ್ನಿಸಲು ಶಿಫಾರಸ್ಸು ಮಾಡಿತು. ೬-೧೧ ವಯೋಮಾನದ ಮಕ್ಕಳ ಸಾರ್ವತ್ರಿಕ ದಾಖಲಾತಿಗೆ ಪ್ರಥಮ ಪ್ರಾಶಸ್ತ್ಯ ನೀಡಿ ಮೂರನೆಯ ಪಂಚವಾರ್ಷಿಕ ಯೋಜನೆಯ (೧೯೬೧-೬೬) ಹೊತ್ತಿಗೆ ಈ ಗುರಿ ಸಾಧಿಸಲು ಸೂಚಿಸಿತು. ಹಿರಿಯ ಪ್ರಾಥಮಿಕ ಹಂತದ ಮಕ್ಕಳ ಸಾರ್ವತ್ರಿಕ ದಾಖಲೆಯನ್ನು ಐದನೆಯ ಪಂಚವಾರ್ಷಿಕ ಯೋಜನೆ(೧೯೭೪-೭೯) ಹೊತ್ತಿಗೆ ಪೂರ್ಣಗೊಳಿಸಲು ಸೂಚಿಸಿತು. ಆದರೂ ದೇಶದ ಎಲ್ಲಾ ಮಕ್ಕಳಿಗೆ ಶಿಕ್ಷಣವನ್ನು ಪೂರ್ಣ ಪ್ರಮಾಣದಲ್ಲಿ ಒದಗಿಸುವಲ್ಲಿ ವಿಫಲವಾಗಿದೆ.

ಶಿವರಾಮ ಕಾರಂತರು ಸ್ವಾತಂತ್ರ್ಯೋತ್ತರ ಭಾರತದ ಶಿಕ್ಷಣ ವ್ಯವಸ್ಥೆಯನ್ನು ಕುರಿತಾಗಿ ವಿರೋಧಿಸಿರುವ ಕ್ರಮವನ್ನು ಹಲವಾರು ಶೈಕ್ಷಣಿಕ ಲೇಖನಗಳಲ್ಲಿ ಗಮನಿಸಬಹುದು.

> "ಈಗಿನ ಯಾವತ್ತು ಶಾಲೆಗಳಲ್ಲಿ ದೊರಯುವ ವಿದ್ಯಾಭ್ಯಾಸವು ಒಂದೇ ತೆರನಾಗಿದೆ. ಶಾಲಾ ಶಿಕ್ಷಣವು ಕೇವಲ ಯಾಂತ್ರಿಕವಾಗಿ ನಡೆಯುತ್ತಾ ಬಂದಿದೆ. ವಿದ್ಯೆಯೆಂಬುದು ಮಕ್ಕಳ ಪಾಲಿಗೆ ಅವರಿಗೆ ಬೇಡದ, ಅವರು ಬಯಸದ ಔಷಧದಂತಾಗಿದೆ. ಈಗಿನ ಶಾಲೆಗಳಲ್ಲಿ ಮಕ್ಕಳ ಕ್ರಿಯಾಶಕ್ತಿಯು ಪೂರ್ಣ ನಷ್ಟವಾಗಿ, ಅವರು ಶಾಲೆಯಿಂದ ಹೊರಗೆ ಬರುವಾಗ ತೇಜಸ್ಸಿಲ್ಲದ, ಉತ್ಸಾಹವಿಲ್ಲದ, ನಗುವಿಲ್ಲದ ಶವವಾಗಿ ಬರುತ್ತಾರೆ"[೧]

ಎಂದು ಸ್ವಾತಂತ್ರ್ಯೋತ್ತರ ಶಿಕ್ಷಣ ವ್ಯವಸ್ಥೆಯನ್ನು ಕುರಿತು ಆತಂಕವನ್ನು ವ್ಯಕ್ತಪಡಿಸಿದ್ದಾರೆ. ಶೈಕ್ಷಣಿಕ ಸುಧಾರಣೆಗಾಗಿ ಸ್ಪಷ್ಟವಾದ ನಿರ್ದೇಶನ ಕೊಟ್ಟಿರುವುದನ್ನು ಕಾರಂತರ ಲೇಖನಗಳಲ್ಲಿ ಕಾಣಬಹುದು. ಬೇರೆ ದೇಶದಲ್ಲಿರುವ ಶಿಕ್ಷಣ ಕ್ರಮಗಳನ್ನು ಕುರುಡಾಗಿ ಅನುಕರಿಸಿ ನಮ್ಮ ದೇಶದ ತರುಣರ ಮೇಲೆ ಹೇರಿ ಅವರ ವ್ಯಕ್ತಿತ್ವವಿಕಾಸಕ್ಕೆ ಅಡೆತಡೆಯಾಗಿರುವುದು ಮತ್ತು ಶಿಕ್ಷಣ ಮಾರ್ಗವನ್ನು ಸುಧಾರಿಸಬೇಕೆಂದು ಶಿಕ್ಷಣತಜ್ಞರು ಮಾರ್ಗೋಪಾಯ ದಾರಿಯನ್ನು ಹುಡುಕದೆ ಮೌನವಹಿಸಲಾಗಿದೆ. ಇಂದು ಉದ್ದೇಶಿಸಿದ ಫಲವನ್ನು ಪಡೆಯದೇ ಇರುವಾಗ ಒಂದು ಪದ್ಧತಿಯಿಂದ ಇನ್ನೊಂದು ಪದ್ಧತಿಗೆ ವರ್ಗಾವಣೆಗೊಳ್ಳುವುದನ್ನು ಹೋಗುವುದನ್ನು

ಕಾರಂತರು ವಿರೋಧ ವ್ಯಕ್ತಪಡಿಸುತ್ತಾರೆ. ಇಂತಹ ಅಂಧಾನುಕರಣೆಯ ಪ್ರಯತ್ನಗಳಿಂದ ಸಾರ್ವಜನಿಕ ಹಣ ಹಾಳು, ಮಕ್ಕಳ ಆಯುಷ್ಯವೂ ಹಾಳು ಎನ್ನುತ್ತಾರೆ. ಸ್ವಾತಂತ್ರ್ಯೋತ್ತರ ಶಿಕ್ಷಣ ವ್ಯವಸ್ಥೆಯಲ್ಲಿ ಮಕ್ಕಳು ಪಡೆಯುವ ಜ್ಞಾನಕ್ಕೂ ಅವರು ಮುಂದೆ ನಡೆಸುವ ಜೀವನಕ್ಕೂ ಯಾವುದೇ ಪರಸ್ಪರ ಸಂಬಂಧವಿಲ್ಲದಿರುವುದನ್ನು ಕಾಣಬಹುದು. ಇಂದು ಕೇವಲ ಮಾಹಿತಿಯನ್ನು ಕುರಿತ ವಿಷಯಗಳನ್ನೆಲ್ಲಾ ಸ್ಮರಣೆಯಲ್ಲಿ ತುಂಬಿಕೊಳ್ಳುವುದೊಂದೆ ಶಿಕ್ಷಣದ ಮುಖ್ಯ ಉದ್ದೇಶವಾಗಿದೆ. ಚರಿತ್ರೆ, ಭೂಗೋಳ, ಸಮಾಜವಿಜ್ಞಾನ, ಮೊದಲಾದ ಯಾವ ವಿಷಯವನ್ನು ತೆಗೆದುಕೊಂಡರೂ ಅವುಗಳನ್ನು ಹಿರಿಯರು ಮಾಡಿಟ್ಟ ಸಿದ್ಧಾಂತಗಳನ್ನಾಗಿಯೇ ಮಕ್ಕಳ ಮೇಲೆ ಹೇರಿರುವ ಪಠ್ಯಕ್ರಮ ಬಂದಿದೆ. ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಶಿವರಾಮ ಕಾರಂತರು ಹೆಚ್ಚು ಕೆಲಸ ಮಾಡಿದ್ದಾರೆ. ಪ್ರಾಥಮಿಕ ಶಿಕ್ಷಣವನ್ನು ಗುರಿಯಾಟ್ಟುಕೊಂಡು ಮಗುವಿನ ಬಗ್ಗೆ ಕಾಳಜಿವಹಿಸುವಲ್ಲಿ ಅವರು ಚಿಂತನೆ, ಪ್ರಯೋಗಗಳನ್ನು ಮಾಡಿದ್ದಾರೆ. ಮಕ್ಕಳ ಪ್ರಪಂಚವನ್ನು ಜಡಗೊಳಿಸುತ್ತಾ ಭಾವನಾ ಜೀವಿಗಳಾದ ಮಕ್ಕಳನ್ನು ಬಾಲವಾಡಿಗಳಲ್ಲಿ ಚೆನ್ನಾಗಿ ಕುಳಿತು ಆಡಲು ಸರಿಯಾದ ಜಾಗ ಇಲ್ಲದಿದ್ದರೂ ಶಿಶುಸೇವೆ ಮಾಡಲು ಹಣ ಸುಲಿವವರ ಮೇಲೆ ಕಾರಂತರಿಗೆ ಎಲ್ಲಿಲ್ಲದ ಆಕ್ರೋಶ. ಮಕ್ಕಳ ಮನಸ್ಸನ್ನು ವಿಕಾಸಗೊಳಿಸಲಾರದ ಶಿಶುಕೇಂದ್ರಗಳನ್ನು ಮಕ್ಕಳ ಹಿಂಸಾಲಯ ಗಳೆಂದು ಸಾರಿ ಕ್ರಿಮಿನಲ್‌ದಾವೆ ಹೂಡಿದರೂ ತಪ್ಪಾಗದು ಎನ್ನುತ್ತಾರೆ.

ಶಿಶು ಕೇಂದ್ರಗಳು ಹಣ ಸುಲಿಗೆಯ ಕೇಂದ್ರಗಳಾಗಿರುವುದಕ್ಕೆ ಪಾಲಕರ ಮೌಢ್ಯವೇ ಕಾರಣವೆನ್ನುತ್ತಾರೆ. ಮೂರು ಮೂರುವರೆ ವರ್ಷದ ಮಕ್ಕಳನ್ನು ತಂದು ಕೂಡಿಸಿ ಅವುಗಳ ಮೇಲೆ ಲಿಪಿಜ್ಞಾನ, ಮೊದಲಾದ ಕಠಿಣ ವಿಷಯಗಳ ಹೊರೆಯನ್ನು ಹೊರಿಸುವ ಹಿರಿಯರು ಎಂದೂ ಮಕ್ಕಳ ಹಿತಕಾಂಕ್ಷಿಗಳಲ್ಲ. ಅವರು ಮಕ್ಕಳ ಪಾಲಿನ ಮೃತ್ಯುಗಳು. ವಿದ್ಯಾವಂತರ ಅವಿವೇಕಿತನವನ್ನು ಕುರಿತಾಗಿ ಕಾರಂತರಿಗೆ ಅಸಹನೆ ಇದೆ. ಪ್ರಾಥಮಿಕ ಶಿಕ್ಷಣದ ಬಗ್ಗೆಯೂ ಇದೇ ತೆರನಾದ ಅಭಿಪ್ರಾಯ ಕಾರಂತರ ಬರವಣಿಗೆಯಲ್ಲಿ ವ್ಯಕ್ತವಾಗುತ್ತದೆ.

ಪ್ರತಿಯೊಂದು ದೇಶವು ಮುಂದೆಬರಬೇಕೆಂದರೂ ಕೂಡ ಕಾಲಕ್ಕೆ ತಕ್ಕಹಾಗೆ ಆ ದೇಶದಲ್ಲಿ ಶಿಕ್ಷಣವು ಪ್ರಗತಿಯಾಗದಿದ್ದರೆ ಅದು ಅಭಿವೃದ್ಧಿ ಸಾಧ್ಯವಾಗಲಾರದು. ಯಾವ ದೇಶವೇ ಆಗಿರಲಿ ಅದು ಆ ಕಾಲದ ಸಾಮಾಜಿಕ, ಆರ್ಥಿಕ, ರಾಜಕೀಯ ಮುಂತಾದ ವಾಸ್ತವದ ಅಂತರವನ್ನು ಅಳೆದು ನೋಡಬೇಕು. ಸಾಮಾಜಿಕ ಸುಧಾರಣೆ ಮಾಡಲು ಇಲ್ಲಿಯವರೆಗೆ ನಡೆದು ಬಂದ ಶಿಕ್ಷಣ ಕ್ಷೇತ್ರದ ಕೊರತೆಯನ್ನು ಗಮನಿಸಬೇಕು. ಶಿಕ್ಷಣ ಕ್ಷೇತ್ರದಲ್ಲಿ ಆದ ಅನುಭವಗಳನ್ನು ನಾವು ಪ್ರಯೋಜನ ಪಡೆದುಕೊಳ್ಳಬೇಕು. ಮುಖ್ಯವಾಗಿ ಪ್ರಾಥಮಿಕ ಶಿಕ್ಷಣದಿಂದಲೇ ಮಗುವಿಗೆ ಶಿಕ್ಷಣ ಕ್ಷೇತ್ರದಲ್ಲಿ ಆಸಕಿಯನ್ನು ಹುಟ್ಟಿಸಲು ಪ್ರಯತ್ನಿಸಬೇಕು. ಈ ದೃಷ್ಟಿಯಿಂದ ನಮ್ಮ ನಾಡಿನ

ಶಿಕ್ಷಣ ಪದ್ಧತಿಯನ್ನು ಪರಿಶೀಲಿಸಿದರೆ ನಮ್ಮ ಆಶೋತ್ತರಗಳಿಗೂ ಮತ್ತು ನಡವಳಿಕೆಗಳಿಗೂ ಶಿಕ್ಷಣಕ್ಕೆ ಇರುವ ಅಪಾರ ವ್ಯತ್ಯಾಸವಿದೆ. ಮಕ್ಕಳಿಗೆ ಹೇಳಿಕೊಡುವ ಪಠ್ಯಪುಸ್ತಕಗಳು ಆಕರ್ಷಣೆಯನ್ನು ಹುಟ್ಟಿಸದೆ ಹೋದರೆ ಒತ್ತಾಯದ ಕಲಿಕೆಯು ಶಿಕ್ಷಣವಾಗುವ ಬದಲು ಶಿಕ್ಷೆಯಾಗುತ್ತದೆ.

**ರಾಷ್ಟ್ರೀಯ ಶಿಕ್ಷಣ ನೀತಿ**

ಸ್ವಾತಂತ್ರ್ಯ ನಂತರ ಇಡೀ ದೇಶಕ್ಕೆ ಸಮನ್ವಯವಾಗುವ ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯನ್ನು ಮೊದಲ ಬಾರಿಗೆ ೧೯೬೮ ರಲ್ಲಿ ರೂಪಿಸಲಾಯಿತು. ಈ ನೀತಿಯು ಸ್ಥಳೀಯ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು ದೇಶದ ಎಲ್ಲ ಮಕ್ಕಳಿಗೂ ಗುಣಮಟ್ಟದ ಸಮಾನ ಶಿಕ್ಷಣವನ್ನು ಜಾರಿಯಲ್ಲಿ ತರಲು ಪ್ರಯತ್ನಿಸಿತು. ಇದಕ್ಕಾಗಿ ಇಡೀ ರಾಷ್ಟ್ರದ ದೃಷ್ಟಿಯಿಂದ ಪಠ್ಯಕ್ರಮವನ್ನು ರೂಪಿಸುವುದು ಅನಿವಾರ್ಯವಾಯಿತು. ಆದರೆ ಮುಂದುವರಿದಂತೆ ವಿದ್ಯಾರ್ಥಿಗಳು ಕಾಲೇಜು ಶಿಕ್ಷಣವನ್ನು ಮತ್ತು ವಿಶ್ವವಿದ್ಯಾಲಯಗಳ ಉನ್ನತಶಿಕ್ಷಣ ಪಡೆಯಬೇಕಾದರೆ ಮಕ್ಕಳು ಪ್ರಾಥಮಿಕ ಶಾಲೆಯಲ್ಲಿ ಮತ್ತು ನಂತರದ ಹೈಸ್ಕೂಲು ವಿದ್ಯಾಭ್ಯಾಸದಲ್ಲಿ ಯಾವ ರೀತಿಯ ಶಿಕ್ಷಣವನ್ನು ಒದಗಿಸಬೇಕು, ಅದರ ಇತಿಮಿತಿಗಳು ಕುಂದುಕೊರತೆಗಳಿಗೆ ಸಂಬಂಧಿಸಿದ ಅನೇಕ ವಿಷಯಗಳ ಕುರಿತು ಕಾರಂತರು ಚರ್ಚಿಸುತ್ತಾರೆ.

ಪಠ್ಯಪುಸ್ತಕಗಳು ಗೊತ್ತುಗುರಿ ಕಳೆದುಕೊಂಡಿರುವುದಕ್ಕೆ ಶಿವರಾಮ ಕಾರಂತರು ಕಂಡು ಕೊಂಡಿರುವ ಮುಖ್ಯಕಾರಣ ರಾಷ್ಟ್ರೀಕರಣವಾಗಿದೆ. ಅವರು ಈ ರಾಷ್ಟ್ರೀಕರಣದ ಶಿಕ್ಷಣವನ್ನು ವಿರೋಧಿಸುತ್ತಾರೆ. ಆದುದರಿಂದಲೇ ಪಠ್ಯಪುಸ್ತಕಗಳು ರಾಷ್ಟ್ರೀಕರಣದಿಂದ ಸರ್ವನಾಶವಾಯಿತು ಎನ್ನುತ್ತಾರೆ. ರಾಷ್ಟ್ರೀಕರಣದಿಂದ ಪಠ್ಯಪುಸ್ತಕಗಳನ್ನು ಬಳಸುವವರು ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಪಠ್ಯಪುಸ್ತಕಗಲ್ಲಿ ಕಂಡುಬರುವ ದೋಷಗಳನ್ನು ಸರಿಯಾಗಿ ಗಮನಿಸದೆ ಪುಸ್ತಕ ಹೇಗಿದೆಯೋ ಹಾಗೆಯೇ ಉಪಯೋಗಿಸುವ ವ್ಯವಸ್ಥೆಯಿದೆ. ಯಾವ ಪುಸ್ತಕವನ್ನೆ ಆಗಲಿ ಸಾರ್ವತ್ರಿಕವಾಗಿ ಮಕ್ಕಳ ಮೇಲೆ ಹೋರಿಸುವ ಮೊದಲು ಯೋಜನೆ ಮತ್ತು ಪ್ರಯೋಗ ಬಹಳ ಅವಶ್ಯ. ಈ ಪ್ರಯೋಗದಿಂದ ಕಂಡುಬಂದ ಲೋಪದೋಷಗಳ್ನು ತಿದ್ದಿಕೊಂಡು ಮತ್ತೆ ಪುಸ್ತಕವನ್ನು ಸಾರ್ವತ್ರಿಕವಾಗಿ ನಿಗದಿಪಡಿಸಬಹುದು. ಶಿಕ್ಷಣದ ರೂಪದಲ್ಲಿ ಯಾವುದೇ ಸಿದ್ಧಾಂತಗಳನ್ನು ತತ್ವಗಳನ್ನು ಅನುಸರಿಸಿ ಪುಸ್ತಕಗಳನ್ನು ಬರೆದರೂ ಕೂಡ ಮೊದಲು ಅವುಗಳನ್ನು ವಿದ್ಯಾರ್ಥಿಗಳ ಮೇಲೆ ಸಾರ್ವತ್ರಿಕವಾಗಿ ಹೊರಿಸುವ ಮೊದಲು ಮಾದರಿ ಪ್ರಯೋಗ ಮಾಡಿ ಆ ಪುಸ್ತಕದ ಸಾರ್ಥಕತೆಯನ್ನು ಕಂಡುಹಿಡಿಯಬೇಕು.

ಪ್ರಮುಖವಾಗಿ ಪ್ರಾಥಮಿಕ ಶಿಕ್ಷಣವು ಮಕ್ಕಳ ಆಸಕ್ತಿಯನ್ನು ಹೆಚ್ಚಿಸುವಂತಿರಬೇಕು ಮತ್ತು ಚಟುವಟಿಕೆಗಳಿಂದ ಕೂಡಿರಬೇಕು. ಯೋಜನೆಗಳನ್ನು ರೂಪಿಸುವವರು ಶಿಶುಪ್ರಾಯ ಮತ್ತು

ಪ್ರಬುದ್ಧರಿಗೆ ಯಾವ ವಿಷಯ ಮುಖ್ಯವಾಗುತ್ತವೆಯೋ ಅಂಥಂಹ ವಿಷಯಗಳನ್ನು ಪಠ್ಯಕಮ್ರವಾಗಿ ರೂಪಿಸಲಾಗುತ್ತಿದೆ. ಮಕ್ಕಳಿಗೆ ತಿಳಿಯದ ಭಾಷೆಯಲ್ಲಿ ವಿವಿಧ ವಿಷಯಗಳ ಜ್ಞಾನವನ್ನು ಕುರಿತ ಪುಸ್ತಕಗಳನ್ನು ರಚಿಸಿ ಅವುಗಳನ್ನು ಮಕ್ಕಳಿಗೆ ಕಲಿಸಲು ಪ್ರಯತ್ನಿಸಲಾಗುತ್ತಿದೆ. ಮಗುವಿಗೂ ತನ್ನದೇ ಆದ ಆಸೆ ಅಭಿರುಚಿಗಳಿವೆ ಅವರ ಆಸಕ್ತಿಗಳನ್ನು ಗಮನಿಸದೆ ಹಿರಿಯರು ತಮಗೆ ಮುಖ್ಯವೆನಿಸಿದ್ದನ್ನು ಮಕ್ಕಳಿಗೆ ಕಲಿಸುವುದು ಪ್ರಾಥಮಿಕ ಶಿಕ್ಷಣದ ಹಿನ್ನೆಡೆಗೆ ಮುಖ್ಯಸಮಸ್ಯೆಯಾಗಿದೆ.

ಪೂರ್ವ ಪ್ರಾಥಮಿಕ ಮತ್ತು ಪ್ರಾಥಮಿಕ ಶಿಕ್ಷಣದಲ್ಲಿ ಮಕ್ಕಳನ್ನು ಶಾಲೆಯಲ್ಲಿ ಕೂಡಿಸಿ ಶಿಕ್ಷಣವನ್ನು ಕಲಿಸುವ ಬದಲು ನಿಸರ್ಗದ ಜೊತೆ ಬೆಳೆಯುವಂತೆ ಅನುಕೂಲ ಮಾಡಿಕೊಡಬೇಕು. ಗಿಡಮರಗಳನ್ನು ಪರಿಚಯಿಸುವುದು, ಪ್ರಾಣಿಪಕ್ಷಿಗಳ ಹೆಸರುಗಳನ್ನು ತಿಳಿಸುವುದರ ಮೂಲಕ ಮಕ್ಕಳಲ್ಲಿ ಆಸಕ್ತಿಯನ್ನು ಬೆಳೆಯಿಸಬೇಕು. ಪ್ರಾಥಮಿಕ ಶಾಲೆಯಲ್ಲಿ ಮಕ್ಕಳಿಗೆ ಮೇಲಿಂದ ಮೇಲೆ ಪ್ರಶ್ನೆಗಳನ್ನು ಕೇಳುವ ಅವಕಾಶವನ್ನು ಕಲ್ಪಿಸಬೇಕು. ಆದರೆ ಉಪಾಧ್ಯಾಯರು ಕೇಳುವ ಪ್ರಶ್ನೆ ಗಳಿಗೆ ಮಕ್ಕಳು ಉತ್ತರ ಹೇಳುವ ಪದ್ಧತಿಯು ಬದಲಾಗಬೇಕು ಎನ್ನುವುದು ಕಾರಂತರ ನಿಲುವಾಗಿದೆ.

ಪ್ರಾಥಮಿಕ ಶಾಲೆಗೆ ಬರುವ ಮಕ್ಕಳು ಮನೆಯಲ್ಲಿ ಗ್ರಾಮ್ಯ ಭಾಷೆಯನ್ನು ಬಳಸುತ್ತಾರೆ. ಶಾಲೆಯಲ್ಲಿ ಗ್ರಂಥಸ್ಥ ಭಾಷೆಯನ್ನು ಕಲಿಸುವುದರಿಂದ ಕಲಿಕೆಗೆ ತೊಂದರೆಯಾಗುತ್ತದೆ. ಶಾಲೆಯಲ್ಲಿ ಮಕ್ಕಳ ಜೊತೆಗಿನ ಸಂಭಾಷಣೆಯೆಲ್ಲವೂ ಆಡುಭಾಷೆಯಲ್ಲಿ ನಡೆಯಬೇಕೆನ್ನುತ್ತಾರೆ. ಏಕೆಂದರೆ ಮನೆಯಲ್ಲಿ ಗ್ರಾಮ್ಯ ಭಾಷೆಯನ್ನು ಕೇಳುವುದರಿಂದ ಕಲಿಯಲು ಸಹಾಯಕವಾಗುತ್ತದೆ. ಮಗು ಒಂದು ಭಾಷೆಯಲ್ಲಿ ಸರಿಯಾಗಿ ಮಾತನಾಡುವದನ್ನು ಕಲಿತ ನಂತರ ಓದುವುದು ಬರೆಯುವುದನ್ನು ಕಲಿಸಬೇಕು.

ಮಕ್ಕಳ ಪಾಲಿಗೆ ಅವರ ಅವಶ್ಯಕತೆಗೆ ಪೂರಕವಾಗಿ ಕಲಿಯುವ ಭಾಷೆಯನ್ನು ಕಲಿತಾಗ ಮೇಲೆಯೇ ಎರಡನೆಯ ಭಾಷೆಯನ್ನು ಕಲಿಯಲು ಪ್ರಯತ್ನಿಸಬೇಕು ಎನ್ನುತ್ತಾರೆ. ಆದರೆ ಮಕ್ಕಳಿಗೆ ಏಕಕಾಲದಲ್ಲಿ ಎರಡು ಮೂರು ಭಾಷೆಗಳನ್ನು ಕಲಿಸಲು ಪ್ರಯತ್ನಿಸಿದರೆ ಅವರಿಗೆ ಪರಿಚಿತ ಭಾಷೆಯ ಕಲಿಕೆಯಲ್ಲೂ ಸಹ ತೊಡಕುಂಟು ಮಾಡುತ್ತದೆ.

> ರಾಷ್ಟ್ರೀಯ ಶಿಕ್ಷಣ ನೀತಿಯು ಪ್ರಾಥಮಿಕ ಹಂತದ ಪಠ್ಯಕ್ರದಲ್ಲಿ ಮಾತೃಭಾಷೆ
> ಅಥವಾ ಪ್ರಾದೇಶಿಕ ಭಾಷೆ, ಇಂಗ್ಲಿಷ್ ಮತ್ತು ಹಿಂದಿ[3]

ಏಕಕಾಲಕ್ಕೆ ಈ ಮೂರು ಭಾಷೆಗಳನ್ನು ಕಲಿಸಬೇಕೆಂದು ಹೇಳುತ್ತದೆ. ಇದರಿಂದ ಪ್ರಾಥಮಿಕ ಮಕ್ಕಳಿಗೆ ದ್ವಿಭಾಷಾಸೂತ್ರ, ತ್ರಿಭಾಷಾಸೂತ್ರ ಎಂದು ಅವರಿಗೆ ಅವಶ್ಯಕವಿಲ್ಲದ ಅವಾಂತರಗಳನ್ನು ಸೃಷ್ಟಿಸುತ್ತಾರೆ ಎಂಬ ಕಳವಳವನ್ನು ವ್ಯಕ್ತಪಡಿಸುತ್ತಾರೆ ಇದರಿಂದ ಬೇರೆ ಭಾಷೆಯ ಮೂಲಕ

ವಿಷಯಗಳನ್ನು ತಿಳಿದುಕೊಳ್ಳುವುದರಲ್ಲೂ ಮತ್ತು ತಮಗೆ ಗೊತ್ತಿರುವ ಭಾಷೆಯವನ್ನು ತಿಳಿಸುವುದಕ್ಕೂ ಅಸಮರ್ಥರಾಗುತ್ತಾರೆ.

> ನಮ್ಮ ಶಿಕ್ಷಣ ಕ್ರಮದಿಂದಾಗಿ, ಇವತ್ತು ಕನ್ನಡ ಸರಿಯಾಗಿ ಬರೆಯಲಾರದ ಸ್ನಾತಕರು ನಮಗೆ ಎಷ್ಟು ಬೇಕು? ಮೂರು ಭಾಷೆಗಳನ್ನು ಪುಸ್ತಕದಿಂದ ಹೆಕ್ಕಿ, ಕಲಿಸಿ, ಸಾಧಿಸಿದ ಫಲವಾಗಿ ವಿದ್ಯಾರ್ಥಿಗಳು ಯಾವೊಂದು ಭಾಷೆಯಲ್ಲೂ ತಮ್ಮ ಮನಸ್ಸನ್ನು ತೋಡಿ ಕೊಳ್ಳಲಾರದ ಸ್ಥಿತಿ ಬಂದದ್ದು. ಯಾವ ಭಾಷೆಯ ಪಠ್ಯ ಪುಸ್ತಕವನ್ನೂ ಅರ್ಥ ಮಾಡಿಕೊಳ್ಳದ ಸ್ಥಿತಿ ಅದರಿಂಲೇ ಬಂದಿದೆ.[೩]

ಮುಖ್ಯವಾಗಿ ಪ್ರಾಥಮಿಕ ಹಂತದ ಶಿಕ್ಷಣ ಮಾತೃಭಾಷೆಯಲ್ಲಿಯೇ ನಡೆಯಬೇಕು ಎನ್ನುತ್ತಾರೆ. ಪ್ರಾಥಮಿಕ ಹಂತದಲ್ಲಿ ಮಗುವಿನ ಮೇಲೆ ಹಲವಾರು ಭಾಷೆಗಳನ್ನು ಏಕಕಾಲಕ್ಕೆ ಹೇರುವುದರಿಂದ ಯಾವ ಭಾಷೆಯಲ್ಲಯೂ ಪರಿಣಿತಿಯನ್ನು ಪಡೆಯುವುದಿಲ್ಲ.

ಮಕ್ಕಳಿಗೆ ತಮಗೆ ಗೊತ್ತಿಲ್ಲದ ವಿಷಯವನ್ನು ನಿರ್ಭಯವಾಗಿ ಕೇಳಬೇಕು. ಅದಕ್ಕೆ ಸಮನಾದ ಉತ್ತರವನ್ನು ಶಿಕ್ಷಕರು ಮಕ್ಕಳಿಗೆ ತಿಳಿಯುವ ಭಾಷೆಯಲ್ಲಿಯೇ ಹೇಳಬೇಕು. ಆ ಮೂಲಕ ಅವರ ತಿಳವಳಿಕೆಯು ವಿಸ್ತಾರಗೊಳ್ಳುತ್ತಿರಬೇಕು. ಮಕ್ಕಳಲ್ಲಿ ತಿಳಿಯುವ ಹಂಬಲ ಅವರಲ್ಲಿ ಸದಾ ಬೆಳೆಯಬೇಕು. ಪ್ರಾಥಮಿಕ ಶಿಕ್ಷಣವೆನ್ನುವುದು ಅಂಥಹ ಹಂಬಲವನ್ನು ಬೆಳೆಯಿಸುವ ಒಂದು ಮಾಧ್ಯಮವಾಗಬೇಕು.

ವಿದ್ಯಾರ್ಥಿಗಳಿಗೆ ಹೊಸ ಹೊಸ ಅನುಭವಗಳನ್ನು ಅರಸಿ ಅವುಗಳಿಗೆ ತಮ್ಮನ್ನು ಒಡ್ಡಿಕೊಳ್ಳುವ ಶಕ್ತಿಯನ್ನು ಶಿಕ್ಷಣ ಕೊಡಬೆಕು. ಮಗುವಿಗೆ ಮನೆಗಿಂತ ಶಾಲೆಯು ಉತ್ತಮವಾದ ಸ್ಥಳ. ಮನೆಯು ಮಗುವಿಗೆ ಹೆಚ್ಚು ಸಂತಸ ಕೊಡುವುದಿರಲಿ; ಅಷ್ಟೇ ನಿರ್ಬಂಧಗಳನ್ನು ಹೇರುತ್ತದೆ. ಆದರೆ ಶಾಲೆಯು ಮಗುವಿನ ಶಾರೀರಿಕ, ಮಾನಸಿಕ ಆರೋಗ್ಯಕ್ಕೆ ನೆರವಾಗಬೇಕು. ಸ್ವಾತಂತ್ರ್ಯೋತ್ತರ ಶಿಕ್ಷಣ ವ್ಯವಸ್ಥೆಯಲ್ಲಿ ವಿದ್ಯಾರ್ಥಿಗಳಲ್ಲಿ ಸೃಜನಶೀಲತೆಯನ್ನು ಬೆಳೆಸುವಲ್ಲಿ ವಿಪುಲವಾಗಿವೆ. ಹಲವಾರು ಶಾಲಾ ಕಾಲೇಜುಗಳಿಗೆ ವಿದ್ಯಾರ್ಥಿಗಳಲ್ಲಿ ಸೃಜನಶೀಲ ಶಕ್ತಿಯನ್ನು ಬೆಳೆಸುವುದು ಮುಖ್ಯವಾಗಿಲ್ಲ. ಬದಲಾಗಿ ಬೋಧನೆ ಕಲಿಕೆಯ ಪ್ರಕ್ರಿಯೆ ಫಲಿತಾಂಶ ಕೇಂದ್ರೀತವಾಗಿರುತ್ತದೆ. ರ್‍ಯಾಂಕುಗಳು, ಶ್ರೇಣಿಗಳ ಫಲಿತಾಂಶ ಇದೇ ಪ್ರಧಾನವಾಗಿದೆ. ವಿದ್ಯಾರ್ಥಿಗಳ ಪ್ರತಿಭಾ ವಿಕಸನಕ್ಕೆ ಯಾವ ಪ್ರಯತ್ನಗಳು ಸರಿಯಾಗಿ ನಡೆಯುತ್ತಿಲ್ಲ. ಆಧುನಿಕ ಶಿಕ್ಷಣವು ಇಂದು ಅತಿ ವಿಶ್ಲೇಷಣೆ, ಮಾಹಿತಿ ಸಂಗ್ರಹಣೆ, ಕಂಠಪಾಠ, ಓದು ಬರಹ, ಗಣಿತ ಇತ್ಯಾದಿಗಳಿಗೆ ಪ್ರಮುಖ ಮನ್ನಣೆಯನ್ನು ನೀಡಿದೆ. ಇದರ ಫಲವಾಗಿ ವಿದ್ಯಾರ್ಥಿಗಳಲ್ಲಿ ಸೃಷ್ಟಿಶೀಲತೆ, ಸ್ವತಂತ್ರ ಚಿಂತನೆಗಳಿಗೆ ಬೆಲೆ ಇಲ್ಲದಂತಾಗಿದೆ. ಏಕರೂಪದ ಪಠ್ಯಪುಸ್ತಕ, ಎಲ್ಲರಿಗೂ ಒಂದೇ ಬಗೆಯ ಬೋಧನೆ, ಎಲ್ಲಾ ಮಕ್ಕಳಲ್ಲೂ ಕಡ್ಡಾಯವಾಗಿ ಒಂದೇ ವೇಗದಲ್ಲಿ ಕಲಿಯಬೇಕೆಂಬ ಒತ್ತಡವೂ ಅಲ್ಲದೆ ಎಲ್ಲಾ

ವಿದ್ಯಾರ್ಥಿಗಳು ಉತ್ತಮ ಫಲಿತಾಂಶನ್ನು ಗಳಿಸಬೇಕೆಂಬ ಹಂಬಲ ಎದ್ದುಕಾಣುತ್ತಿದೆ. ವಿದ್ಯಾರ್ಥಿಗಳಲ್ಲಿ ಸೃಜನಶೀಲ ಬೆಳವಣಿಗೆಗಳಿಗಿಂತಲೂ ಬುದ್ಧಿಯ ಬೆಳವಣಿಗೆಗೆ ಹೆಚ್ಚು ಒತ್ತು ನೀಡಲಾಗುತ್ತದೆ. ವಿದ್ಯಾಭ್ಯಾಸದಿಂದ ವ್ಯಕ್ತಿತ್ವ ವಿಕಸನ ಎಂಬ ಮಾತು ಹಿಂದೆಸರಿದು ಉದ್ಯೋಗ, ಧನ ಸಂಪಾದನೆ, ಯಶಸ್ಸು, ಇವು ಮುಖ್ಯವಾಗಿ ಬಿಟ್ಟಿವೆ. ಇಂತಹ ಶಿಕ್ಷಣ ಪದ್ಧತಿಗಿಂತ ಕಾರಂತರು ಭಿನ್ನವಾಗಿ ಯೋಚನೆ ಮಾಡುತ್ತಾರೆ. ಪ್ರಾಥಮಿಕ ಶಿಕ್ಷಣವೇ ಕಾರಂತರ ಆಸಕ್ತಿಯ ಕ್ಷೇತ್ರ. ಅವರ ಶೈಕ್ಷಣಿಕ ವಿಚಾರಗಳು ಪ್ರಯೋಗಗಳು ಹೆಚ್ಚಾಗಿ ಪ್ರಾಥಮಿಕ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡೆ ಮಾಡಿರುವಂತಹವು. ಶಿಕ್ಷಣ ವ್ಯವಸ್ಥೆಯಲ್ಲಿ ಮಕ್ಕಳು ಪಡೆಯುವ ಜ್ಞಾನಕ್ಕೂ ಮುಂದಿನ ಜೀವನದ ಬಗ್ಗೆ ಪಠ್ಯಕ್ರಮದಲ್ಲಿ ಯಾವುದೇ ಸಂಬಂಧ ಇಲ್ಲದಂತೆ ಹೊರೆಯಾಗಿರುವುದನ್ನು ಕಾರಂತರು ಶೈಕ್ಷಣಿಕ ಬರಹಗಳಲ್ಲಿ ಹೇಳುತ್ತಾ ಬಂದಿದ್ದಾರೆ. ಕೇವಲ ಪಠ್ಯಗಳಲ್ಲಿರುವ ವಿಷಯವನ್ನು ಕಂಠಪಾಠ ಮಾಡುವುದೇ ಶಿಕ್ಷಣದ ಉದ್ದೇಶವಾಗಿದೆ. ಪರಿಸರದಲ್ಲಿ ಕೇಳಿ ಕಲಿಯಬೇಕಾದ ಜೀವಂತ ಭಾಷೆಯನ್ನು ಪುಸ್ತಕದ ಮೂಲಕ ಕಲಿಸಲಾಗುತ್ತಿದೆ.

ವಿದ್ಯಾರ್ಥಿಗಳ ಬೌದ್ಧಿಕ ಭಾವನಾತ್ಮಕ ಹಾಗೂ ಶಾರೀರಿಕವಾದ ವ್ಯಕ್ತಿತ್ವವನ್ನು ಇಡಿಯಾಗಿ ಪರಿಗ್ರಹಿಸಬೇಕು. ಶಾಲೆಯಲ್ಲಿ ವಿದ್ಯಾರ್ಥಿಗಳನ್ನು ಅಪನಂಬುಗೆಯಿಂದ ಕಾಣದೆ ಅವರ ಸಾಮರ್ಥ್ಯಗಳಲ್ಲಿ ವಿಶ್ವಾಸವಿರಿಸಿ ಪ್ರಯೋಗಶೀಲತೆಗೆ ಹೆಚ್ಚಾಗಿ ಪ್ರೋತ್ಸಾಹಿಸಬೇಕು. ಪರೀಕ್ಷೆ, ಸ್ಪರ್ಧೆ ಹಾಗೂ ಫಲಿತಾಂಶಗಳನ್ನು ವೈಭವೀಕರಿಸಿ ನೋಡುವುದನ್ನು ಕಡಿಮೆ ಮಾಡಬೇಕು. ಮಕ್ಕಳ ವೈವಿಧ್ಯಮಯ ಸಾಮರ್ಥ್ಯಗಳನ್ನು ಮನಗಂಡು ಈ ಸಾಮರ್ಥ್ಯಗಳ ವಿಕಸನದ ದೃಷ್ಟಿಯಿಂದ ಶಾಲೆಗಳಲ್ಲಿ ನಾನಾ ಬಗೆಯ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕು. ಮಕ್ಕಳಲ್ಲಿ ಆಸಕ್ತಿ, ಕುತೂಹಲ ಹಾಗೂ ಶೋಧಪ್ರವೃತ್ತಿಯನ್ನು ಬೆಳಸಬೇಕು. ತರಗತಿಯಲ್ಲಿ ವಿವಿಧ ಅಭಿಪ್ರಾಯಗಳು ಚರ್ಚೆ, ಜಿಜ್ಞಾಸೆ, ಪ್ರಶ್ನೆ ಭೇದಗಳಿಲ್ಲದೆ ಧಾರಳತೆಯಿಂದ ಅವಕಾಶ ಒದಗಿಸಬೇಕು. ಎಲ್ಲಾ ವಿದ್ಯಾರ್ಥಿಗಳನ್ನು ಸಮಾನವಾಗಿ ಕಾಣಬೇಕು. ಯಾರು ಮೇಲಲ್ಲ, ಕೀಳಲ್ಲ ಎಂಬುದು ಅವರವರ ಪ್ರತಿಭೆಗೆ ಸಹಜ ಪ್ರೋತ್ಸಾಹ ದೊರೆಯಬೇಕು. ಎಲ್ಲರ ಬೆಳವಣಿಗೆಯು ನಮ್ಮ ಆದ್ಯ ಕರ್ತವ್ಯವಾಗಬೇಕು. ಸೃಜನಶೀಲರು ನಮ್ಮ ರಾಷ್ಟ್ರದ ಸಂಪತ್ತು. ಈ ಸಂಪತ್ತನ್ನು ಉಳಿಸಿ ಬೆಳೆಸುವ ಪ್ರಯತ್ನ ಮಾಡಿದಾಗಲೇ ನಮ್ಮ ಶಿಕ್ಷಣ ನಿಜವಾದ ಅರ್ಥದಲ್ಲಿ ಸೃಜನಶೀಲವಾಗುತ್ತದೆ.

**ಪ್ರಾಥಮಿಕ ಭಾಷಾ ಶಿಕ್ಷಣ: ಕಾರಂತ ಪ್ರತಿಕ್ರಿಯೆ**

ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಶಿವರಾಮ ಕಾರಂತರ ವಿಶೇಷ ಗಮನ ಸೆಳದದ್ದು ಭಾಷಾ ಶಿಕ್ಷಣ. ಶಿಕ್ಷಣ ಕ್ಷೇತ್ರದಲ್ಲಿ ಇಂದು ಹಲವಾರು ಭಾಷೆಗಳ ಗೊಂದಲವಿದೆ. ಮಾತೃಭಾಷೆ, ಪ್ರಾಂತೀಯ ಭಾಷೆ, ಇಂಗ್ಲಿಷ್ ಭಾಷೆ ಮತ್ತು ಹಿಂದಿ ಭಾಷೆಗಳಿವೆ. ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಕ್ರಮದಲ್ಲಿ ಒಂದು ಭಾಷೆಯಲ್ಲಿ ಸರಿಯಾದ ಪರಿಣಿತಿ ಬರುವುದಕ್ಕೆ ಮುಂಚೆಯೇ

ಇಂಗ್ಲಿಷ್, ಹಿಂದಿ ಮುಂತಾದ ಭಾಷೆಗಳನ್ನು ಮಕ್ಕಳಿಗೆ ಕಲಿಸಿದರೆ ಯಾವ ಪ್ರಯೋಜನವಾಗುತ್ತದೆ ಎಂದು ಪ್ರಶ್ನಿಸುತ್ತಾರೆ.

ಇಂಗ್ಲಿಷ್ ಮಾಧ್ಯಮದ ಬಹುತೇಕ ಶಾಲೆಗಳು ಬಂಡವಾಳದ ಕೇಂದ್ರಗಳಾಗಿವೆ. ಇವುಗಳಿಗೆ ಸರಿಯಾದ ಕಟ್ಟಡಗಳಿಲ್ಲ. ಈ ಶಾಲೆಗಳಲ್ಲಿ ಪಾಠಮಾಡುವ ಶಿಕ್ಷಕರಲ್ಲಿ ಹೆಚ್ಚಿನವರಿಗೆ ಬೋಧನೆಯಲ್ಲಿ ತಕ್ಕ ತರಬೇತಿ ಇರುವುದಿಲ್ಲ. ಸಾಮಾನ್ಯವಾಗಿ ಶೈಕ್ಷಣಿಕ ಮನೋವಿಜ್ಞಾನದ ತಳಹದಿಯ ಮೇಲೆ ಮಕ್ಕಳ ಮಾನಸಿಕ ಸಾಮರ್ಥ್ಯಕ್ಕೆ ಪೂರಕವಾಗಿ ಪಠ್ಯಕ್ರಮ ರಚನೆಯಾಗಿರುವಂತಹದ್ದು. ಆದರೆ ಇಂಗ್ಲಿಷ್ ಶಿಕ್ಷಣದ ಭರಾಟೆಯಿಂದ ಬಂಡವಾಳ ಹೊಂದಿರುವಂತವರು ಮಾತ್ರ ಕಲಿಯುವಂತಹ ಸಂಪ್ರದಾಯ ಬೆಳೆದಿದೆ. ಮಕ್ಕಳಿಗೆ ಶೈಕ್ಷಣಿಕ ಬೋಧನಾ ಪದ್ಧತಿಯನ್ನು ಅನುಸರಿಸದೆ ಪಾಠಮಾಡುವ ಮತ್ತು ವಿಷಯದ ಮೇಲೆ ಯಾವುದೇ ಹಿಡಿತ ಹೊಂದದೆ ಬೋಧಿಸುವಂತಹ ಪ್ರಕ್ರಿಯೆ ಬೆಳೆದುಕೊಂಡು ಬಂದಿದೆ. ಬೋಧನೆಯಿಲ್ಲಿ ಯಾವುದೇ ವಿಧಿ ವಿಧಾನಗಳನ್ನು ಅನುಸರಿಸಲಾಗುತ್ತಿಲ್ಲ. ಸ್ವಾತಂತ್ರ್ಯಾನಂತರ ಭಾರತದಲ್ಲಿ ಇಂಗ್ಲಿಷ್ ಮಾಧ್ಯಮ ಶಾಲೆಗಳು ಹುಟ್ಟಿದ್ದೇ ಹಣ ಸಂಪಾದನೆಯ ದೃಷ್ಟಿಯಿಂದ. ಈ ಶಾಲೆಗಳನ್ನು ಪ್ರಾರಂಭಿಸುವುದರಿಂದ ಯಾವುದೇ ರೀತಿಯ ಬಂಡವಾಳವನ್ನು ತೊಡಗಿಸದೆ ಕೈತುಂಬಾ ಸಂಪಾದನೆ ಮಾಡಬಹುದೆಂಬ ದುರಾಸೆಯನ್ನು ಕಂಡುಕೊಂಡ ಅನೇಕ ಇಂಗ್ಲಿಷ್ ಮಾಧ್ಯಮ ಶಾಲೆಗಳಲ್ಲಿ ಸರಿಯಾದ ಸೌಲಭ್ಯಗಳು ಮತ್ತು ಪೂರಕ ಸೌಕರ್ಯಗಳು ಇರುವುದಿಲ್ಲ. ಆದರೆ ಕೇವಲ ಇಂಗ್ಲಿಷ್ ಮಾಧ್ಯಮ ಎಂಬ ಒಂದೇ ಕಾರಣಕ್ಕೆ ಈ ಶಾಲೆಗಳಿಗೆ ಮಕ್ಕಳು ಸೇರ್ಪಡೆಯಾಗುತ್ತಿದ್ದಾರೆ. ಆಕರ್ಷಕ ಸಮವಸ್ತ್ರ, ಶೂ, ಟೈ, ಪುಸ್ತಕ, ಹೊರೆ ಇವೆಲ್ಲಾ ಇಂಗ್ಲಿಷ್ ಮಾಧ್ಯಮ ಮಕ್ಕಳ ಅಮೂಲ್ಯ ಆಸ್ತಿ ಎನ್ನುವ ರೀತಿಯಲ್ಲಿ ಇಂದಿನ ವಿದ್ಯಮಾನಗಳು ನಡೆಯುತ್ತಿವೆ. ಇವುಗಳ ಮಧ್ಯೆ ಶಿಕ್ಷಣದ ಪ್ರಧಾನ ಗುರಿಗಳು ಮೂಲೆಗುಂಪಾಗಿ ಕೇವಲ ಓದು ಬರಹಗಳೇ ಪಾಧಾನ್ಯಪಡೆದು ಶಿಕ್ಷಣ ತಜ್ಞರನ್ನೇ ಮೂಕ ವಿಸ್ಮಿತರನ್ನಾಗಿಸುವ ತೆರದಲ್ಲಿ ಇಂಗ್ಲಿಷ್‌ಮಾಧ್ಯಮ ಶಾಲೆಗಳು ದಿನೇ ದಿನೇ ಬೆಳೆಯುತ್ತಿವೆ.

ಪ್ರಸ್ತುತ ಇಂಗ್ಲಿಷ್ ಮಾಧ್ಯಮ ವಿಶ್ವದ ಪ್ರಮುಖ ಭಾಷೆಗಳಲ್ಲಿ ಒಂದಾಗಿದೆ. ಜಾಗತಿಕ ಸಂವಹನ ಮಾಧ್ಯಮವಾಗಿರುವ ಇಂಗ್ಲಿಷ್ ಭಾಷೆಯನ್ನು ಭಾರತೀಯರು ಅಭ್ಯಾಸ ಮಾಡ ಬೇಕಾದುದು ಅನಿವಾರ್ಯವಾಗಿದೆ. ಆದರೆ ಆಯಾ ಭಾಷಾ ಮಾಧ್ಯಮದ ವಿದ್ಯಾರ್ಥಿಗಳು ಇಂಗ್ಲಿಷ್ ಭಾಷೆಯನ್ನು ಸುಲಭವಾಗಿ ಗ್ರಹಿಸಲು ಸಾಧ್ಯವಾಗುವಂತೆ ಪ್ರಯತ್ನಿಸಬೇಕು. ಆಂಗ್ಲ ಭಾಷೆಯ ಮುಖಾಂತರ ವಿಷಯಗಳನ್ನು ಕಲಿಸುವುದರಿಂದ ನಮ್ಮ ಸುತ್ತಮುತ್ತಲಿನ ಪರಿಸರದ ವಸ್ತುವನ್ನು ಗಮನದಲ್ಲಿಟ್ಟುಕೊಂಡು ಬೋಧನೆ ಮಾಡಬೇಕಾಗುತ್ತದೆ. ಜೀವನಕ್ಕೆ ಹತ್ತಿರವಾಗಿರುವಂತೆ

ಇತರೆ ರಂಗಗಳಿಗೆ ಸಂಬಂಧಪಟ್ಟಂತಹ ಅರಿವನ್ನು ಸರಳವಾದ ರೀತಿಯಲ್ಲಿ ಆಂಗ್ಲ ಭಾಷೆಯ ಮೂಲಕ ವಸ್ತುವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಆಯ್ಕೆ ಮಾಡಿಕೊಂಡು ಗದ್ಯ ಪಾಠಗಳನ್ನು, ಪದ್ಯಪಾಠಗಳನ್ನು ಸಂಯೋಜಿಸಬೇಕು. ಮಾತೃಭಾಷೆಯ ಜೊತೆಗೆ ಇಂಗ್ಲಿಷ್ ಭಾಷೆಯನ್ನು ದ್ವಿತೀಯ ಭಾಷೆಯನ್ನಾಗಿ ಕಲಿಸುವ ವ್ಯವಸ್ಥೆಯಾಗಬೇಕು. ಮಕ್ಕಳು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿ ಪಡೆಯಬೇಕು ಎಂದಾಕ್ಷಣ ಇಂಗ್ಲಿಷ್‌ಭಾಷೆಯನ್ನು ತಿರಸ್ಕರಿಸಬೇಕು ಎಂದರ್ಥವಲ್ಲ. ಕನ್ನಡ ಮಾಧ್ಯಮ ಮತ್ತು ಇಂಗ್ಲಿಷ್ ಭಾಷೆ ಇವೆರಡೂ ಬೇರೆ ಬೇರೆ ವಿಷಯಗಳು. ಜ್ಞಾನ ಸಂಪಾದನೆಗಾಗಿ ಕಾರಂತರು ಆಯ್ದುಕೊಳ್ಳುವುದು ಇಂಗ್ಲಿಷನ್ನು ಏಕೆಂದರೆ ಇಂಗ್ಲಿಷ್‌ನಲ್ಲಿ ಪ್ರತಿಯೊಂದು ವಿಷಯವನ್ನು ಕುರಿತ ಪುಸ್ತಕಗಳನ್ನು ಅಂದಿನ ಕಾಲದಲ್ಲಿ ಗಮನಿಸಿದ್ದರು.

ಮಕ್ಕಳಿಗೆ ಭಾಷಾ ಭೋದನೆಯಲ್ಲಿ ವ್ಯಾಕರಣವನ್ನು ಕುರಿತಾದ ಹಲವು ವಿಚಾರಗಳ ಬಗ್ಗೆ ವಿದ್ಯಾರ್ಥಿಗಳಿಗೆ ಭಾಷಾ ಶಿಕ್ಷಕರು ಅಗತ್ಯವಾಗಿ ಮನನ ಮಾಡಿಸಬೇಕು. ಅಂತಹ ಕಾಳಜಿಯನ್ನು ವಹಿಸುವ ಜವಾಬ್ದಾರಿ ಶಿಕ್ಷಕರದ್ದಾಗಿರುತ್ತದೆ. ಮಾತನಾಡುವಲ್ಲಿ, ಓದುವಲ್ಲಿ ಭಾಷೆಯ ಸ್ಪಷ್ಟ ಉಚ್ಚಾರ, ಧ್ವನಿಯ ಏರಿಳಿತ ಎಂಬಂತಹ ವ್ಯಾಕರಣ ಅಂಶಗಳನ್ನು ಗಮನಿಸಬೇಕು. ಕೆಲವು ವಿದ್ಯಾರ್ಥಿಗಳು ಮಾತನಾಡಲು ಹಿಂಜರಿಯುತಿರುತ್ತಾರೆ, ಅಂತಹ ಮಕ್ಕಳನ್ನು ಗುರುತಿಸಿ ಅವರಲ್ಲಿರುವ ಭೀತಿಯನ್ನು ಹೋಗಲಾಡಿಸಿ ನಿರ್ಭಿತಿಯ ವಾತಾವರಣವನ್ನು ನಿರ್ಮಿಸಬೇಕು. ಶಿಕ್ಷಕನು ಪಾಠ ಮಾಡುವಾಗ ಮಕ್ಕಳ ಮನಸ್ಸಿನಲ್ಲಿ ಮೂಡುವ ಭಾವನೆಗಳನ್ನು ಗುರುತಿಸಬೇಕು. ತಾನು ಹೇಳುವ ಪಾಠ ಮಕ್ಕಳಿಗೆ ಅರ್ಥವಾಗಿದೆಯೋ ಇಲ್ಲವೋ ಎಂದು ತಿಳಿದು ಪಾಠವನ್ನು ಮಕ್ಕಳಿಗೆ ಅರ್ಥವಾಗುವ ಭಾಷೆಯಲ್ಲಿಯೇ ಹೇಳಿ ಅವರಲ್ಲಿ ಕುತೂಹಲವನ್ನು ವಿಸ್ತರಿಸಬೇಕು.

ಶಾಲೆಯಲ್ಲಿ ಮಕ್ಕಳಿಗೆ ಮಾತೃಭಾಷೆಯಲ್ಲಿ, ಆಡುಭಾಷೆಯಲ್ಲಿರುವ ವ್ಯಾಕರಣವನ್ನು ಬಿಡಿಸಿ ಹೇಳಬೇಕು ಭಾಷೆ ಕಲಿಸುವ ಸಂದರ್ಭದಲ್ಲಿ ಪಠ್ಯಪುಸ್ತಕವು ಕೂಡಾ ಮಹತ್ವದ ಪಾತ್ರ ವಹಿಸುತ್ತದೆ. ವಿದ್ಯಾರ್ಥಿಗಳಲ್ಲಿ ಭಾಷಾ ಪ್ರೇಮವನ್ನು ಮೂಡಿಸುವ ಮತ್ತು ಅವರಲ್ಲಿ ಶಬ್ದ ಭಂಡಾರ ಬೆಳೆಸುವಂತಹ ಕೆಲಸವನ್ನು ಶಿಕ್ಷಕರು ಮಾಡಬೇಕಾಗುತ್ತದೆ. ಪಠ್ಯಪುಸ್ತಕದಲ್ಲಿರುವ ಅಕ್ಷರ ದೋಷವಿರುವ ಭಾಷೆಯ ಬಗ್ಗೆ ಕಾರಂತರು ಕಟುವಾಗಿ ಟೀಕಿಸುತ್ತಾರೆ. ಅವರ ದೃಷ್ಟಿಯಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕಶಿಕ್ಷಣ ಪಠ್ಯಪುಸ್ತಕದಲ್ಲಿರುವ ದೋಷಗಳು ಮಕ್ಕಳಿಗೆ ನೇರವಾಗಿ ತಲುಪುತ್ತವೆ. ಇಂತಹ ಭಾಷಾ ದೋಷಗಳು ಬೇರೆ ಯಾವ ದೇಶಗಳಲ್ಲಿ ಸಿಗುವುದಿಲ್ಲ ಎಂದು ಹೇಳುತ್ತಾರೆ. ಈ ಬರಹಗಳ ದುಷ್ಪರಿಣಾಮಗಳು ಗಂಭೀರವಾಗಿರುತ್ತವೆ. ಪ್ರಸ್ತುತ ವಿದ್ಯಾರ್ಥಿಗಳ ಬರವಣಿಗೆಯಲ್ಲಿ ದೋಷಗಳು ಇಂತಹ ದೋಷಪೂರಿತವಾದ ಶಾಲಾ ಪಠ್ಯ ಪುಸ್ತಕಗಳಿಂದಲೇ ಎನ್ನುತ್ತಾರೆ.

ಪ್ರಾಥಮಿಕ ಶಾಲಾ ಪಠ್ಯಗಳಲ್ಲಿ ಮಕ್ಕಳಿಗೆ ನೈತಿಕ ಶಿಕ್ಷಣವನ್ನು ಅಳವಡಿಸುವ ಕ್ರಮವನ್ನು ವಿರೋಧಿಸುತ್ತಾರೆ. ಶೀಲ, ನಡತೆಗಳು, ಅನುಕರಣೆ ಇವೆಲ್ಲಾ ಹಿರಿಯರ ವರ್ಚಸ್ಸಿನಿಂದ ಬರುವ ಅಭ್ಯಾಸಗಳೇ ಹೊರತು ಬಾಯಿಯ ಉಪದೇಶದಿಂದ ಬರುವುದಿಲ್ಲ. ಉಪಾಧ್ಯಾಯರ ಮೇಲೆ ಅಂತಹ ಹೊಣೆಯನ್ನು ಹೊರಿಸಿ ಯಾವ ಪ್ರಯೋಜನವು ಆಗಲಾರದು ಎನ್ನುವ ಮಾತು ಕಾರಂತರ ಹೊರ ಜಗತ್ತಿನ ಮತ್ತು ವಾಸ್ತವದ ಅರಿವನ್ನು ತಿಳಿಸುತ್ತದೆ. ಇಂದಿನ ಶಿಕ್ಷಣವನ್ನು ಪಡೆದ ವಿದ್ಯಾರ್ಥಿಗಳು ಎದುರಿಸಬೇಕಾದ ಸಮಸ್ಯೆಗಳು ಹಲವಾರು ಇವೆ. ಹಿಂದಿನ ಕಾಲದಲ್ಲಿ ಇರುವ ಸರಳವಾದ ಜೀವನಪದ್ಧತಿ ಮತ್ತು ಸಾಮಾಜಿಕ ಪರಿಸ್ಥಿತಿ, ಆರ್ಥಿಕ ಸ್ಥಿತಿಯು ಇಂದು ಉಳಿದಿಲ್ಲ. ಅವುಗಳಿಗೆ ಬೇಕಾಗುವ ಒಂದೊಂದು ಕ್ಷೇತ್ರಕ್ಕೂ ಸಂಬಂಧಿಸಿದ ಹಾಗೆ ನಿರ್ದಿಷ್ಟವಾದ ಮತ್ತು ವಿಫುಲವಾದ ತಿಳಿವಳಿಕೆ ಬೇಕಾಗುತ್ತದೆ. ವಿದ್ಯಾರ್ಥಿಯು ಮುಂದೆ ತನ್ನ ಜೀವನದಲ್ಲಿ ಕೈಗೊಳ್ಳುವ ವೃತ್ತಿಗೆ ಸಂಬಂಧಿಸಿದಂತೆ ಅಧ್ಯಯನ ಕೈಗೊಳ್ಳಬೇಕು ಎನ್ನುತ್ತಾರೆ. ಮಕ್ಕಳಿಗೆ ಯಾವ ಪ್ರಾಯದಲ್ಲಿ ಏನು ಹೇಳಿದರೆ ಅರ್ಥವಾಗುತ್ತದೆ ಎನ್ನುವುದರ ತಿಳಿವು ಇರಬೇಕು. ಮಕ್ಕಳ ಮನಸ್ಸಿನ ಅರಿವಿಲ್ಲದೆ ಬರೆದ ಪಠ್ಯಪುಸ್ತಕಗಳು ವ್ಯರ್ಥ. ಕಂಠಪಾಠ ಮಾಡಿ ಸರಳಾನುವಾದ ಕೇಳಿ, ಸಂಧಿ ವಿಂಗಡಿಸುವ ರೀತಿಗಳೆಲ್ಲಾ ಮಕ್ಕಳ ಉತ್ಸಾಹವನ್ನು ಕೊಂದು ಪುಸ್ತಕ ವೈರಾಗ್ಯವನ್ನು ಹುಟ್ಟಿಸುತ್ತವೆ ಎಂದು ಹೇಳುತ್ತಾರೆ. ಸ್ವಾತಂತ್ರ್ಯೋತ್ತರ ಶಿಕ್ಷಣ ವ್ಯವಸ್ಥೆಯ ಪಠ್ಯಪುಸ್ತಕಗಳ ಕುರಿತು ಹೆಳಿದರೂ ಈ ಮಾತು ಪ್ರಸ್ತುತ ಶಿಕ್ಷಣಪದ್ಧತಿಗೂ ಅನ್ವಯಿಸುತ್ತದೆ.

ಶಾಲೆಗಳಲ್ಲಿ ವಿದ್ಯಾರ್ಥಿಗಳೊಂದಿಗೆ ನಡೆಯುವ ಪ್ರಶ್ನೋತ್ತರಗಳು ಅಪರಾಧಿಯನ್ನು ಪೋಲಿಸರು ಕೇಳುವ ರೀತಿಯಲ್ಲಿ ನಡೆಯುತ್ತವೆ. ಈ ಪ್ರಶ್ನೆಗಳು ಮಕ್ಕಳಿಗೆ ಗೊತ್ತಿದ್ದನ್ನು ಹೇಳಬೇಕು ಎನ್ನಿಸುವ ಬದಲಾಗಿ ನೀನೆಷ್ಟು 'ದಡ್ಡ' ಎಂದು ಗುರು ವಿದ್ಯಾರ್ಥಿಯನ್ನು ನಿಲ್ಲಿಸಿ ಕೊಂಡು ಹಂಗಿಸುವ ಪ್ರಶ್ನೆಗಳಾಗಿರುತ್ತವೆ. ಇಂತಹ ಪದ್ಧತಿಯಿಂದ ಮಕ್ಕಳಲ್ಲಿ ಗುರುವಿನ ಭಯ, ಪರೀಕ್ಷೆಯ ಭಯ ಕಟ್ಟಿಟ್ಟದ್ದು. ಆ ಭಯ ಅವನನ್ನು ನಾಳೆದಿನ ತನ್ನ ಜೀವನವನ್ನು ಎದುರಿಸಲಾರದೆ ಭಯಭೀತರನ್ನಾಗಿ ಮಾಡುತ್ತದೆ. ಮಕ್ಕಳಿಗೆ ಹೇಳುವ ವಿಷಯಗಳು ಅವರ ಆಸಕ್ತಿ ಅಭಿರುಚಿಗಳನ್ನು ನೇರವಾಗಿ ಆಗಲಿ, ಉಪಾಯದಿಂದ ಆಗಲಿ ಸಾಧಿಸಬೇಕು. ಮಕ್ಕಳು ತಮ್ಮ ಮನಸ್ಸಿನಲ್ಲಿರುವ ಪ್ರಶ್ನೆಗಳನ್ನು ನೇರವಾಗಿ ಕೇಳುವಂತಾಗಬೇಕು. ಮಗುವಿನಲ್ಲಿ ಭಯವನ್ನು ಹುಟ್ಟಿಸಬಾರದು. ಶಾಲೆಯಲ್ಲಿ ಮಕ್ಕಳಿಗೆ ತನ್ನಲ್ಲಿ ಇದ್ದುದ್ದನ್ನು ಪರರಿಗೆ ತಿಳಿಸಬೇಕು ಎಂಬ ಹಂಬಲ ಮನಸ್ಸಿನಲ್ಲಿ ಮೂಡುವ ರೀತಿಯಲ್ಲಿ ಸಂಭಾಷಣೆ ನಡೆಯಬೇಕು ಎನ್ನುತ್ತಾರೆ. ಮಕ್ಕಳ ಮೇಲೆ ಹೇರುವ ವಿಷಯಗಳು ಅವರ ಗ್ರಹಣಶಕ್ತಿಗೂ, ಅಭಿರುಚಿಗೂ ಸಂಬಂಧವಿಲ್ಲ

ದಂತಾಗಿದೆ. ಮಕ್ಕಳ ಅಭಿರುಚಿಗೆ ಸಂಬಂಧವಿಲ್ಲದ ಪಠ್ಯಗಳು, ಅವರನ್ನು ಜೀವಂತ ಕೊಲ್ಲುತ್ತಿರುವ ಇಂದಿನ ಶಿಕ್ಷಣ ಶಿಕ್ಷಣವಲ್ಲ, ಶಿಶುಹತ್ಯೆ ಎನ್ನುತ್ತಾರೆ.

ಮಕ್ಕಳು ತಮ್ಮ ಬಾಲ್ಯದಲ್ಲಿ ಆಟ ಪಾಠಗಳಿಂದ ನಲಿಯುತ್ತಾರೆ. ನೂರಾರು ವಸ್ತುಗಳನ್ನು ನೋಡುತ್ತಿರುತ್ತಾರೆ. ಹಲವಾರು ಶಬ್ದಗಳನ್ನು ಕೇಳುತ್ತಿರುತ್ತಾರೆ. ಪ್ರತಿಯೊಂದು ವಸ್ತುವಿನಿಂದ ನೋಟದಿಂದ ಹೊಸ ಹೊಸ ಅನುಭವಗಳಾಗುತ್ತಿರುತ್ತವೆ. ಇಂತಹ ಮಕ್ಕಳನ್ನು ಇದ್ದಕ್ಕಿದ್ದಂತೆ ಏಕಾಏಕಿ ಶಾಲೆಯೆಂಬ ಹೆಸರಿನಲ್ಲಿ ನಾಲ್ಕು ಗೋಡೆಗಳ ಮಧ್ಯೆ ಕೂಡಿಹಾಕಿ ಮಕ್ಕಳ ಹಲವಾರು ಚಟುವಟಿಕೆಗಳನ್ನು ತಡೆಯುತ್ತಾರೆ. ಈ ಬಗೆಯ ಚಟುವಟಿಕೆಯನ್ನು ಶಾಲೆಗಳಲ್ಲಿ ಚೇಷ್ಟೆಯೆಂದು ತಿಳಿಸುತ್ತಾರೆ. ಸದಾಕಾಲ ನಲಿಯುತ್ತಾ ಇರುವ ಮಕ್ಕಳು ಶಾಲೆಗಳಲ್ಲಿ ಸ್ತಬ್ಧವಾಗಿ ಕುಳಿತುಕೊಳ್ಳುತ್ತಾರೆ. ಶಾಲೆಗಳು ಬಯಸುವುದೇ ಅದನ್ನು ಯಾರಾದರೂ ಆಟ ಹಾರಟಗಳನ್ನು ಮಾಡಿದರೆ ಅವನು ಉಪಾಧ್ಯಾಯನ ಕೋಪಕ್ಕೆ ಬಲಿಯಾಗುತ್ತಾನೆ. ಇನ್ನು ಪಾಠದ ಸಮಯದಲ್ಲಾದರೆ ಶಿಲಾಮೂರ್ತಿಗಳಂತೆಯೇ ಕುಳಿತಿರಬೇಕಾಗುತ್ತದೆ. ಈ ಪದ್ಧತಿಯನ್ನು ಕಾರಂತರು ಕಟುವಾಗಿ ವಿರೋಧಿಸುತ್ತಾರೆ.

> ನಾವು ಸಂಚರಿಸಿದ ಹಲವಾರು ಶಾಲೆಗಳಲ್ಲಿ ಬಾಲಕರೊಡನೆ ನಿಮ್ಮಲ್ಲಿ ಚೇಷ್ಟೆ ಮಾಡುವುರರಲ್ಲಿ ಯಾರು ಬುದ್ಧಿವಂತರು ಎಂದು ಕೇಳಿದೆವು. ಹುಡುಗರಲ್ಲಿ ಅಧಿಕಾಂಶ ಬಾಲಕರು ಬೇರೆಯವರನ್ನು ತೋರಿಸಲು ಪ್ರಯತ್ನಿಸುತ್ತಿದ್ದರು. ತಮ್ಮನ್ನು ತೋರಿಸಿ ಕೊಳ್ಳುವ ಸಾಹಸ ಅವರಿಗಿಲ್ಲ. ಚೇಷ್ಟೆ ಮಾಡುವುದು ಅಪರಾಧವೆಂದು ಅವರ ಗುರುಗಳು ಅವರ ತಲೆಯಲ್ಲಿ ತುಂಬಿಸಿದರು.[೪]

ಈ ಪದ್ಧತಿಯಿಂದ ಮಕ್ಕಳಲ್ಲಿರುವ ಚಟುವಟಿಕೆಯು ಕ್ಷೀಣವಾಗುತ್ತಾ ಸಾಗಿ ಅವರ ಶರೀರ ಹಾಗೂ ಮನಸ್ಸಿನ ಆರೋಗ್ಯವು ನಷ್ಟವಾಗಿ ಮುಂದೆ ಅವರು ನಿರರ್ಥಕವಾದ ಜೀವಿಗಳಾಗುತ್ತಾರೆ ಎಂದು ಎಚ್ಚರಿಸುತ್ತಾರೆ. ಶಾಲೆಗಳು ಮೊದಲಿಗೆ ಮಕ್ಕಳಿಗೆ ಕ್ರಿಯಾತ್ಮಕಶಕ್ತಿ ಬೆಳೆಯಲು ಅವಕಾಶವನ್ನು ಮಾಡಿಕೊಡಬೇಕು. ಮಕ್ಕಳಿಗೆ ತಮಗೆ ಅನಿಸಿದ್ದನ್ನು ಹೇಳಲು ಸ್ವಾತಂತ್ರ್ಯವಿರಬೇಕು. ಮಕ್ಕಳು ತಮ್ಮ ಭಾವನೆಗಳನ್ನು ಪ್ರಕಟಿಸಲು ಅನುಕೂಲವಾಗುವ ರೀತಿಯಲ್ಲಿ ಶಿಕ್ಷಣವು ಮಕ್ಕಳಿಗೆ ಚಿಕ್ಕಂದಿನಿಂದಲೂ ದೊರೆಯಬೇಕು. ನಾಟಕ, ಸಂಗೀತ, ಕವಿತೆ, ಚಿತ್ರಲೇಖನ ಮೊದಲಾದವು ಮಕ್ಕಳ ಶಿಕ್ಷಣದ ಜೀವಾಳವಾಗಿರಬೇಕು ಎಂಬುದೇ ಕಾರಂತರ ಆಶಯವಾಗಿತ್ತು.

ಪಠ್ಯಗಳ ಮುಖಾಂತರ ಭಾಷೆಯನ್ನು ಕಲಿಸುವುದರ ಬದಲು ಆಟದ ಮುಖಾಂತರವೂ ಮಕ್ಕಳಿಗೆ ಭಾಷೆಯನ್ನು ಕಲಿಸಬಹುದು ಎನ್ನುತ್ತಾರೆ. ಇಂಗ್ಲಿಷ್‌ನಲ್ಲಿ ಅದಕ್ಕೆ ವರ್ಡ್ ಬಿಲ್ಡಿಂಗ್ ಎನ್ನುತ್ತಾರೆ. ಈ ರೀತಿಯ ಆಟ ಕನ್ನಡದಲ್ಲಿಯೂ ಸಾಧ್ಯ ಎನ್ನುವುದನ್ನು ತೋರಿಸಿಕೊಟ್ಟಿದ್ದಾರೆ.

ಕನ್ನಡ ಪ್ರತ್ಯಯಗಳ ಪ್ರಯೋಜನ ಕಲಿಸುವ ಆಟದಲ್ಲಿ ನಾಯಿ ಮತ್ತು ಅದರ ಸಂಬಂಧ ಎಂದರೆ ನಾಯಿಯ ಬಾಲ ಎಂಬ ಆಟದಲ್ಲಿ ಬಾಲದ ಬಣ್ಣ, ಬಣ್ಣದ ಹಕ್ಕಿ, ಹಕ್ಕಿಯ ರೆಕ್ಕೆ, ರೆಕ್ಕೆಯ ಚಂದ, ಚಂದದ ಹೂವು, ಎಂಬ ಸರಣಿಯಲ್ಲಿ ಆಟಗಳು ಮಕ್ಕಳಿಗೆ ಸಂತೋಷ ಕೊಡುತ್ತವೆ. ಈ ರೀತಿಯ ಆಟಗಳಲ್ಲಿ ಮಕ್ಕಳು ಸಂಭಾಷಣೆಯನ್ನು ತಪ್ಪಿದರೆ ಕೋಪಿಸಿಕೊಳ್ಳದ ಹಾಗೆ ತಿದ್ದಬೇಕು ಎಂಬ ಸಲಹೆಯನ್ನು ನೀಡುತ್ತಾರೆ.

> ಹುಡುಗನ ಧನ ಅನ್ನುವ ಬದಲು ದನ ಎಂದರೆ ನೀವು ಅವನೊಡನೆ ಓಹೋ ದನವೋ! ಎಂದು ದನವನ್ನು ಕುರಿತು ತಿಳಿಸಿ ಹೇಳಿದ್ದಾದರೆ ತಾನು ಧನ ಅಂದದ್ದು ತಪ್ಪು ಎಂಬ ಕಲ್ಪನೆ ಮಗುವಿಗೆ ಬರುತ್ತದೆ. ಹತ್ತಿರ ಹತ್ತಿರ ಧ್ವನಿಗಳಿಂದಲೂ ಅಂಥ ತಪ್ಪುಗಳು ಬರುತ್ತವೆ. ಳ–ಲ, ನ–ಣ, ಹ–ಅ, ಇಂಥವುಗಳು ಆ ರೀತಿ ಅದಲು ಬದಲಾದವು. ಉಪಾಧ್ಯಾಯ ಸಮನಾಗಿ ಉಚ್ಚರಿಸುವ ರೀತಿಯನ್ನು ಎರಡು ಮೂರು ಬಾರಿ ಹೇಳಿ ತಿಳಿಸಬೇಕು[೫]

ಎಂದು ಹೇಳುತ್ತಾರೆ. ಈ ರೀತಿಯ ಆಟಗಳು ತುಂಬಾ ಚಟುವಟಿಕೆಯಿಂದ ಕೂಡಿರ ಬೇಕಾಗುತ್ತದೆ. ಶಾಲೆಯಲ್ಲಿ ಮಕ್ಕಳನ್ನು ಅಪರಾಧಿಗಳಂತೆ ಒಂದೇ ಸ್ಥಳದಲ್ಲಿ ಅಲುಗಾಡದೆ ನಿಲ್ಲುಸುವಾದಾಗಾಲೀ ದೀರ್ಘಕಾಲ ಕುಳ್ಳಿರುಸುವುದನ್ನಾಗಲೀ ಮಾಡಬಾರದು. ಮಕ್ಕಳು ಸಾಮಾನ್ಯ ವಾಗಿ ಸುಮ್ಮನಿರಲಾರರು ಅವರ ಮನಸ್ಸು ನೂರಾರು ಕಡೆಗೆ ಓಡುತ್ತಿರುತ್ತದೆ. ಇಂತಹ ಮಕ್ಕಳನ್ನು ಜೈಲಿನಲ್ಲಿರುವ ಖೈದಿಗಳಂತೆ ಬಂಧಿಸಬಾರದು. ಗಾದೆ, ಒಗಟು, ಕಥೆ, ಚಿತ್ರಗಳ ಆಟ ಮೊದಲಾದ ಅವಕಾಶವನ್ನು ಕಲ್ಪಿಸಬೇಕು. ತಮ್ಮ ಸುತ್ತಮುತ್ತ ದೊರಕುವ ವಸ್ತುಗಳಿಂದ ಏನೆಲ್ಲಾ ಮಾಡಬಹುದೆಂದು ತಿಳಿಸಿಕೊಡಬೇಕು. ಹಲವಾರು ಆಕೃತಿಗಳನ್ನು ಮಾಡುವುದು ಕಲಿಸಿಕೊಡಬೇಕು.

ಶಾಲೆಗೆ ಸೇರುವ ವಯಸ್ಸನ್ನು ತಲುಪಿದ ಒಂದು ಮಗುವಿಗೆ ತನ್ನ ಸುತ್ತಲಿರುವ ಭೌತಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರವನ್ನು ಗ್ರಹಿಸುವ ಶಕ್ತಿಯನ್ನು ಒದಗಿಸುವುದೇ ಪರಿಸರ ಅಧ್ಯಯನದ ಉದ್ದೇಶ. ಮಗುವು ಯಾವ ಪರಿಸರದಲ್ಲಿ ಜೀವಿಸುತ್ತಿದೆಯೋ ಆ ಪರಿಸರವು ಕಲಿಯುವುದುಕ್ಕೆ ಅವಶ್ಯಕವಾದ ಪ್ರಚೋದನೆಯನ್ನು ನೀಡುತ್ತದೆ. ಪರಿಸರ ಅಧ್ಯಯನ ದೃಷ್ಟಿಕೋನದಿಂದ ಮಕ್ಕಳಲ್ಲಿ ಸ್ವಯಂ ಕಲಿಯುವಿಕೆಯ ಕ್ರಮವನ್ನು ಉತ್ತೇಜಿಸುತ್ತದೆ. ಪರಿಸರ ಅಧ್ಯಯನಯದಲ್ಲಿ ಪ್ರಕ್ರಿಯೆ ಮತ್ತು ಪಠ್ಯವಸ್ತು ಎರಡು ಮುಖ್ಯ. *'ನೋಡಿ ತಿಳಿ ಮಾಡಿ ಕಲಿ'* ಸಮಸ್ಯೆ ಪರಿಹಾರ ಮತ್ತು ಚಟುವಟಿಕೆಗಳ ಮೂಲಕ ಮಕ್ಕಳು ಸ್ವತಂತ್ರವಾಗಿ ಸ್ವಯಂ ಹೇಗೆ ಕಲಿಯಬೇಕೆಂಬುದನ್ನು ಕಲಿತುಕೊಳ್ಳುತ್ತಾರೆ. ಎಂಬುದಾಗಿ ಶಿವರಾಮ ಕಾರಂತರು ಮಕ್ಕಳಿಗೆ

ನಿಸರ್ಗದೊಡನೆ ಸಂಬಂಧವಿರಬೇಕು ಎಂದು ಹೇಳುತ್ತಾರೆ. ಸ್ವಾತಂತ್ರ್ಯನಂತರ ಬಂದ ಹಲವಾರು ಶಿಕ್ಷಣ ಸಮಿತಿಗಳು ಕೇವಲ ಮಕ್ಕಳ ಪಠ್ಯಪುಸ್ತಕ ರಚನೆ, ಅದರಲ್ಲಿನ ವಿಷಯಗಳು, ಸಮಾಜ ವಿಜ್ಞಾನ, ಗಣಿತ, ಇಂಗ್ಲಿಷ್, ಹಿಂದಿ, ಮುಂತಾದ ವಿಷಯಗಳನ್ನು ಕುರಿತು ಹೆಚ್ಚಿನ ಗಮನವಹಿಸುತ್ತಿರುವುದನ್ನು ಕಾಣಬಹುದು. ಆದರೆ ಮಕ್ಕಳ ಹಾಗೂ ನಿಸರ್ಗದ ನಡುವಿನ ಸಂಬಂಧವನ್ನು ಕುರಿತು ಅಷ್ಟಾಗಿ ಆಸಕ್ತಿಯನ್ನು ತೋರುವುದಿಲ್ಲ. ಆದರೆ ಕಾರಂತರು ಇದಕ್ಕೆ ಹೆಚ್ಚಿನ ಒತ್ತನ್ನು ಕೊಡುತ್ತಾರೆ. ಮಕ್ಕಳಿಗೆ ನಿಸರ್ಗದ ಪಶುಪ್ರಾಣಿಗಳಲ್ಲೂ ಪ್ರೇಮವನ್ನುಂಟು ಮಾಡಲು ಹಲವಾರು ದೇಶಗಳು ಮಾಡುತ್ತಿರುವ ಪ್ರಯತ್ನವನ್ನು ಕಂಡು ಇಂದು ನಾವು ಕಲಿಯಬೇಕಾಗಿದೆ ಎನ್ನುತ್ತಾರೆ. ವಿದ್ಯೆ ಮುಗಿದ ಬಳಿಕ ಮಕ್ಕಳು ತಮ್ಮ ಹಳ್ಳಿಯಲ್ಲಿ ಇನ್ನಾವ ಸುಖವನ್ನು ಕಾಣಬೇಕು? ಎಂದು ಪ್ರಶ್ನಿಸುತ್ತಾರೆ.

> ಕಣ್ಣೆದುರಿನ ನೆಲವು ಅವರನ್ನು ಮಾತನಾಡಿಸುವುದಿಲ್ಲ. ವೇಗದಿಂದ ಹರಿಯುವ ಹಳ್ಳವು ಮಾತನಾಡಿಸುವುದಿಲ್ಲ; ಹಿಗ್ಗಿನಿಂದ ಜಿಗಿಯುವ ಹಸುವಿನ ಕರುವು ಅವರನ್ನು ಮಾತನಾಡಿಸುವು ದಿಲ್ಲವಾಯಿತು! ಇನ್ನಾರು ಅವರನ್ನು ಮಾತನಾಡಿಸಬೇಕು! ಯಾವುದನ್ನು ಕಂಡು, ಯಾವುದನ್ನು ಕೇಳಿ, ಅವರು ಆನಂದಿತರಾಗಬೇಕು? ನಿಜಕ್ಕೂ ಮಕ್ಕಳಿಗೆ ಅವರ ಚಿಕ್ಕವಯಸ್ಸಿನಲ್ಲೇ, ನಾವು ಸೃಷ್ಟಿಯೊಡನೆ ಈ ಬಗೆಯ ಸೌಂದರ್ಯೋ ಪಾಸನೆ, ಪಶುಪ್ರಾಣಿ ಪ್ರೇಮದ ಸಂಬಂಧವನ್ನು ಕಲ್ಪಿಸಿಕೊಟ್ಟರೆ ಅದಕ್ಕೂ ಮಿಗಿಲಾದ ಉಪಕಾರವಿಲ್ಲೆಂದೇ ತಿಳಿಯಬೇಕು.- ಶಾಲೆಯಲ್ಲಿ ಹೇಳಿದ ಅ, ಆ, ಬರಹವು ಖಂಡಿತ ವಾಗಿಯೂ ಅವರಿಗೆ ಉಣಿಸನ್ನು ಕೊಂಡುವಂತಿಲ್ಲ. ಕೊನೆಗೆ ಈ ಮಾನಸಿಕ ಊಟಕ್ಕಾದರೂ ನಾವು ಅವರನ್ನು ತಿದ್ದಬಾರದೆ?[೬]

ಎನ್ನುತ್ತಾರೆ. ಮಕ್ಕಳಿಗೆ ಜೀವನದಲ್ಲಿ ನಿಸರ್ಗದ ಜೊತೆ ಸಂಬಂಧವಿರಬೇಕು. ಮಗುವಿನ ಮನಸ್ಸು ವಿಕಾಸಗೊಳ್ಳಲು ನಿಸರ್ಗವು ಬಹುಮುಖ್ಯ ಪಾತ್ರವಹಿಸುತ್ತದೆ.

ಸ್ವಾತಂತ್ರ್ಯೋತ್ತರ ಶಿಕ್ಷಣ ವ್ಯವಸ್ಥೆಯು ಭಾರತದ ಎಲ್ಲಾ ಮಕ್ಕಳಿಗೂ ಏಕರೂಪದ ಶಿಕ್ಷಣ ವನ್ನು ನೀಡಬೇಕೆಂದು ಹೇಳುತ್ತದೆ. ಇಂತಹ ಶಿಕ್ಷಣ ಪದ್ಧತಿಯನ್ನು ಕಾರಂತರು ಕಟುವಾಗಿ ವಿರೋಧಿಸುತ್ತಾರೆ. ಪ್ರಾಥಮಿಕಶಾಲೆಗೆ ಶೇ. ೯೦ರಷ್ಟು ಮಕ್ಕಳು ಹಳ್ಳಿಯವರಾಗಿರುತ್ತಾರೆ. ಹಳ್ಳಿಯ ಮಕ್ಕಳಿಗೆ ಕೊಡುವ ಶಿಕ್ಷಣವು ಅವರ ಗ್ರಾಮ ಜೀವನಕ್ಕೆ ಸಹಕಾರಿಯಾಗುವಂತಿರಬೇಕು. ಪ್ರಾಥಮಿಕ ಶಾಲೆಯ ಹಲವಾರು ಮಕ್ಕಳು ಉನ್ನತ ಶಿಕ್ಷಣವನ್ನು ಮುಂದುವರಿಸುವಷ್ಟು ಶ್ರೀಮಂತರಿರುವುದಿಲ್ಲ. ಹೀಗಿರಲು ಅವರ ಶಿಕ್ಷಣವು ಮುಂದಿನ ಹೈಸ್ಕೂಲು ಶಿಕ್ಷಣಕ್ಕೊಂದು ಅಡಿಗಲ್ಲು ಮಾತ್ರವಾಗಬಾರದು. ಪ್ರಾಥಮಿಕ ಶಿಕ್ಷಣದಲ್ಲಿಯೇ ಬಾಲಕರ ಜೀವನಕ್ಕೆ ಒಂದು ರೂಪು ದೊರೆಯಬೇಕು ಎನ್ನುತ್ತಾರೆ. ಸ್ವಾತಂತ್ರ್ಯನಂತರದ ಶಿಕ್ಷಣವನ್ನು ಕುರಿತು ಹಲವಾರು

ಪ್ರಶ್ನೆಗಳನ್ನು ಎತ್ತುತ್ತಾರೆ. ಸ್ವಾತಂತ್ರ್ಯನಂತರ ರಚನೆಯಾದ ಪಠ್ಯಪುಸ್ತಕಗಳಲ್ಲಿ ಯಾವ ಯಾವ ವಿಷಯಗಳನ್ನು ಒಳಗೊಂಡಿವೆ? ಮತ್ತು ಆಯಾ ವಯಸ್ಸಿನ ಬಾಲಕರಿಗೆ ಉಪಯುಕ್ತವಾಗಿವೆಯೇ? ಎಂಬ ವಿಚಾರವನ್ನು ಮಾಡುವವರಿಲ್ಲ. ಶಿಕ್ಷಣ ಸಮಿತಿಯವರು ತಮಗೆ ಇಷ್ಟವಾದ ವಿಷಯಗಳನ್ನು ಪುಠ್ಯಪುಸ್ತಕಗಳನ್ನಾಗಿ ಮಾಡಿದರೆ ಅವು ಮಕ್ಕಳಿಗೆ ಇಷ್ಟವಾಗುತ್ತವೆಯೇ ಅವರ ಮನಸ್ಸನ್ನು ಆಕರ್ಷಿಸುತ್ತಿವೆಯೇ? ಎಂದು ಕೇಳುತ್ತಾರೆ.

> ಈಗಿನ ಹಾಯರ್ ಎಲಿಮೆಂಟರಿ ಶಿಕ್ಷಣವನ್ನು ಪಡೆಯುವ ವಿದ್ಯಾರ್ಥಿಗಳ ಭವಿಷ್ಯವೇನು ಅವನು ಕಲಿತಿರುವ ಎಷ್ಟು ವಿಷಯಗಳು ಅವನ ಜೀವನದಲ್ಲಿ ಪ್ರತ್ಯೇಕ್ಷ ಇಲ್ಲವೇ ಪರೋಕ್ಷವಾಗಿ ಸಹಾಯವನ್ನುಂಟು ಮಾಡುತ್ತಿವೆಯೇ ಅವನ ಪಾಠದ ಪಟ್ಟಿಯನ್ನು ನೋಡಿದರೆ ತಲೆ ತಿರುಗುವಷ್ಟು ವಿಷಯಗಳು ತುಂಬಿವೆ. ಅವುಗಳಲ್ಲಿ ಎಷ್ಟೋ ವಿಷಯಗಳು ಅವನ ಜೀವನಕ್ಕೆ ಸಂಬಂಧಪಟ್ಟುದೇ ಇಲ್ಲ. ಅವನಿಗೆ ಕನ್ನಡ ಮಸ್ತಕಗಳು ಉಪಪಠ್ಯ ಪುಸ್ತಕಗಳು, ಭೂಗೋಳ, ಚರಿತ್ರೆ, ಪ್ರಜಾಧರ್ಮ, ಪ್ರಾಣಿಶಾಸ್ತ್ರ, ಶರೀರಶಾಸ್ತ್ರ... ಇನ್ನೆಷ್ಟೆಷ್ಟೋ ಇವೆ. ಸಿಲೆಬಸನ್ನು ಕಂಡರೆ ತಲೆಯೆತ್ತುವಂತಿಲ್ಲ[೬] ಎನ್ನುತ್ತಾರೆ.

ಪ್ರಾಥಮಿಕ ಮಕ್ಕಳಿಗೆ ಹಲವಾರು ವಿಷಯಗಳನ್ನು ಕಲಿಸುವುದು ಕಾರಂತರಿಗೆ ಹಿಡಿಸುವುದಿಲ್ಲ. ಶಿವರಾಮ ಕಾರಂತರು ಅಂದಿನ ಕಾಲದ ಹಲವಾರು ಪಠ್ಯಪುಸ್ತಕಗಳನ್ನು ಗಮನಿಸಿದ್ದರು. ಮದ್ರಾಸು ಸಂಸ್ಥಾನದ ೫ನೇ ತರಗತಿಯ ಪಠ್ಯಪುಸ್ತಕದಲ್ಲಿ ಹೆಸರುಗಳನ್ನು, ಸಂಖ್ಯೆಗಳನ್ನು ಕಂಡು ಬೇಸರವನ್ನು ವ್ಯಕ್ತಪಡಿಸುತ್ತಾರೆ. ನಮ್ಮಲ್ಲಿರುವ ಪಠ್ಯಪುಸ್ತಕಗಳು ಉಪಾಧ್ಯಾಯರಿಗೂ ತಿಳಿಯದ ಶಬ್ದಗಳಿಂದ ತುಂಬಿವೆ. ಹಲವಾರು ಸಂಸ್ಕೃತ ಪದಗಳು ಹೆಜ್ಜೆ ಹೆಜ್ಜೆಗೂ ಉಕ್ಕಿನ ಕಡಲೆಗಳಾಗಿವೆ ಎನ್ನುತ್ತಾರೆ. ಹಲವಾರು ಪಠ್ಯಪುಸ್ತಕಗಳು ವಿಜ್ಞಾನದ ವಿಷಯಗಳಿಂದ ತುಂಬಿವೆ. ಮಕ್ಕಳ ಪಠ್ಯಪುಸ್ತಕಗಳು ಸಾಮಾನ್ಯವಾಗಿ ಸಾಹಿತ್ಯಿಕವಾಗಿರಬೇಕು, ವಿಜ್ಞಾನವಲ್ಲ ಎಂದು ಹೇಳುತ್ತಾರೆ. ಮಕ್ಕಳು ಭಾಷಾ ಪಠ್ಯಪುಸ್ತಕಗಳನ್ನು ಓದುವಾಗ ಅವರು ಭಾಷೆಯ ಕಡೆಗೆ ಲಕ್ಷ್ಯಕೊಡುವ ಬದಲು ಈ ವೈಜ್ಞಾನಿಕ ಪದ ವಿಷಯಗಳ ಕಡೆಗೆ ಹೆಚ್ಚು ಗಮನವಹಿಸಬೇಕಾಗುತ್ತದೆ. ಅದ್ದರಿಂದ ಮಗುವಿಗೆ ಹೆಚ್ಚು ರಸವತ್ತಾದ ಕತೆ, ಪದ್ಯಗಳನ್ನು ಹೇಳಿಕೊಡಬೇಕೆಂಬುದು ಕಾರಂತರ ಆಶಯವಾಗಿತ್ತು.

ಪ್ರಾಥಮಿಕ ಶಿಕ್ಷಣವು ಮಗುವಿನಲ್ಲಿ ಸುಪ್ತವಾಗಿ ಅಡಗಿರುವ ಪ್ರತಿಭೆಯನ್ನು ಹೊರತರಲು ಸಹಾಯಕವಾಗಬೇಕು. ಶಿಕ್ಷಣವೆಂಬುದು ಕೇವಲ ಅಕ್ಷರ ಜ್ಞಾನವಷ್ಟೆ ನಮ್ಮ ಗುರಿಯಾಗಿರಬಾರದು ಅದು ಮುಂದೆ ಜೀವನೋಪಾದಿಯ ದಾರಿಯನ್ನು ತೋರಿಸಬೇಕು. ಮಕ್ಕಳಿಗೆ ಇಂದು ಸಿಗುವ ವಿದ್ಯಾಭ್ಯಾಸವು ಅವರ ಮುಂದಿನ ಜೀವನಕ್ಕೆ ಸಹಾಯಕವಾಗುವಂತಿರಬೇಕು. ಹಳ್ಳಿಯ ಮಕ್ಕಳಿಗೆ ಸಂಜೆ ಶಾಲೆಯಲ್ಲಿ ವಿಷಯ ಭೋದನೆಗಳು ನಡೆದರೆ ಮಕ್ಕಳಿಗೆ ಬೆಳಗಿನ ಸಮಯ ಕೃಷಿ

ಕೈಗಾರಿಕೆಗಳನ್ನು ಹೇಳಬೇಕು. ಹಳ್ಳಿಯಲ್ಲಿ ಸಾಧ್ಯವಾಗುವ ಎಷ್ಟೋ ಜೀವನೋಪಾಯದ ಕೈಗಾರಿಕೆಗಳಿವೆ. ಶಾಲೆಯಿಂದ ಹೊರಗೆ ಬರುವಾಗ ಪ್ರತಿಯೊಬ್ಬರಿಗೂ ಅಂಥಹ ಶಿಕ್ಷಣ ದೊರೆಯಬೇಕು. ಹಳ್ಳಿಯ ವಿದ್ಯಾರ್ಥಿಗಳು ಹೆಚ್ಚಾಗಿ ಶಾಲೆಯನ್ನು ಅರ್ಧದಲ್ಲಿಯೇ ಬಿಡುವುದರಿಂದ ಅವರಿಗೆ ಮುಂದೆ ಕೃಷಿಕ ಜೀವನಕ್ಕೆ ಉಪಯೋಗವಾಗುತ್ತದೆ. ಇಲ್ಲವೆ ಕೊನೆಯ ಒಂದು ವರುಷದಲ್ಲಿ ಕೃಷಿಯ ವಿಷಯವಾದ ಜ್ಞಾನವನ್ನು ಕೊಡಬಹುದು ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಕಾಲಕಾಲಕ್ಕೆ ತಕ್ಕಂತೆ ಶಿಕ್ಷಣವನ್ನು ಪರಿಶೀಲಿಸಬೇಕು ಮತ್ತು ಪುನರ್ ರಚನೆಯಾಗಬೇಕೆಂದು ಕಾರಂತರ ಉದ್ದೇಶವಾಗಿತ್ತು. ವಿದ್ಯಾಭ್ಯಾಸದಿಂದ ಇಂದಿನ ಯುವಕರು ಮುಂದಿನ ಶತಮಾನಕ್ಕೆ ಕಾಲಿರಿಸುವಾಗ ಅದಕ್ಕೆ ಹೊಂದಾಣಿಕೆಯಾಗಬೇಕು. ಸ್ವಾತಂತ್ರ್ಯನಂತರ ಶಿಕ್ಷಣ ವ್ಯವಸ್ಥೆಯನ್ನು ಕುರಿತು ಹೇಳುತ್ತಾರೆ. ವಿದ್ಯಾರ್ಥಿ ಪ್ರಾಥಮಿಕ ಶಿಕ್ಷಣದಿಂದ ತೊಡಗಿ ಪದವಿ ಶಿಕ್ಷಣವರೆಗೂ ತನ್ನ ಆಯುಷ್ಯವನ್ನು ಕಳೆಯುತ್ತಾನೆ. ಈ ಅವಧಿಯಲ್ಲಿ ವಿದ್ಯಾರ್ಥಿಗಳಿಗೆ ಯಾವ ವಿಷಯಗಳನ್ನು ತಿಳಿಸುತ್ತೆವೆ. ಆ ವಿಷಯಗಳು ಮುಂದಿನ ಅವನ ಜೀವನಕ್ಕೆ ಸಂಬಂಧಿಸಿದವುಗಳಾಗಿವೆಯೇ ಎಂದು ಪ್ರಶ್ನಿಸುತ್ತಾರೆ. ವಿದ್ಯಾರ್ಥಿಗೆ ಹೇಳುವ ವಿಷಯಗಳು ಮತ್ತು ವಯಸ್ಸಿಗೂ ಇರುವ ಸಂಬಂಧವನ್ನು ಕುರಿತು ಯೋಚನೆಯನ್ನು ಮಾಡದೆ ಭೋದನೆಯನ್ನು ಮಾಡುತ್ತೇವೆ. ಅವನ್ನು ಕಲಿಯಲಿರುವ ವಿದ್ಯಾರ್ಥಿಯಲ್ಲಿ ಆ ವಿಷಯ ವ್ಯರ್ಥವಾಗುತ್ತದೆ. ಶಿಕ್ಷಣ ವ್ಯವಸ್ಥೆಯು ಎಲ್ಲಿಯವರೆಗೆ ವಿದ್ಯಾರ್ಥಿಯ ಆಸಕ್ತಿಗೂ ಕಲಿಸುವ ವಿಷಯಕ್ಕೂ ಹೊಂದಿಕೆ ಇರಲೇಬೇಕು ಎಂಬುದನ್ನು ಒಪ್ಪಿಕೊಂಡು ಕೆಲಸ ಮಾಡುವುದಿಲ್ಲವೋ ಅಲ್ಲಿಯವರೆಗೆ ಶಿಕ್ಷಣ ಗುರಿ ಈಡೇರುವುದಿಲ್ಲ, ಇಂದು ಜಗತ್ತಿನಲ್ಲಿ ದಿನದಿಂದ ದಿನಕ್ಕೆ ಹಲವಾರು ಬದಲಾವಣೆಗಳು ಆಗುತ್ತಿವೆ. ಇಂಥಹ ಆಧುನಿಕ ಜಗತ್ತಿಗೆ ಒಯ್ಯಲು ನಾವು ಏನು ಮಾಡಬೇಕು ಎಂಬುದರ ಕುರಿತು ಖಚಿತವಾದ ದೃಷ್ಟಿಯನ್ನು ತಾಳಬೇಕು. ನಮ್ಮ ಶಿಕ್ಷಣಕ್ಕೆ ಈ ವಿಚಾರದಲ್ಲಿ ಆಳವಾದ ಅರಿವು ಬೇಕಾಗುತ್ತದೆ. ಅದಕ್ಕಿಂತ ಮೊದಲು ಮಕ್ಕಳಿಗೆ ತಮ್ಮ ಸುತ್ತಲಿನ ಜಗತ್ತನ್ನು ಕುರಿತು ಪರಿಚಯವನ್ನು ಮಾಡಿ ಕೊಡಬೇಕು ಎನ್ನುತ್ತಾರೆ. ಇಂದಿನ ಶಿಕ್ಷಣವು ಸಾಮಾನ್ಯವಾಗಿ ಹತ್ತನೆಯ ತರಗತಿಯವರೆಗೆ ಜಾಗತಿಕ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಮತ್ತು ನಮ್ಮ ಸುತ್ತಲಿನ ಜನ ಜೀವನದ ಚರಿತ್ರೆಯನ್ನು ವಿವಿಧ ರಾಷ್ಟ್ರಗಳ ಕುರಿತು ವಾಸ್ತವಿಕ ತಿಳಿವನ್ನು ಹೇಳಿಕೊಡಬೇಕೆಂದು ಹೇಳುತ್ತಾರೆ.

ಯಾವುದೇ ರೀತಿಯ ಶಿಕ್ಷಣವು ಸಾರ್ಥಕವಾಗಬೇಕಾದರೆ ಆ ಶಿಕ್ಷಣವನ್ನು ಯಾರಿಗೆ ಕೊಡುತ್ತಿದ್ದಾರೆ ಮತ್ತು ಯಾಕೆ ಕೊಡುತ್ತಿದ್ದಾರೆ ಎಂಬ ಉದ್ದೇಶವು ಸ್ಪಷ್ಟವಾಗಿರಬೇಕು. ಹಿಂದಿನ ಕಾಲದಲ್ಲಿ ಎಲ್ಲರೂ ಶಿಕ್ಷಣವನ್ನು ಪಡೆಯುತ್ತಿರಲಿಲ್ಲ. ಬೌದ್ಧಿಕ ಶಿಕ್ಷಣವು ಕೆಲವರಿಗೆ

ಮಾತ್ರ ಸಿಗುತ್ತಿತ್ತು. ಹಿರಿಯರ ವೃತ್ತಿಯನ್ನು ಮಕ್ಕಳು ಕಲಿಯುವುದೇ ಪ್ರಮುಖವಾಗಿತ್ತು. ಗುರುಗಳು ತಮ್ಮನ್ನಾಶ್ರಾಯಿಸಿದ ಶಿಷ್ಯರಿಗೆ ಮಾತ್ರ ವಿದ್ಯೆಯನ್ನು ಕಲಿಸುತ್ತಿದ್ದರು. ಇಂತಹ ಶಿಕ್ಷಣ ಹೆಚ್ಚಾಗಿ ಅವರ ಮತಧರ್ಮ ಗಳಿಗಷ್ಟೇ ಸೀಮಿತವಾಗಿತ್ತು.

ಇಂದಿನ ಶಿಕ್ಷಣವು ಬಹಳಷ್ಟು ಬದಲಾಗಿದೆ. ಕೇವಲ ಧಾರ್ಮಿಕ ಶಿಕ್ಷಣವನ್ನು ಪಡೆಯುವವರ ಸಂಖ್ಯೆ ತುಂಬಾ ಕಡಿಮೆಯಾಗಿದೆ. ವಿವಿಧ ವೃತ್ತಿಗಳಿಗೆ ಬೇಕಾಗುವ ಶಿಕ್ಷಣವು ಕೂಡ ಹಿರಿಯರಿಂದ ಮಕ್ಕಳಿಗೆ ದೊರಕುವುದು ಕಡಿಮೆಯಾಗಿದೆ. ಇಂದಿನ ಜ್ಞಾನಕ್ಷೇತ್ರವು ಅಗಾಧವಾಗಿ ಬೆಳೆದಿದೆ. ಇಂತಹ ಸಂದರ್ಭದಲ್ಲಿ ಶಿಕ್ಷಣದ ಸ್ವರೂಪ ಇಂಥದ್ದೇ ರೂಪ ಇರಬೇಕು ಎನ್ನುವುದು ಕಠಿಣವೆನಿಸುತ್ತದೆ. ಇಂತಹ ಶಿಕ್ಷಣ ವ್ಯವಸ್ಥೆಯಲ್ಲಿ ವ್ಯಕ್ತಿಗೆ ಸ್ವಂತ ಜೀವನಕ್ಕೆ ಬೇಕಾದ ವೃತ್ತಿ ಶಿಕ್ಷಣ ಕೊಡುವುದು ಶಿಕ್ಷಣದ ಒಂದು ಮುಖವಾದರೆ, ಸಾಮಾಜಿಕ ತಿಳುವಳಿಕೆ ಒದಗಿಸುವುದು ಅದರ ಇನ್ನೊಂದು ಮುಖ್ಯ ಉದ್ದೇಶವಾಗಿದೆ. ಮಕ್ಕಳ ಮನಸ್ಸನ್ನು ಮತ್ತು ಅಭಿರುಚಿಗಳನ್ನು ತಿಳಿದುಕೊಂಡು ಅವರ ಶಕ್ತಿ ಸಾಮರ್ಥ್ಯಗಳನ್ನು ಬೆಳೆಯಲು ಅವಕಾಶ ಕೊಡುವಂತಹ ಶಿಕ್ಷಣ ಕ್ರಮ ರೂಪಗೊಳ್ಳಬೇಕು. ಇಲ್ಲದೇ ಹೋದರೆ ಶಿಕ್ಷಣದ ಉದ್ದೇಶವಾಗಲೀ ಅಥವಾ ಸೂತ್ರಗಳಾಗಲಿ ನಮಗೆ ಪ್ರಯೋಜನವಾಗುವುದಿಲ್ಲ. ಪ್ರಸ್ತುತ ಕಲಿಯಲಿರುವ ವಿದ್ಯಾರ್ಥಿಗಳ ಮುಂದೆ ತನ್ನ ಜೀವನವನ್ನು ನಿರ್ವಹಿಸಲು ಸಮರ್ಥನಾಗಬೇಕು. ಅವನ ಜೀವನಕ್ಕೆ ಬೇಕಾದಂತ ಸಂಪಾದನೆ ಮಾಡಲು ಅವನಿಗೆ ಸಾಧ್ಯವಾಗಬೇಕು. ಈ ವಿಷಯದ ಯೋಚನೆ ನಮಗೆ ಬೇಡವೆ ಎಂದು ಪ್ರಶ್ನಿಸುತ್ತಾರೆ. ಪ್ರೌಢ ಶಿಕ್ಷಣದ ನಂತರ ವಿಶ್ವವಿದ್ಯಾಲಯ ಕ್ಷೇತ್ರ. ವಿದ್ಯಾರ್ಥಿಯು ವಿಶ್ವವಿದ್ಯಾಲಯಕ್ಕೆ ಬರುವ ತನಕ ಏನು ಮಾಡಬೇಕೆಂಬುದನ್ನು ತಿಳಿಸುತ್ತಾರೆ. ಶಿಕ್ಷಣದ ಪೂರ್ವ ಪೀಠಿಕೆಯು ನಾವು ಬಾಳುತ್ತಿರುವ ಲೋಕದ ಪರಿಚಯಕ್ಕಾಗಿ ಮುಂದಿನ ಶಿಕ್ಷಣವು ವಿಶ್ವವಿದ್ಯಾಲಯಗಳು ಒದಗಿಸುವ ಶಿಕ್ಷಣಕ್ಕೂ ನೇರ ಸಂಬಂಧವಿರಬೇಕು ಎನ್ನುತ್ತಾರೆ.

ಸ್ವಾತಂತ್ರ್ಯನಂತರ ಭಾರತದಲ್ಲಿ ಹಲವಾರು ಪ್ರಾಥಮಿಕ ಶಾಲೆಗಳು ಸ್ಥಾಪನೆಯಾದವು. ಈ ಶಾಲೆಗಳ ಸ್ಥಾಪನೆ ನಂತರ ಕಲಿಯುವ ಮಕ್ಕಳ ಸಂಖ್ಯೆಯು ಹೆಚ್ಚಾಯಿತು. ಆದರೆ ಶಿಕ್ಷಣದ ಗುಣಮಟ್ಟವು ಕಡಿಮೆಯಾಯಿತು. ಹಳ್ಳಿಯಲ್ಲಿ ಕಲಿಯುವ ಮಕ್ಕಳು, ನಗರದಲ್ಲಿ ಕಲಿಯುವ ಮಕ್ಕಳು ಅಷ್ಟೇ ಅಲ್ಲ ಖಾಸಗಿ ಶಾಲೆಗಳಲ್ಲಿ ಮತ್ತು ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕಲಿಕೆಯಲ್ಲಿ ಮತ್ತು ಶಿಕ್ಷಣದ ಗುಣಮಟ್ಟದಲ್ಲಿ ಬಹಳಷ್ಟು ವ್ಯತ್ಯಾಸಗಳು ಕಂಡುಬಂದವು. ಸಾಮಾನ್ಯವಾಗಿ ಶಾಲೆಗಳನ್ನು ಅರ್ಧದಲ್ಲೇ ಬಿಡುವ ಮಕ್ಕಳು ಬಾಲಕಾರ್ಮಿಕರಾಗುತ್ತಿದ್ದಾರೆ. ದೇಶಾದ್ಯಂತ ಪ್ರಾಥಮಿಕ ಶಿಕ್ಷಣದಲ್ಲಿರುವ ತಾರತಮ್ಯವನ್ನು ನಿವಾರಣೆಮಾಡಿ ಶಿಕ್ಷಣದಲ್ಲಿ ಏಕರೂಪತೆಯನ್ನು ತರಲು ಭಾರತ ಸರ್ಕಾರ ಪ್ರಯತ್ನಿಸಿತು. ಆದರೂ ಕೂಡ ಪ್ರಾಥಮಿಕ ಶಾಲೆಯಲ್ಲಿ ಕಲಿತ ಎಷ್ಟೋ ಮಕ್ಕಳು ನಾಲ್ಕರಿಂದ ಐದು ವರ್ಷ ಕಲಿತರೂ ಸರಿಯಾಗಿ

ಓದಲು ಬರುವುದಿಲ್ಲ. ಶೇ. ೫೦ರಷ್ಟು ಮಕ್ಕಳು ಪ್ರಾಥಮಿಕ ಶಿಕ್ಷಣದ ಬಳಿಕ ತಮ್ಮ ಓದನ್ನು ಮುಂದುವರಿಸಲಾಗುವುದಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ಪ್ರಾಥಮಿಕ ಮಕ್ಕಳ ಪಠ್ಯಕ್ರಮ ವ್ಯವಸ್ಥೆಯನ್ನುಬಹುದು. ಪಠ್ಯಕ್ರಮದಲ್ಲಿರುವ ವಿಷಯವು ಕೇವಲ ಮಾಹಿತಿ, ಅಂಕಿಅಂಶಗಳಿಂದ ಮಕ್ಕಳಿಗೆ ಕಲಿಯಲು ಆಸಕ್ತಿಯನ್ನು, ಹುಟ್ಟಿಸುವುದಿಲ್ಲ. ಅಂಶಗಳ ಮಾಹಿತಿಯನ್ನು ಮಕ್ಕಳ ತಲೆಗೆ ತುಂಬಲಾಗುತ್ತಿದೆ. ಮಕ್ಕಳ ಆಸಕ್ತಿಯನ್ನು ಮನೋಧರ್ಮವನ್ನು ಬದಿಗಿರಿಸಿ ಕೇವಲ ಪಠ್ಯದ ಮಾಹಿತಿಯನ್ನು ಕಂಠಪಾಟ ಮಾಡಿಸುತ್ತಿವೆ. ಇದರಿಂದ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಗಿಸುವ ಮುನ್ನವೆ ಹಲವಾರು ವಿದ್ಯಾರ್ಥಿಗಳು ಶಾಲೆಯನ್ನು ಬಿಡುತ್ತಾರೆ.

ಸ್ವಾತಂತ್ರ್ಯಪೂರ್ವದಲ್ಲಿ ಶೇ. ೮೦ರಷ್ಟು ಜನರು ಸ್ವತಂತ್ರ ವೃತ್ತಿಯನ್ನು ಕೈಗೊಳ್ಳುತ್ತಿದ್ದರು. ತಮ್ಮ ಜೀವನವನ್ನು ನಿರ್ವಹಿಸುವುದಕ್ಕೆ ಬೇಸಾಯ, ವ್ಯಾಪಾರ ಮಾಡುತ್ತಾ ತಮ್ಮ ವೃತ್ತಿಯನ್ನು ತಾವೇ ಕಂಡುಕೊಂಡಿದ್ದರು. ಸ್ವಾತಂತ್ರ್ಯ ನಂತರದ ಶಿಕ್ಷಣ ವ್ಯವಸ್ಥೆಯು ಎಲ್ಲರಿಗೂ ಶಿಕ್ಷಣವನ್ನು ನೀಡಲು ಪ್ರಾರಂಭಿಸಿತು. ಆದರೆ ಈ ಶಿಕ್ಷಣಕ್ಷೇತ್ರ ವಿಶೇಷ ತಿಳಿವನ್ನು ಒದಗಿಸಿಲ್ಲ. ನಮ್ಮ ಶಿಕ್ಷಣ ಕ್ಷೇತ್ರ ಕೇವಲ ಮೂವತ್ತರಷ್ಟು ಜನಕ್ಕೆ ಮಾತ್ರ ಶಿಕ್ಷಣ ಕ್ಷೇತ್ರಗಳು ನಡೆಯುತ್ತಿವೆ ಎನ್ನುತ್ತಾರೆ. ಅಂಥವರು ತಮ್ಮ ಹಿರಿಯರು ನಡೆಸಿಕೊಂಡು ಬರುತ್ತಿರುವ ವೃತ್ತಿಗೆ ಸೇರುವುದು ಅನುಮಾನ. ಇದರಿಂದ ಪರಿಣಾಮ ಇಂದಿನ ಪೀಳಿಗೆಯಲ್ಲಿ ಹೆಚ್ಚಾಗಿ ಬೆಜವಾಬ್ದಾರಿಯ ನಡವಳಿಕೆಯನ್ನು ಕಾಣುತ್ತಿದ್ದೇವೆ. ಕೊಲೆ ಸುಲಿಗೆಗಳಲ್ಲಿ, ಡಕಾಯಿತಿ ದರೋಡೆಯಲ್ಲಿ ಹೆಚ್ಚಾಗಿ ಇಪ್ಪತ್ತರಿಂದ ಇಪ್ಪತ್ತೈದು ವರ್ಷದ ವಯಸ್ಸಿನ ಯುವಕರಿರುವುದನ್ನು ಗಮನಿಸಿದರೆ ಸರಿಯಾದ ನೀತಿಯುತ ಮಾರ್ಗದರ್ಶನವಿಲ್ಲದೆ ಪೀಳಿಗೆಯ ನಿರ್ಮಾಣವಾಗಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಈ ಕಾರಣಗಳಿಂದ ಸಾಮಾಜಿಕ ಅಶಾಂತಿ, ಭಯದ ವಾತಾವರಣ, ಅನಿಶ್ಚಿತ ಪರಿಸ್ಥಿತಿಗಳು ಉಂಟಾಗಿವೆ. ಬಹಳಷ್ಟು ವಿದ್ಯಾರ್ಥಿಗಳು ಸರಿಯಾದ ಗುರಿಯಿಲ್ಲದೆ ಮಾದಕದ್ರವ್ಯ ಸೇವನೆಯಲ್ಲಿ, ಚಲನಚಿತ್ರಗಳನ್ನು ನೋಡುವಲ್ಲಿ ಹೆಚ್ಚು ಆಸಕ್ತರಾಗಿದ್ದಾರೆ. ವಿದ್ಯಾಭ್ಯಾಸವನ್ನು ಮಾಡುವ ರೂಢಿ ಹೆಚ್ಚು ಇಲ್ಲವಾಗಿದೆ ಎಂದು ಹೇಳಬಹುದು. ಗುರು ಹಿರಿಯರಲ್ಲಿ ಗೌರವ ಸಂಪ್ರದಾಯ ಇಲ್ಲದವರಾಗಿದ್ದಾರೆ. ಬೇಜವಾಬ್ದಾರಿಯುತ ನಡೆ–ನುಡಿ ಅವರ ಸಾಮಾನ್ಯ ಲಕ್ಷಣವಾಗಿದೆ. ಇದಕ್ಕೆ ಕಾರಣಗಳು ಅನೇಕ ಪಾಲಕರಲ್ಲಿ, ಸಮಾಜದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಮಕ್ಕಳಿಗೆ ಉದಾಹರಣೆಯು ವಿರಳವಾಗಿದೆ. ಎಲ್ಲಡೆಯು ಭ್ರಷ್ಟಚಾರ ಸ್ವಾರ್ಥ ಅಪ್ರಮಾಣಿಕತೆ, ಶೋಷಣೆ ನಡೆದಿದೆ. ಧೂರ್ತ ವ್ಯಕ್ತಿಗಳು ಯಶಸ್ವಿಯಾಗಿ ಜೀವನವನ್ನು ಮಾಡಬಲ್ಲವರಾಗಿದ್ದಾರೆ. ಯೋಗ್ಯ ವ್ಯಕ್ತಿಗಳಿಗೆ ಹೆಜ್ಜೆ ಹೆಜ್ಜೆಗೂ ಹಲವಾರು ತೊಡಕುಗಳು, ಸಮಸ್ಯೆಗಳು ಎದುರಾಗುತ್ತಿವೆ. ಉತ್ತಮ ಮೌಲ್ಯಗಳಿಂದ ಬಾಳುವ ಪ್ರಯತ್ನದಲ್ಲಿ ಅವನು ಅನೇಕ ಕಷ್ಟ ನಷ್ಟಗಳಿಗೆ ಗುರಿಯಾಗುವ ಪರಿಸ್ಥಿತಿ ನಿರ್ಮಾಣವಾಗಿದೆ. ಮೌಲ್ಯಗಳಿಲ್ಲದ ವ್ಯಕ್ತಿ ತನ್ನ ಚಾಣಕ್ಷತನದಿಂದ ಸಮಾಜ ಸಂಸ್ಥೆಗಳಿಗೆ

ಮೋಸ ಮಾಡುತ್ತಾ ಮೇಲೆ ಏರಬಲ್ಲವನಾಗಿದ್ದಾನೆ, ಪುರಸ್ಕಾರಗಳನ್ನು ಪಡೆಯಬಲ್ಲವನಾಗಿದ್ದಾನೆ. ಬುದ್ಧಿವಂತರಾದ, ನಿಷ್ಠಾವಂತರಾದ, ಉತ್ತಮ ಚಾರಿತ್ರ್ಯವುಳ್ಳ ಮಕ್ಕಳಿಗೆ ಸರಿಯಾದ ಗೌರವ ಸಿಗದ ಸ್ಥಿತಿಯೂ ಅನೇಕ ಕಡೆ ಉಂಟಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಯೋಗ್ಯ ಪೀಳಿಗೆಯ ನಿರ್ಮಾಣ ಹೇಗೆ ಸಾಧ್ಯ? ಇಂದಿನ ವಿದ್ಯಾಭ್ಯಾಸದಿಂದ ಮುಂದೆ ನೌಕರಿ ಸಿಗುವುದೆಂಬ ನಂಬಿಕೆಯು ಇಲ್ಲ. ಏಕೆಂದರೆ ವಿಶ್ವವಿದ್ಯಾಲಯದಿಂದ ಹೊರಬಿದ್ದ ಸ್ನಾತಕರು ತಾವು ಓದಿಕೊಂಡ ಐಚ್ಛಿಕ ವಿಷಯಗಳನ್ನು ಕುರಿತು ನಿರಾಸಕ್ತರಾಗುತ್ತಾರೆ. ಇದಕ್ಕೆ ಮುಖ್ಯ ಕಾರಣ ಆ ವಿಷಯಗಳನ್ನು ಕುರಿತು ಆಸಕ್ತಿಯನ್ನು ಶಿಕ್ಷಣ ಕೆರಳಿಸಿದೆ ಹೋದದ್ದು. ನಮ್ಮ ಉಚ್ಚ ಶಿಕ್ಷಣದಿಂದ ಅವರ ಯಾವ ಅಭಿರುಚಿಯು ಹೆಚ್ಚಿಲ್ಲ ಎಂಬುದಕ್ಕೆ ಇದು ಸಾಕ್ಷಿಯಾಗಿದೆ. ವಿಶ್ವವಿದ್ಯಾಲಯಗಳಲ್ಲಿ ಜ್ಞಾನವನ್ನು ಕುರಿತು ಆಸಕ್ತಿಯನ್ನು ಬೆಳೆಸುವವರು ಯಾರು? ಆ ಹೊಣೆ ಯಾರದ್ದು? ಅದು ಬೆಳೆಯಬೇಕಾದ ಸ್ಥಳ ಇದಲ್ಲವೇ? ಎಂಬುದನ್ನು ಯೋಚಿಸಿ ಎನ್ನುತ್ತಾರೆ.

> ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಹೇಳುವ ವಿಷಯಗಳು ಅವರಿಗೆ ಬೇಕೆನಿಸುತ್ತವೆಯೇ? ಬೇಕೆನಿಸಿದೆ ಹೋದರೆ, ನಮ್ಮ ಪ್ರಯತ್ನ ಶಿಕ್ಷೆಯಾಗುತ್ತದೆ. ಉಪಾಧ್ಯಾಯ ಎಷ್ಟು ಪ್ರಶ್ನೆ ಕೇಳುತ್ತಾನೆನ್ನುವುದು ಮುಖ್ಯವಲ್ಲ. ಎಷ್ಟು ಪ್ರಶ್ನೆಗಳಿಗೆ ಮಕ್ಕಳು ಉತ್ತರ ಕೊಡುತ್ತರೆನ್ನುವುದು ಮುಖ್ಯವಲ್ಲ. ಜಗತ್ತನ್ನು ಕುರಿತು ತಮ್ಮ ಸುತ್ತಣ ಜೀವನವನ್ನು ಕುರಿತು, ಆ ಮಕ್ಕಳು ಉಪಾಧ್ಯಾಯನ್ನು ಕುರಿತು ಎಷ್ಟು ಪ್ರಶ್ನೆಗಳು ಕೇಳುತ್ತವೆ–ಎನ್ನುವುದು ಮುಖ್ಯ. ಶಾಲೆಗೆ ಬರುವ ಮೊದಲು ತಾಯಂದಿರಲ್ಲಿ, ಅಣ್ಣ, ತಮ್ಮಂದಿರಲ್ಲಿ ಎಷ್ಟೆಷ್ಟೋ ಪ್ರಶ್ನೆಗಳನ್ನು ಕೇಳುತ್ತಿದ್ದ ಮಗುವನ್ನು ಶಾಲೆಗೆ ತಂದು ಮೂಕವಾಗಿ ಕುಳ್ಳಿರಿಸಿ, ಉಪಾಧ್ಯಾಯನ ಮಾತುಗಳನ್ನು ಮಾತ್ರವೇ ಕೇಳಬೇಕಾದ ಒಂದು ಗೊಂಬೆ ಆ ಮಗುವಾದರೆ, ಜ್ಞಾನದ ಪಾಲಿಗೂ ಆ ಮಗು ಮೂಕ ಗೊಂಬೆಯಾದೀತು.[೮]

ಎಂಬ ಎಚ್ಚರಿಕೆಯ ಮಾತುಗಳನ್ನು ಹೇಳುತ್ತಾರೆ. ಈ ದೃಷ್ಟಿಯಿಂದ ಮಕ್ಕಳ ಶಿಕ್ಷಣ ಕ್ರಮವನ್ನು ಬದಲಿಸಬೇಕಾಗುತ್ತದೆ. ರೂಢಿಯ ಪಠ್ಯ ಪುಸ್ತಗಳನ್ನು ತಿದ್ದಬೇಕು. ಅದರಲ್ಲಿರುವ ಹಲವಾರು ವಿಷಯಗಳನ್ನು ತಿದ್ದಬೇಕು ಹಾಗೂ ಅದರಲ್ಲಿರು ವಿಷಯವನ್ನು ತಿಳಿಸುವ ಕ್ರಮವನ್ನು ತಿದ್ದಬೇಕಾಗುತ್ತದೆ.

ಯಾವುದೇ ವಿಷಯವನ್ನು ಸ್ವತಃ ಓದಿ ತಿಳಿಯುವುದಕ್ಕೂ, ತಿಳಿದ ವಿಷಯವನ್ನು ತಿಳಿಸಿ ಹೇಳುವುದಕ್ಕೂ ವಿದ್ಯಾರ್ಥಿಗೆ ಭಾಷೆಯ ಮೇಲೆ ಪ್ರಭುತ್ವ ಇರಲೇಬೇಕು. ಆ ರೀತಿಯಲ್ಲಿ ವಿದ್ಯಾರ್ಥಿಯನ್ನು ಸಿದ್ಧಗೊಳಿಸದೆ ಹೋದರೆ ಅವರಲ್ಲಿ ಮುಂದೆ ಓದುವ ವಿಷಯಗಳ ಕುರಿತು ಆಸಕ್ತಿ ಹುಟ್ಟಲು ಸಾಧ್ಯವಿಲ್ಲ. ಪ್ರಾಥಮಿಕ ಶಾಲೆಯ ವಿವಿಧ ವಿಷಯಗಳ ಪಠ್ಯಪುಸ್ತಕಗಳು ಆಯಾ ತರಗತಿಯ ಮಕ್ಕಳಿಗೆ ಸರಿಯಾಗಿ ಅರ್ಥವಾಗುವಂತಿರಬೇಕು. ಮುಖ್ಯವಾಗಿ ಜ್ಞಾನ

ಸಂಪಾದನೆಯು ನಡೆಯಬೇಕಾದುದು ಭಾಷೆಯ ಮೂಲಕವೇ ಆದುದರಿಂದ ಎಲ್ಲಕ್ಕಿಂತ ಮೊದಲು ಭಾಷಾ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಬೇಕು ಎಂದು ಕಾರಂತರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಹಾಗೆ ಕಲಿಸುವ ಭಾಷೆ ಯಾವುದು ಅದರಲ್ಲಿ ಏನೇನಿರಬೇಕು? ಅದನ್ನು ಹೇಗೆ ಕಲಿಸಬೇಕು ಎಂಬ ಮುಂತಾದ ವಿಚಾರಗಳನ್ನು ತಿಳಿಸುತ್ತಾರೆ.

ಮಗುವಿನ ಮನಸ್ಸನ್ನು ಮೊದಲು ಮಾತಿನ ಮೂಲಕವೇ ಆರಂಭಿಸಬೇಕು ಎಂದು ಹೇಳುತ್ತಾರೆ. ಸರಿಯಾದ ಉಚ್ಚಾರಣೆಗೆ ಭಾಷೆ ಅನಿವಾರ್ಯ. ಮಗುವಿಗೆ ಮೊದಲು ಮಾತು ಬಂದ ಮೇಲೆಯೇ ಓದು ಬರಹವನ್ನು ಕಲಿಸಬೇಕು. ಮಗುವಿಗೆ ಭಾಷೆಯನ್ನು ಕನ್ನಡದಲ್ಲಿ ಕಲಿಸುವುದಾದರೂ ಅದನ್ನು ಮನೆಯ ಮಾತಿನಲ್ಲಿಯೇ ಹೇಳಬೇಕು ಎಂದು ಕಾರಂತರು ಹೇಳುತ್ತಾರೆ.

> ಮಗುವಿಗೆ ಕನ್ನಡ ಕಲಿಸುವುದಾದರೂ ಸರಿಯೇ ಅದರ ಮನೆ ಮಾತು ಗ್ರಾಮ್ಯ. ಅದು ಕುಳಿತುಕೋ ಅನ್ನಬೇಕೇ, ಕುಂದ್ರು ಅನ್ನಬೇಕೆ, ಕೂಕೋ ಅನ್ನಬೇಕೇ ಕುಕ್ಕರಿಸು ಅನ್ನಬೇಕೆ? ಎಲ್ಲಕ್ಕಿಂತ ಮೊದಲು ನಾವು ಬಸುವ ಕನ್ನಡ ಗ್ರಾಮದ್ಯದಲ್ಲಿದ ಕನ್ನಡ ಎಂದಾದರೆ ಅದನ್ನು ಆ ಮಗುವಿಗೆ ರೂಢಿಸಿಲೇಬೇಕು. ಕರ್ನಾಟಕದಲ್ಲಿ ೨೦ ರಿಂದ ೩೦ ಗ್ರಾಮ್ಯ ಗಳಿವೆ. ಅದನ್ನು ಸಂಭಾಷಣೆಯ ಮೂಲಕ ತಿದ್ದಿ ಶುದ್ಧ ಭಾಷೆಯನ್ನು ಕಲಿಸುವ ಕೆಲಸ ಮೊದಲು ನಡೆಯಬೇಕು ಎಂದು ಹೇಳುತ್ತಾರೆ.

ಮಕ್ಕಳು ಮನೆಯಲ್ಲಿ ಯಾವ ವಿಧದ ಭಾಷೆಯನ್ನು ಮಾತನಾಡುತ್ತಾರೋ ಅದೇ ಭಾಷೆಯಲ್ಲಿ ಮಾತನಾಡಿ ಮಕ್ಕಳನ್ನು ಆಕರ್ಷಿಸಬೇಕು. ನಂತರ ಪಠ್ಯಗಳನ್ನು ಕಲಿಸಬೇಕು ಎನ್ನುವುದು ಕಾರಂತರ ಆಶಯವಾಗಿದೆ. ಪ್ರಾಥಮಿಕ ಮಕ್ಕಳು ಭಾಷೆಯಲ್ಲಿ ಪರಿಣಿತಿ ಪಡೆಯಬೇಕಾದರೆ ಮಾತನಾಡುವ ವಿಷಯವು ಮಕ್ಕಳಲ್ಲಿ ಆಸಕ್ತಿಯನ್ನು ಹುಟ್ಟಿಸುವ ರೀತಿಯಲ್ಲಿರಬೇಕು. ಮಕ್ಕಳಲ್ಲಿ ಆಸಕ್ತಿಯನ್ನು ಹುಟ್ಟಿಸದೆ ಹೋದರೆ ಮುಂದೆ ಯಾವ ಕೆಲಸವು ಪ್ರಯೋಜನವಾಗುವುದಿಲ್ಲ. ಓದು ಬರಹಕ್ಕೆ ಅದೇ ತಳಹದಿ ಎನ್ನುತ್ತಾರೆ. ಕಾರಂತರು ಪ್ರಾಥಮಿಕ ಶಾಲೆಗಳನ್ನು ಸಂದರ್ಶಿಸಿ ಅಲ್ಲಿನ ಪಠ್ಯ ಪುಸ್ತಕಗಳನ್ನು, ಭಾಷೆಯನ್ನು ಕಂಡು ಕಲಿಸುವ ರೀತಿಯನ್ನು ನೋಡಿದಾಗ ಅವರಿಗೆ ಅಲ್ಲಿ ಕೊಡುವ ಶಿಕ್ಷಣ ಮಾನಸಿಕಹಿಂಸೆ ಅನಿಸಿತು. ಇವತ್ತಿನ ಪ್ರಾಥಮಿಕ ಶಾಲೆಗಳ ಪಠ್ಯಪುಸ್ತಕಗಳನ್ನು ನೋಡಿದರೆ ದಿಗಿಲು ಬರುತ್ತದೆ ಎನ್ನುತ್ತಾರೆ. ಆ ಕುರಿತು ಹಲವಾರು ಸಲಹೆಗಳನ್ನು ಕೊಡುತ್ತಾರೆ. ಪಠ್ಯಪುಸ್ತಕಗಳು ಸರಳವಾದ ಭಾಷೆಯಿಂದ ಕೂಡಿರಬೇಕು. ಮಕ್ಕಳಿಗೆ ಸುಲಭವಾಗಿ ನೆನಪು ಇರಿಸಿಕೊಳ್ಳುವ ಹಾಗಿರಬೇಕು. ಕ್ಲಿಷ್ಟಕರವಾದ ಶಬ್ದಗಳಿರಬಾರದು. ಆರಂಭದಲ್ಲಿ ಒತ್ತಕ್ಷರಗಳು ಮಹಾಪ್ರಾಣಗಳು, ಉದ್ದ ಶಬ್ದಗಳು ಇರಬಾರದು. ಓದಿದ ವಾಕ್ಯಗಳು

ನೆನಪಿನಲ್ಲಿ ಉಳಿಯಲು ವಿಷಯಕ್ಕೆ ಸಂಬಂಧಿಸಿದಂತ ಚಿತ್ರಗಳು ಅತೀ ಮುಖ್ಯವಾಗುತ್ತವೆ. ಅವರಿಗೆ ಓದಲು ಬರುತ್ತದೆ ಎಂಬ ವಿಶ್ವಾಸ ಮೂಡಿಸುವ ಸರಳ ರೀತಿಯಲ್ಲಿರಬೇಕು ಎಂದು ಪ್ರಾಥಮಿಕ ಪಠ್ಯಗಳ ಕುರಿತು ಹಲವಾರು ವಿಚಾರಗಳನ್ನು ತಿಳಿಸುತ್ತಾರೆ. ಇವೇ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕಾರಂತರು ಹಲವಾರು ಪಠ್ಯಪುಸ್ತಕಗಳನ್ನು ರಚಿಸಿದ್ದಾರೆ. ಮಕ್ಕಳು ಓದುಗಾರಿಕೆಗೆ ತೊಡಗುವ ಮೊದಲು ಆ ಭಾಷೆಯಲ್ಲಿ ಮಾತಾಡುವ ಶಕ್ತಿ ಬಂದಿರಬೇಕು ಎನ್ನುತ್ತಾರೆ. ಆಮೇಲೆ ಓದುವುದನ್ನು ಅಭ್ಯಾಸ ಮಾಡಬೇಕು. ನಂತರ ಬರಹವನ್ನು ಪ್ರಾರಂಭ ಮಾಡಬೇಕು ಎನ್ನುತ್ತಾರೆ. ಮಕ್ಕಳ ಪಾಲಿನ ಅನುಭವಕ್ಕೆ ಬರುವ ಹಲವಾರು ವಿಷಯಗಳು ಅವರ ಅರಿವಿಗೆ ಬರಬೇಕು. ತಮ ಸುತ್ತಲಿನ ಪರಿಸರ, ಗುಡ ಬೆಟ್ಟ, ಗಿಡ ಮರ, ಹಸು, ಹಕ್ಕಿಗಳು ಅವರ ವಸ್ತುವಾಗಬೇಕು ಅವನ್ನು ಕುರಿತು ಮಕ್ಕಳು ಉತಾಹದಿಂದ ಬರೆಯುವಂತಾಗ ಬೇಕು. ಹಾಗೆ ಮಾಡಿದಾಗ ಮಾತ್ರವೇ ಮಕ್ಕಳಿಗೆ ಭಾಷೆಯ ಮೇಲೆ ಪ್ರಭುತ್ವ ಬರುತ್ತದೆ ಎಂದು ಹೇಳುತ್ತಾರೆ.

ಮಗುವಿಗೆ ಒಂದು ಭಾಷೆ ಬಂದ ನಂತರವೇ ಇನ್ನೊಂದು ಭಾಷೆಯನ್ನು ಕಲಿಸಬೇಕು. ಏಕಕಾಲಕ್ಕೆ ಎರಡು ಮೂರು ಭಾಷೆಗಳನ್ನು ಕಲಿಸಬಾರದು. ಒಂದು ಭಾಷೆ ಬಂದ ಬಳಿಕ ಇನ್ನೊಂದನ್ನು ಕಲಿಸಬೇಕು. ಇಲ್ಲದಿದ್ದರೆ ಯಾವ ಭಾಷೆಯಲ್ಲೂ ಮಕ್ಕಳು ಪ್ರಭುತ್ವವನ್ನು ಸಾಧಿಸುವುದಿಲ್ಲ ಎಂಬ ಆತಂಕವನ್ನು ವ್ಯಕ್ತಪಡಿಸುತ್ತಾರೆ. ಶಿಕ್ಷಣ ಸಮಿತಿಗಳು ಮಗುವಿಗೆ ಒಂದೇ ಕಾಲಕ್ಕೆ ಕನ್ನಡ, ಇಂಗ್ಲಿಷ್, ಹಿಂದಿ ಮೂರು ಭಾಷೆಗಳನ್ನು ಕಲಿಸಲು ಶಿಫಾರಸು ಮಾಡಿರುವುದನ್ನು ಕಾಣ ಬಹುದು. ಮಕ್ಕಳು ತಮ ಸುತ್ತಮುತ್ತ ಎರಡು ಮೂರು ಭಾಷೆಗಳಿದ್ದರೆ ಆ ಭಾಷೆಗಳು ಮಗುವಿಗೆ ಸದಾ ಕೇಳಿಸುವಂತಿದ್ದರೆ ಆ ಮೂರು ಭಾಷೆಗಳನ್ನು ಕಲಿಯುತ್ತದೆ. ಮಕ್ಕಳು ಭಾಷೆಯನ್ನು ಸುಲಭವಾಗಿ ಕಲಿಯುವುದು ಆ ಭಾಷೆಯನ್ನು ಪದೇ ಪದೇ ಕೇಳಿ ಮತ್ತು ಮಾತಾನಾಡುವುದರಿಂದಲೇ ಹೊರತು ಪುಸ್ತಕದಿಂದಲ್ಲ ಎಂಬ ವಿಚಾರವನ್ನು ವ್ಯಕ್ತ ಪಡಿಸುತ್ತಾರೆ.

ಸ್ವಾತಂತ್ರ್ಯ ನಂತರದ ಶಿಕ್ಷಣ ವ್ಯವಸೆಯು ಪ್ರಾಥಮಿಕ ಹಂತದಿಂದಲೇ ಗಣಿತವನ್ನು ಕಲಿಯಬೇಕು ಎಂದು ಹಲವಾರು ಶಿಕ್ಷಣ ಸಮಿತಿಗಳು ವರದಿಯನ್ನು ಮಾಡುತ್ತವೆ. ಕಾರಂತರು ಇದನ್ನು ವಿರೋಧಿಸುತ್ತಾರೆ. ಸಣ್ಣ ಮಕ್ಕಳಿಗೆ ಕಲಿಸುವ ಗಣಿತದ ರೂಪ ಭಯ ಹುಟ್ಟಿಸುವಂತದ್ದು ಎನ್ನುತ್ತಾರೆ. ಸಾಮಾನ್ಯವಾಗಿ ಮಕ್ಕಳು ಅಂಕಿ ಸಂಖ್ಯೆಗಳನ್ನು ಗುಣಿಸುತ್ತಾರೆ, ಕೂಡಿಸುತ್ತಾರೆ. ಆದರೆ ಮಕ್ಕಳಿಗೆ ಕೋಟಿ, ದಶಲಕ, ಲಕ, ಸಾವಿರಗಳಂಥ ಅವಾಸ್ತವಿಕ ಅಂಕಿ ಸಂಖ್ಯೆಗಳನ್ನು ಕೊಟ್ಟು ಭಯವನ್ನು ಹುಟ್ಟಿಸಬಾರದು. ಒಂದು ವಸ್ತುವಿಗೆ ಎಷ್ಟೆಷ್ಟೋ ಬೆಲೆ ಹೇಳಿ ಎಷ್ಟೆಷ್ಟೋ

ಸಾವಿರ ಜನರಿಗೆ ಅಷ್ಟೆಲ್ಲಾ ಹಂಚಿದರೆ ಎಷ್ಟು ಹಣ ವೆಚ್ಚವಾಗುತ್ತದೆ ಎಂಬ ಅವಾಸ್ತವಿಕತೆಯ ಲೆಕ್ಕಗಳಿಂದ ಮಕ್ಕಳಿಗೆ ಶಿಕ್ಷಣದ ಮೇಲೆ ಆಸಕ್ತಿಯನ್ನು ಕಡಿಮೆಯಾಗುತ್ತದೆ. ಇಂದಿಗೂ ಮಕ್ಕಳ ಮುಂದಿರಿಸುವ ಹಲವಾರು ಪ್ರಶ್ನೆಗಳು, ಬೆಲೆಗಳು, ಅಂಕಿ ಸಂಖ್ಯೆಗಳು ಅವಾಸ್ತಕವಿಕವಾಗಿದ್ದು ಭಯವನ್ನು ಹುಟ್ಟಿಸುವ ರೀತಿಯಲ್ಲಿರುವುದನ್ನು ಗಮನಿಸಬಹುದು. ಶೈಕ್ಷಣಿಕ ವ್ಯವಸ್ಥೆಯು ಮಕ್ಕಳಿಗೆ ಯಾವ ವಿಷಯಗಳನ್ನು ತಿಳಿಸಲು ಪ್ರಯತ್ನಿಸುತ್ತವೆಯೋ ಆ ವಿಷಯವನ್ನು ಕುರಿತು ಕುತೂಹಲ ಮತ್ತು ಆಸಕ್ತಿಗಳನ್ನು ಕೆರಳಿಸುವ ಬದಲು ಅವರ ಸ್ಮರಣ ಶಕ್ತಿಯನ್ನು ಕೆಣಕುತ್ತವೆ. ಸಂಖ್ಯೆಗಳನ್ನೋ, ವಿಷಯಗಳನ್ನೊ ನೆನಪಿನಲ್ಲಿರಿಸುವ ಈ ಶಿಕ್ಷಣ ಕ್ರಮವನ್ನು ಕಾರಂತರು ತಮ್ಮ ಹಲವಾರು ಲೇಖನಗಳಲ್ಲಿ ಟೀಕಿಸುವುದನ್ನು ಕಾಣಬಹುದು. ನಮ್ಮ ಪ್ರಾಥಮಿಕ ಶಾಲೆಗಳ ಪಠ್ಯಪುಸ್ತಕಗಳಲ್ಲಿ ಹೇಳುವ ಗಣಿತ ಮಕ್ಕಳ ಗ್ರಹಣ ಶಕ್ತಿಗೆ ಮೀರಿದ್ದು, ಅದರಲ್ಲಿ ಬರುವ ಲೆಕ್ಕಗಳು ವಿದ್ಯಾರ್ಥಿಯ ಬದುಕಿಗೆ ಮೀರಿದವು. ಗಣಿತ ಕ್ಷೇತ್ರದಲ್ಲಿ ಇರುವ ವಿಷಯಗಳು ಅವರ ಗ್ರಹಣ ಶಕ್ತಿಗೆ ಮೀರಿದ್ದು ಅದನ್ನು ಕಲಿಯಲು ಪ್ರಾಥಮಿಕ ಮಕ್ಕಳು ತುಂಬಾ ಕಷ್ಟಪಡುತ್ತಾರೆ. ಮಕ್ಕಳು ಸಹಜವಾಗಿ ಕೇಳುವ ಪ್ರಶ್ನೆಗೆ ಉತ್ತರವನ್ನು ಹೇಳುವ ವಿಶ್ವಾಸವನ್ನು ಮೂಡಿಸುವ ಬದಲು ಮಕ್ಕಳನ್ನು ಸೋಲಿಸುವ ಗುರಿಯನ್ನು ಇಂದಿನ ಶಿಕ್ಷಣವು ಹೊಂದಿದೆ ಎಂಬ ಅಭಿಪ್ರಾಯವನ್ನು ಕಾರಂತರು ವ್ಯಕ್ತಪಡಿಸುತ್ತಾರೆ.

ಶಿವರಾಮ ಕಾರಂತರು ತಮ್ಮ ಸ್ವಂತ ಅನುಭವಗಳ ಮೇಲೆ ಮಕ್ಕಳಿಗಾಗಿ ಪುಸ್ತಕಗಳನ್ನು ರಚಿಸಲು ಸಮಸ್ಯೆಗಳನ್ನು ಮತ್ತು ಅದಕ್ಕೆ ಸಲಹೆಗಳನ್ನು ತಿಳಿಸುತ್ತಾರೆ. ಮೊದಲು ಆಯಾ ಮಕ್ಕಳ ವಯೋಮಾನಕ್ಕೆ ತಕ್ಕಂತೆ ಪಠ್ಯಪುಸ್ತಕಗಳನ್ನು ರಚಿಸಬೇಕು. ಐದು ವರ್ಷದಿಂದ ಎಂಟು ವರ್ಷದವರು, ಒಂಬತ್ತು ವರ್ಷದಿಂದ ಹನ್ನೆರಡು ವರ್ಷದವರು, ಹನ್ನೆರಡು ವರ್ಷದಿಂದ ಹದಿನಾರು ವರ್ಷದವರೆಂದು ಹೀಗೆ ವಿವಿಧ ಭಾಗಗಳಾಗಿ ವಿಂಗಡಿಸಬೇಕು ಎನ್ನುತ್ತಾರೆ. ೫ ರಿಂದ ೮ ವರ್ಷದೊಳಗಿನ ಮಕ್ಕಳು ಆಗ ತಾನೇ ಓದುವುದನ್ನು ಕಲಿಯಲಾರಂಭಿಸುತ್ತಾರೆ. ಇಂತಹ ಮಕ್ಕಳಿಗೆ ಪೂರ್ಣವಾಗಿ ವರ್ಣಮಾಲೆ ಗೊತ್ತಿರುವುದಿಲ್ಲ. ಮಕ್ಕಳ ಶಬ್ದಸಂಪತ್ತು ಬಹಳ ಮಿತವಾಗಿ ಇರುವುದರಿಂದ ಯಾವುದಾದರೂ ಒಂದು ಚಿಕ್ಕ ಕತೆಯನ್ನು ಹೇಳಿ ಅದರಲ್ಲಿ ಬರುವ ಮಿತವಾದ ಪದಗಳನ್ನು ಅಂದವಾದ ರೀತಿಯಲ್ಲಿ ನಿರೂಪಿಸಬೇಕು. ಬಳಸುವ ಪದಗಳು ಕಠಿಣ ಪದಗಳಿಂದ ಮಕ್ಕಳಿಗೆ ತಮ್ಮ ತಿಳಿವಿಗೆ ತಡೆಯುಂಟಾಗಬಾರದು. ಚಿಕ್ಕ ಚಿಕ್ಕ ವಿಷಯಗಳು, ಕಥೆಗಳು, ಪದ್ಯಗಳನ್ನು ಬಳಸಬಹುದು ಎನ್ನುತ್ತಾರೆ. ಮುಂದಿನ ತರಗತಿಯ ಮಕ್ಕಳಿಗೆ ಸಾಹಿತ್ಯ, ಪ್ರವಾಸ, ಕಲ್ಪನಾ, ಚಿತ್ರಗಳು, ವಿಜ್ಞಾನ, ಇತಿಹಾಸ ಇವೆಲ್ಲದರಿಂದ ವಿಷಯಗಳನ್ನು ತೆಗೆದುಕೊಳ್ಳಬಹುದು. ಮಕ್ಕಳಿಗೆ ಯಾವುದೇ ವಿಷಯವನ್ನು ಪ್ರಸ್ತಾಪಿಸಿದರೂ ಅದರ ನಿರೂಪಣೆಯು ಕೇವಲ ವಸ್ತುಸ್ಥಿತಿಯನ್ನು ಹೇಳದೆ ಮಕ್ಕಳ ಭಾವನೆಯನ್ನು ಮುಟ್ಟಬೇಕು.

ಉಪಾಧ್ಯಾಯರು ಬಳಸುವ ಪ್ರತಿಯೊಂದು ಭಾಷೆಯು ಮಗುವಿನ ಮನಸ್ಸಿನಲ್ಲಿ ಕಣ್ಣಿಗೆ ಕಟ್ಟಿದಂತೆ ಚಿತ್ರವು ಮೂಡುವಂತಿರಬೇಕು ಎಂಬ ಅಭಿಪ್ರಾಯವನ್ನು ಕಾರಂತರು ಅಭಿವ್ಯಕ್ತ ಪಡಿಸುತ್ತಾರೆ. ಮಕ್ಕಳು ತಮ್ಮ ಸುತ್ತಮುತ್ತಲಿನ ವಿಷಯಗಳಲ್ಲಿ ಆಸಕ್ತಿ ತೋರುವಂತೆ ಮಗುವಿನ ಗ್ರಹಣ ಶಕ್ತಿಯನ್ನು ಪ್ರೇರೇಪಿಸುವಂತೆ ತನ್ನ ಆಸಕ್ತಿಗಳನ್ನು ತಾನೇ ರೂಪಿಸಿಕೊಳ್ಳುವಂತೆ ಪಠ್ಯಪುಸ್ತಕಗಳು ಸಹಾಯ ಮಾಡಬೇಕು. ಶಬ್ದಗಳಲ್ಲಿರುವ ವಿಷಯಕ್ಕೆ ಸಂಬಂಧಿಸಿದಂತೆ ಚಿತ್ರಗಳು ರಚನೆಯಾಗಬೇಕು ಎನ್ನುತ್ತಾರೆ.

ಪಾಶ್ಚಾತ್ಯರಲ್ಲಿ ಪ್ರಾಥಮಿಕ ಶಾಲೆಯಲ್ಲಿ ಸಾಮಾನ್ಯವಾಗಿ ೫ರಿಂದ ೬ ವರ್ಷದೊಳಗಿನ ವಯಸ್ಸಿನ ಮಕ್ಕಳ ವಿದ್ಯಾಭ್ಯಾಸವೆಲ್ಲಾ ಅವರ ಪ್ರಾಂತೀಯ ಭಾಷೆಯ ಮೂಲಕವೇ ನಡೆಯುತ್ತದೆ. ವಿವಿಧ ವಿಷಯಗಳಲ್ಲಿ ಅಭಿರುಚಿ, ಬೆಳವಣಿಗೆ, ಮುಂತಾದವು ಇಲ್ಲಿಂದಲೇ ಪ್ರಾರಂಭವಾಗುತ್ತವೆ. ಆದರೆ ನಮ್ಮ ದೇಶದಲ್ಲಿ ವಿವಿಧ ಭಾಷೆಗಳಲ್ಲಿ ಮಕ್ಕಳ ಸುಲವಾಗಿ ಅವರ ಮನೋಧರ್ಮವನ್ನು ತಿಳಿದು ರಚನೆಯಾಗಿರುವ ಪುಸ್ತಕಗಳು ತೀರಾ ಕಡಿಮೆ. ಈ ಪುಸ್ತಕಗಳ ಅಭಾವದಿಂದ ಮಗು ತನ್ನ ಮನಸ್ಸನ್ನು ಬೆಳಿಸಿಕೊಳ್ಳಲಾರದೆ ಹೋದರೆ ಮುಂದೆ ಮಾಡಿದ ಕೆಲಸ ಅಷ್ಟೊಂದು ಪರಿಣಾಮಕಾರಿಯಾಗುವುಲ್ಲ. ಈ ವಿಷಯದಲ್ಲಿ ಸಾಕಷ್ಟು ಪುಸ್ತಕಗಳನ್ನು ಒದಗಿಸದೆ ಹೋದರೆ ಮುಂದೆ ಮಕ್ಕಳು ದೊಡ್ಡವರಾಗಿ ಉಪಯುಕ್ತ ಪ್ರಜೆಗಳಾಗುತ್ತಾರೆಂದು ಭಾವಿಸುವುದಕ್ಕೆ ಎಡೆಯೆಲ್ಲಿ? ಎಂದು ಪ್ರಶ್ನಿಸುತ್ತಾರೆ. ಇಂದಿನ ಅನೇಕ ಮಕ್ಕಳ ಪಠ್ಯಪುಸ್ತಕಗಳಲ್ಲಿರುವ ಪದ್ಯಗಳು 'ಮಾನವೀ ಜನ್ಮ ದೊಡ್ಡದು, ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ' ಎಂಬ ದಾಸರ ಹಾಡನ್ನು ಪುಸ್ತಕದಲ್ಲಿ ಸೇರಿಸಿದ ಮಾತ್ರಕ್ಕೆ ಮಗು ತತ್ವಜ್ಞಾನಿಯಾಗುತ್ತಾನೆ ಎಂಬ ಭ್ರಮೆಯಿಂದ ದೊಡ್ಡ ದೊಡ್ಡ ಅರ್ಥಗಳನ್ನು ಹೊರಡಿಸುವ ಪದಗಳನ್ನು ಪಠ್ಯಪುಸ್ತಕಗಳಲ್ಲಿ ಸೇರಿಸಬಾರದು ಎನ್ನುತ್ತಾರೆ. ಇಂತಹ ಹಾಡುಗಳನ್ನು ಅರ್ಥಮಾಡಿಕೊಳ್ಳುವ ಶಕ್ತಿ ಚಿಕ್ಕಮಕ್ಕಳಿಗೆ ಇರುವುದಿಲ್ಲ. ಜೀವನದ ಅನುಭವಗಳಿಂದ ಇಂತಹ ಪದಗಳನ್ನು ಅರ್ಥಮಾಡಿಕೊಳ್ಳ ಬೇಕಾಗುತ್ತದೆ. ನೀತಿ ಪದ್ಯಗಳನ್ನು ಮಕ್ಕಳ ಪಠ್ಯಪುಸ್ತಕಗಳಲ್ಲಿ ಸೇರಿಸಿರುವುದನ್ನು ಗಮನಿಸಬಹುದು. ನೀತಿಯೆಂಬುದು ನಡವಳಿಕೆಯಿಂದ ಕಲಿಯುವ ಪಾಠವೇ ಹೊರತು ಬೋಧನೆಯಿಂದ ಬರುವುದಿಲ್ಲ. ಕಾರಂತರು ಮತಧರ್ಮಗಳ ವಿಷಯಗಳನ್ನು ಪಠ್ಯಗಳಲ್ಲಿ ಸೇರಿಸಬಾರದು ಎನ್ನುತ್ತಾರೆ. ಶಂಕರಾಚಾರ್ಯರ ಅದ್ವೈತ, ಆತ್ಮ, ಪರಮಾತ್ಮಗಳನ್ನು ಪಠ್ಯಪುಸ್ತಕಗಳಲ್ಲಿ ಹೇಳಿರುವುದನ್ನು ಕಂಡರೆ ಶಿಶು ಮನೋಧರ್ಮವನ್ನೇ ಅರಿಯದವರು ಶಿಕ್ಷಣ ಕೆಲಸಕ್ಕೆ ಹೋಗಬಾರದು ಎಂದು ಎಚ್ಚರಿಕೆಯನ್ನು ಕೊಡುತ್ತಾರೆ.

ಶಿವರಾಮ ಕಾರಂತರು ಮಗುವಿನ ಮನೋಧರ್ಮವನ್ನು ಸೂಕ್ಷ್ಮವಾಗಿ ಅರಿಯಬಲ್ಲವ ರಾಗಿದ್ದರು. ಮಕ್ಕಳು ಹೆಚ್ಚಾಗಿ ಊಹಾ ಪ್ರಪಂಚದಲ್ಲಿ ಆಸಕ್ತಿಯನ್ನು ವಹಿಸಿರುತ್ತಾರೆ. ಅವರು

ವಾಸ್ತವಿಕ ಜಗತ್ತಿಗಿಂತ ತಮ್ಮದೇ ಆದ ಬೇರೆ ಲೋಕದಲ್ಲಿ ಮೈಮರೆಯುತ್ತಾರೆ. ಇದನ್ನು ಕಾರಂತರ ಮಾತುಗಳಲ್ಲಿ ಗಮನಿಸಿದರೆ ಹೆಚ್ಚು ಸ್ಪಷ್ಟವಾಗುತ್ತದೆ.

> ಅದ್ಭುತವನ್ನು ಅವರ ಮನಸ್ಸು ಬಯಸುತ್ತದೆ. ಬೆಟ್ಟದಂತಹ ರಾಕ್ಷಸರು, ಹೆಬ್ಬಟ್ಟಿನ ಗಾತ್ರದ ಮನುಷ್ಯರು ಇಚ್ಛೆಬಂದಂತೆ ಕರೆದೊಯ್ಯಬಲ್ಲ ಚಾಪೆ, ಮುಗಿಲಿನ ಆಚೆಗಿರುವ ಲೋಕ, ಚಿನ್ನದ ಹಣ್ಣು ಕೊಡುವ ಗಿಡ, ತಿಕ್ಕಿದರೆ ದೆವ್ವ ತೋರಿಸುವ ದೀಪ, ಕರೆದರೆ ಬಾಯಿ ತೆರೆಯುವ ಗವಿ ಇಂಥವುಗಳೆಲ್ಲಾ ಅವರ ಊಹಾ ರಾಜ್ಯದ ಬಯಕೆಯ ವಸ್ತುಗಳು.[೧೦]

ಒಂದು ದೃಷ್ಟಿಯಿಂದ ನೋಡಿದರೆ ಇವೆಲ್ಲಾ ಅವಾಸ್ತವಗಳು. ಆದರೂ ಮಕ್ಕಳು ಇಂತಹ ಕಥೆಗಳಲ್ಲಿ ತುಂಬಾ ಆಸಕ್ತಿಯನ್ನು ವಹಿಸಿರುತ್ತಾರೆ. ಕಥೆಗಳನ್ನು ಕೇಳುವಾಗಲೆಲ್ಲಾ ಮಗುವಿನ ಮನಸ್ಸು ಕಥಾನಾಯಕನೊಡನೆಯೋ, ಕಥೆಯಲ್ಲಿ ಬರುವ ಸುಖದುಃಖಗಳಿಗೂ ನೋವಿಗೆ ಗುರಿಯಾದವರೊಡನೆ ಬೆರೆಯುತ್ತದೆ. ಕಥೆಗಳಲ್ಲಿ ಬರುವ ಅದ್ಭುತವನ್ನು ಕಂಡು ವಿಸ್ಮಯಗೊಳ್ಳುತ್ತದೆ. ಆದ್ದರಿಂದ ಮಗುವಿಗೆ ಈ ರೀತಿಯ ಪಠ್ಯಪುಸ್ತಕಗಳನ್ನು ರಚಿಸಬೇಕು, ನಂತರ ಜ್ಞಾನಕ್ಕೆ ಸಂಬಂಧಿಸಿದಂತೆ ತಿಳಿವನ್ನು ಹೇಳಿಕೊಡಬೇಕು.

ಮಕ್ಕಳಿಗೆ ಪ್ರಿಯವಾಗಿ ಕಾಣಿಸುವ ಪಶು ಪ್ರಾಣಿಗಳನ್ನು ತೋರಿಸಬೇಕು. ಅವರಿಗೆ ಪ್ರಾಣಿಗಳನ್ನು ನೋಡುವ ಪರಿಶೀಲಿಸುವ ಕುತೂಹಲವಿರುತ್ತದೆ. ಈ ಪ್ರಾಣಿ ಜೀವನಕ್ಕೆ ಸಂಬಂಧಿಸಿ ದಂತೆ ನೂರಾರು ವಾಸ್ತವಿಕ ವಿಚಾರಗಳನ್ನು ಕಥೆಯಷ್ಟೆ ಸುಂದರವಾಗಿ ಹೇಳಿ ಮಕ್ಕಳ ಮನಸ್ಸನ್ನು ಸೆಳೆಯಬಹುದೆಂದು ಕಾರಂತರು ತಮ್ಮ ಹಲವಾರು ಪ್ರಯೋಗಗಳ ಮೂಲಕ ತೋರಿಸುತ್ತಾರೆ. ಪಠ್ಯವಸ್ತು, ಬರವಣಿಗೆ, ವಿಷಯ ಭೋದನೆಯನ್ನು ಸರಿಯಾಗಿ ಮಾಡಬೇಕು ಮತ್ತು ಸುಂದರವಾದ ಚಿತ್ರಗಳಿಂದ ಮಕ್ಕಳ ಮನಸ್ಸನ್ನು ಸೆಳೆಯಬೇಕಾದುದ್ದು ಶಿಕ್ಷಣದ ಗುರಿ. ಇಂತಹ ಪಠ್ಯಪುಸ್ತಗಳ ಹೊರತಾಗಿಯೂ ಮಕ್ಕಳ ಜ್ಞಾನವನ್ನು ಹೆಚ್ಚಿಸಲು ವಿವಿಧ ವಿಷಯಗಳನ್ನು ಕುರಿತ ಪುಸ್ತಕಗಳು ಹಲವಾರು ರಚನೆಯಾಗಬೇಕಿವೆ.

### ಶಿವರಾಮ ಕಾರಂತರ ಶೈಕ್ಷಣಿಕ ಚಿಂತನೆಗಳಿಗೆ ಸಾಮಾಜಿಕ ಪ್ರತಿಕ್ರಿಯೆ

ಕಾರಂತರ ಶೈಕ್ಷಣಿಕ ಚಿಂತನೆಗಳಿಗೆ ನಾಡಿನಾದ್ಯಂತ ಹಲವಾರು ಸಾಹಿತಿಗಳು ಹಾಗೂ ಶಿಕ್ಷಣ ತಜ್ಞರು ತಮ್ಮದೇ ಆದ ರೀತಿಯಲ್ಲಿ ಪ್ರತಿಕ್ರಿಯೆಯನ್ನು ನೀಡಿದ್ದಾರೆ. ಅವರಲ್ಲಿ ಹಾ.ಮಾ. ನಾಯಕರು, ಜೆ.ರಾಜಶೇಖರ್. ಶಂ.ಬಾ.ಜೋಷಿ, ಹ.ಪಿ.ಜೋಷಿ, ಮಹಾಬಲೇಶ್ವರ ರಾವ್ ಬಿ.ಎ. ವಿವೇಕ ರೈ, ಎ.ಆರ್. ಕೃಷ್ಣಶಾಸ್ತ್ರಿ ಮುಂತಾದವರು.

ಶಿಕ್ಷಣ ಎನ್ನುವುದು ಮಕ್ಕಳ ಜ್ಞಾನವನ್ನು ಅರಳಿಸುವ ಪ್ರತಿಭೆಯಂತಿರಬೇಕು. ಅದು ಪಠ್ಯಪುಸ್ತಕಗಳಲ್ಲಿರುವ ವಿಷಯವನ್ನು ಯಥಾವತ್ತಾಗಿ ಮಕ್ಕಳಿಗೆ ಹೇಳಿಕೊಡುವುದರಿಂದ ಮಕ್ಕಳಲ್ಲಿರುವ ಸೃಜನಶೀಲ ಶಕ್ತಿಯು ಬೆಳವಣಿಗೆಯಾಗುವುದಿಲ್ಲ ಎಂಬುದನ್ನು ಮನಗಂಡ ಕಾರಂತರು ಹಲವಾರು ಶೈಕ್ಷಣಿಕ ಪ್ರಯೋಗಗಳನ್ನು ಮಾಡಿದರು. ಬಾಲವನವನ್ನು ಸ್ಥಾಪನೆ ಮಾಡಿದರು. ಬಾಲವನದಲ್ಲಿ ಕಲಿಸುವ ಶಿಕ್ಷಣ ಕ್ರಮವನ್ನು ಕುರಿತು ಹಾ.ಮಾ. ನಾಯಕರು ಹೇಳುವಂತೆ

> ಶಿಕ್ಷಣವನ್ನು ಹೊರಗಿನಿಂದ ಹೇರದೆ ಒಳಗಿನಿಂದ ಅರಳುವಂತೆ ಮಾಡುವ ಹಲವಾರು ಕಾರ್ಯಕ್ರಮಗಳನ್ನು ಇಲ್ಲಿ ನಡೆಸಿದ್ದರು. ಸುತ್ತಲಿನ ಪ್ರಕೃತಿಯನ್ನು ನೋಡುವ ಅರ್ಥ ಮಾಡಿಕೊಳ್ಳುವ ಅದರ ಮೂಲಕವಾಗಿಯೇ ಕಲಿಯುವ ಅವಕಾಶಗಳನ್ನು ಕಾರಂತರು ಕಲ್ಪಿಸಿದ್ದರು[೧೧] ಎನ್ನುತ್ತಾರೆ.

ಶಿಕ್ಷಣವು ಮಕ್ಕಳಿಗೆ ಸಮಾಜವನ್ನು ಅರ್ಥಮಾಡಿಕೊಳ್ಳುವಂತೆ ಕಲಿಸುವ ಮಾಧ್ಯಮ. ಹಾಗಾಗಿ ಕಾರಂತರು ಮಕ್ಕಳಿಗೆ ಶಿಕ್ಷಣವನ್ನು ನಮ್ಮ ಸುತ್ತಮುತ್ತಲಿನ ನಿಸರ್ಗದತ್ತ ವಿಚಾರಗಳನ್ನು ಅರ್ಥ ಮಾಡಿಕೊಂಡು ಆ ಮೂಲಕ ಕಲಿಕೆಗೆ ಅವಕಾಶ ಮಾಡಿಕೊಡಬೇಕೆಂಬುದು ಕಾರಂತರ ಆಶಯವಾಗಿತ್ತು. ಪ್ರಸ್ತುತ ಶಿಕ್ಷಣ ಕ್ರಮವು ಇದಕ್ಕೆ ತದ್ವಿರುದ್ಧವಾಗಿದೆ. ಮಕ್ಕಳಿಗೆ ಕಲಿಸುವಂತಹ ಪಠ್ಯಕ್ರಮ ಏರಿಕೆಯಿಂದ ಕೂಡಿದೆ. ಅದು ಯಾವುದೋ ಮೇಲ್ಪದರದ ವಿಚಾರಗಳನ್ನಿಟ್ಟುಕೊಂಡು ಸಮಗ್ರವಾಗಿ ನೋಡದೆ ಏಕಮುಖವಾದ ಗ್ರಹಿಕೆಯನ್ನು ಕಾಣಬಹುದು. ಇದರಿಂದ ಮಕ್ಕಳಲ್ಲಿ ಸಮಾಜವನ್ನು ಕಾಣುವ ಮುಖಗಳು ಅಸ್ಪಷ್ಟತೆಯಿಂದ ಕೂಡಿವೆ. ಹೀಗಾಗಿ ಮಕ್ಕಳಲ್ಲಿ ಶಿಕ್ಷಣ ಎನ್ನುವುದು ಪಾಶ್ಚಾತ್ಯರ ಪ್ರಭಾವದಿಂದ ಮೂಲಶಿಕ್ಷಣ ಕ್ರಮವು ಮಾಯಾವಾಗಿ ಯಾಂತ್ರಿಕವಾದ ಭಾಷೆಯಲ್ಲಿ ಮಕ್ಕಳಿಗೆ ಕಲಿಯುವಂತೆ ಉತ್ತೇಜಿಸಿ ಸಮಾಜಮುಖಿ ಶಿಕ್ಷಣಕ್ರಮವು ಮಾಯಾವಾಗಿ ವ್ಯವಹಾರಿಕ ಮಾಧ್ಯಮವಾಗಿ ಮಾರ್ಪಟ್ಟಿದೆ.

ಶಿಕ್ಷಣವು ಜನಸಾಮಾನ್ಯರಿಗೆ ಮುಕ್ತವಾಗಿ ಸಿಗಬೇಕು ಎಂಬುದು ಕಾರಂತರ ನಿಲುವು. ಈ ಧೋರಣೆಯು ಅವರ ಶೈಕ್ಷಣಿಕ ಪ್ರಯೋಗದಲ್ಲಿ ದಟ್ಟವಾಗಿ ಕಂಡುಬರುತ್ತದೆ. ಶಿಕ್ಷಣ ಕ್ರಮದಲ್ಲಿ ಖಾಸಗಿ ಶಿಕ್ಷಣ ಕ್ರಮವು ಜನರಲ್ಲಿ ಪಕ್ಷಪಾತ ಉಂಟುಮಾಡುತ್ತದೆ. ಪ್ರಾಥಮಿಕ ಶಿಕ್ಷಣ ಮಾಧ್ಯಮದಲ್ಲಿ ಮಾತೃಭಾಷೆ ಕಡ್ಡಾಯವಾಗಿರಬೇಕು. ಅನ್ಯಭಾಷೆಯ ಪ್ರವೇಶ ಪ್ರಾಥಮಿಕ ಶಿಕ್ಷಣದಲ್ಲಿ ಇರಬಾರದು ಎಂದು ಕಾರಂತರು ಹೇಳುತ್ತಾರೆ.

ವಯಸ್ಕರ ಶಿಕ್ಷಣದ ಬಗ್ಗೆ ತೋರಿಸುತ್ತಿರುವ ನಿರ್ಲಕ್ಷ್ಯೆಯನ್ನು ಪ್ರಶ್ನಿಸಿ ಅವರಿಗೂ ಕೂಡ ಶಿಕ್ಷಣವನ್ನು ಕಲಿಸುವ ಮನಸ್ಸು ಕಾರಂತರಲ್ಲಿ ಜಾಗೃತವಾಗಿತ್ತು. ಹಾಗಾಗಿ ಬಾಲಪ್ರಪಂಚದ ಜೊತೆಗೆ ವಿಜ್ಞಾನ ಪ್ರಪಂಚದಲ್ಲಿ ಜನಸಾಮಾನ್ಯರಿಗೆ ಆಧುನಿಕ ವಿಶ್ವದ ಎಲ್ಲಾ ವಿಚಾರಗಳನ್ನು

ತೆರೆದ ಮನಸ್ಸಿನಿಂದ ಯುವಕರು ಸ್ವೀಕರಿಸಬೇಕೆಂಬ ಸಾಮಾಜಿಕ ಕಳಕಳಿ ಅವರ ಚಿಂತನೆಯಲ್ಲಿ ಒಡಮೂಡಿದೆ.

> ಯಾವ ಜನಾಂಗವು ಮುಂದುವರಿಯಬೇಕಾಗಿದ್ದರೂ ಆಯಾ ಜನಾಂಗದ ಮಕ್ಕಳ ಮನಸ್ಸಿನಲ್ಲಿ ಜ್ಞಾನ ತೃಷೆಯು ಉಂಟಾಗಬೇಕು. ಅವರಿಗೆ ನಾನು ವಿಜ್ಞಾನಿಯಾಗಬೇಕು. ಸಾಹಿತಿಯಾಗಬೇಕು ಎಂಬ ಆಶೋತ್ತರವೂ,ಅಭಿಮಾನವೂ ಉಂಟಾಗಬೇಕು. ಅವರು ಬರೀ ಗಣಿತ ಓದು ಬರಹಗಳನ್ನು ಕಲಿತುದರಿಂದ ಮಾತ್ರ ಯಾವ ಪುರುಷಾರ್ಥವೂ ಸಾಧನೆಯಾಗಲಾರದು" (ಸುಭೋಧ ವಿಮರ್ಶೆ).

ಎಂದು ಹೇಳಿರುವ ಮಾತುಗಳು ವಿದ್ಯಾಭ್ಯಾಸವು ನಿಷ್ಕ್ರಿಯೆ, ನಿಸ್ತೇಜಕ, ನೀರಸವಾಗಿರಬಾರದು. ಕಲಿಕೆಗಾಗಿ ಕಲಿಕೆಯಲ್ಲ; ಕಲಿಕೆ ಮನುಷ್ಯ ಮನುಷ್ಯರಲ್ಲಿ ಸಾಮಾಜಿಕ ಸಮಾನತೆ ತಿಳುವಳಿಕೆ ಹುಟ್ಟಿಸುವಂತಿರಬೇಕು. ಪ್ರತಿಯೊಬ್ಬರಿಗೂ ಯಾವ ಕ್ಷೇತ್ರದಲ್ಲಿ ಆಸಕ್ತಿಯಿದೆಯೋ ಅದನ್ನು ಪ್ರಾಥಮಿಕ ಶಿಕ್ಷಣದಲ್ಲೇ ಗುರುತಿಸಿ ಆಯಾ ಕ್ಷೇತ್ರದಲ್ಲಿ ಮುಂದುವರಿಯುವಂತೆ ಸಹಕಾರಿ ಯಾಗುವಂತಿರಬೇಕು. ಪ್ರಸ್ತುತ ಶಿಕ್ಷಣ ಕ್ರಮವು ಇದಕ್ಕೆ ವಿರುದ್ಧ ಮುಖಚಲನೆಯಲ್ಲಿ ಚಲಿಸುತ್ತದೆ. ಆದರೆ ಕಾರಂತರ ಶೈಕ್ಷಣಿಕ ಚಿಂತನೆಗಳು ಆಧುನಿಕ ಸಮಾಜದಲ್ಲಿ ಮಕ್ಕಳಿಗೆ ಶಿಕ್ಷಣ ಕೊಡುವ ಕ್ರಮದಲ್ಲಿ ತಪ್ಪಾಗಿದೆ. ಬರೀ ವಿಜ್ಞಾನ, ತಂತ್ರಜ್ಞಾನ, ಕಂಪ್ಯೂಟರ್ ಮುಂತಾದುವುಗಳ ಮೂಲಕ ಕಲಿಕೆ ಕಾಲ್ಪನಿಕ ಸಮಾಜವನ್ನು ಕಲ್ಪಿಸುತ್ತದೆ. ಆದರೆ ಮಕ್ಕಳಿಗೆ ಪ್ರಕೃತಿ ಸಹಜವಾದ ವಿಷಯಗಳನ್ನು ಕಲಿಸುವುದು ಇಂದು ಅಪರೂಪವಾಗಿದೆ.

ಕಾರಂತರ ವಿಶ್ವಕೋಶಗಳನ್ನು ಕುರಿತು ಮಹಾಬಲೇಶ್ವರ ರಾವ್ ಅವರು ಹೇಳುವಂತೆ ಯೋಗ್ಯ ವಿಷಯ ನಿರೂಪಣೆ, ಆಕರ್ಷಕವಾದ ವರ್ಣಮಯ ಛಾಯಾಚಿತ್ರಗಳು ಮತ್ತು ಅಷ್ಟೇ ಆಕರ್ಷಕವಾದ ರೇಖಾಚಿತ್ರಗಳಿಂದ ಕೂಡಿದ 'ನ್ಯಾಷನಲ್ ಜಿಯೋಗ್ರಾಫಿಕ್' ಮತ್ತು ಲೈಫ್ ಪತ್ರಿಕೆಯವರ ವಿಶ್ವಕೋಶಗಳ ಎದುರು ಕಾರಂತರ ವಿಶ್ವಕೋಶಗಳು ಸಪ್ಪೆ ಎನಿಸುತ್ತವೆ". ಎನ್ನುತ್ತಾರೆ. ಪಾಶ್ಚಾತ್ಯ ದೇಶದಲ್ಲಿರುವ ವಿಶ್ವಕೋಶಕಾರರಿಗೆ ಇಲ್ಲದ ಹಲವಾರು ಮಿತಿಗಳು ಕಾರಂತರಿಗಿದ್ದವು. ಮುದ್ರಣ ತಂತ್ರಜ್ಞಾನ, ಓದುವ ವರ್ಗ, ಸರಕಾರದ ನಿರಾಸಕ್ತಿ ಇವೆಲ್ಲವೂ ವಿಶ್ವಕೋಶ ರಚನೆ ಮತ್ತು ಮುದ್ರಣದ ಮೇಲೆ ವ್ಯಾಪಕವಾದ ಪರಿಣಾಮವನ್ನು ಬೀರುತ್ತಿದ್ದವು. ಕಾರಂತರ ಮುಖ್ಯ ಉದ್ದೇಶ ಆಧುನಿಕ ವಿಜ್ಞಾನವನ್ನು ಕುರಿತು ಅಭಿರುಚಿ ಹುಟ್ಟಿಸುವುದಾಗಿತ್ತು. ವಿಜ್ಞಾನವೆಂಬುದು ದಿನದಿನವೂ ಅಭಿವೃದ್ಧಿ ಹೊಂದುತ್ತಿರುವ ಹೊಸ ಹೊಸ ಅನ್ವೇಷಣೆಗಳಿಂದ ಮತ್ತು ಹಲವಾರು ವಿಚಾರಗಳನ್ನು ಪ್ರತಿ ಐದು ವರ್ಷಗಳಿಗೊಮ್ಮೆ ತಿದ್ದಿ ಪ್ರಕಟಿಸಬೇಕಾಗುತ್ತದೆ. ಅದರೆ ಹಾಗೆ ಮಾಡಿದರೆ ಕೊಂಡು ಕೊಳ್ಳುವವರೇ ಸಿಗಲಾರರು ಎಂಬುದು ಕಾರಂತರಿಗೆ ಅನುಭವದಿಂದ ತಿಳಿದಿತ್ತು.

> ಡಿ.ಎಸ್. ನಾಗಭೂಷಣ ಅವರು ಕಾರಂತರ ವಿಜ್ಞಾನದ ಬರವಣಿಗೆಯ ನಿರೂಪಣಾ ಶೈಲಿಯ ಕುರಿತು ಶೈಲಿಯ ವಿಷಯಕ್ಕೆ ಬಂದರೆ ವಿಜ್ಞಾನವನ್ನು ಕನ್ನಡ ಭಾಷೆಯಲ್ಲಿ ಅರಳಿಸುವುದಕ್ಕೆ ಬೇಕಾದ ನಿರೂಪಣಾ ಸಾಮರ್ಥ್ಯವನ್ನು ನಮ್ಮ ಪಠ್ಯಪುಸ್ತಕಗಳಲ್ಲಿ ಕಾಣಲಾರೆವು. ಆದರೆ ಇದು ಭಾಷೆಯ ತಪ್ಪೆಂದು ಯಾರು ಅಪಾದಿಸಲಾಗದ ರೀತಿಯಲ್ಲಿ ಶಿವರಾಮ ಕಾರಂತರು ತಮ್ಮ ವಿಜ್ಞಾನ ಪ್ರಪಂಚದಲ್ಲಿನ ಬರವಣಿಗೆಯಲ್ಲಿ ತೋರಿಸಿದ್ದಾರೆ[೧೩] ಎನ್ನುತ್ತಾರೆ.

ಕಾರಂತರಿಗೆ ತಮ್ಮ ಬರವಣಿಗೆಯಲ್ಲಿರುವ ಸಾಮರ್ಥ್ಯವನ್ನು ಕುರಿತು ತಿಳಿದುಕೊಳ್ಳಬೇಕಾದರೆ ಅವರ ವಿಜ್ಞಾನ ಬರವಣಿಗೆ ನಿರೂಪಣೆಯನ್ನು ನೋಡಿದರೆ ತಿಳಿಯುತ್ತದೆ. ಅದ್ಭುತ ಪರಮಾಣು ಹಾಗೂ ಸಾಪೇಕ್ಷ ಸಿದ್ಧಾಂತ ಎಂಬಂತಹ ಕಠಿಣ ವಿಷಯಗಳನ್ನು ಸರಳವಾದ ಭಾಷೆಯಲ್ಲಿ ರಚಿಸಿದ್ದಾರೆ. ಪ್ರಾಥಮಿಕ ಮಕ್ಕಳಿಗೂ ಸುಲಭವಾಗಿ ಗ್ರಹಿಸುವಂತೆ ಶಬ್ದಗಳಲ್ಲಿ ರಚಿಸಿದ್ದಾರೆ.

ಬೆಟಗೇರಿ ಕೃಷ್ಣಶರ್ಮಾ ಅವರು ಕಾರಂತರ ಶಿಶುಗೀತೆಗಳನ್ನು ಕುರಿತು ತಮ್ಮ ಅಭಿಪ್ರಾಯ ವನ್ನು ವ್ಯಕ್ತಪಡಿಸುತ್ತಾರೆ. ಢಂ ಢಂ ಡೋಲು, ಮಾವಿನ ಮುದ್ದಣ್ಣ, ತಮ್ಮನಿಲ್ಲದ ಅಣ್ಣ, ರಂಗನೂ ಮಂಗನೂ, ಹುಣ್ಣಿಮೆಯ ಹಪ್ಪಳ, ಕುಂಟನ ಮದುವೆ, ನಂಗೊತ್ತುಂಟು ತಿನ್ನದ ದೇವರು, ಆಡುಗಳೆರಡು ಮೊದಲಾದ ಕವಿತೆಗಳು ಎಳಸಾದ ಅರ್ಥ ಭಾವಗಳಿಂದ ಕೂಡಿದುದ ರಿಂದ ಮಕ್ಕಳು ಇವುಗಳನ್ನು ಹೆಚ್ಚು ಪ್ರೀತಿಯಿಂದ ಓದಬಹುದು. ಎಂದು ಹೇಳುತ್ತಾರೆ. ಕಾರಂತರು ಮಕ್ಕಳ ಮನಸ್ಸನ್ನು ತಿಳಿದಿದ್ದರಿಂದ ಅವರಿಗೆ ಅರ್ಥವಾಗುವ ಭಾಷೆಯಲ್ಲಿ ಪದ್ಯಗಳನ್ನು ರಚಿಸಿದರೆ ಹೆಚ್ಚು ಪ್ರಯೋಜನವಾಗುತ್ತದೆ ಎಂಬುದು ಅವರ ನಿಲುವಾಗಿತ್ತು.

> ಅವರ ಜ್ಞಾನ ಕೇವಲ ಪುಸ್ತಕದ ಬದನೆಕಾಯಿಯಲ್ಲ; ಬರಿಯ ಪರಾನುಕರಣೆಯಲ್ಲ; ಅವರಿವರ ಎಂಜಲಲ್ಲ; ಸ್ವತಂತ್ರ ವಿಚಾರದ ಶಕ್ತಿ, ಆಲೋಚನಾ ಸಾಮರ್ಥ್ಯ ಮತ್ತು ಸ್ವಯಂ ವೀಕ್ಷಣೆಯಿಂದ ಲಭ್ಯವಾದದದ್ದು ತಮ್ಮ ಕಣ್ಣೆದುರಿನ ಪ್ರತಿಯೊಂದು ವಸ್ತುವನ್ನು ಆಮೂಲಾಗ್ರವಾಗಿ ವಿಚಿಕಿತ್ಸಕ ದೃಷ್ಟಿಯಿಂದ ವಿಶ್ಲೇಷಣಾ ಮನೋಭಾವದಿಂದ ನೋಡುತ್ತಾರೆ. ನೋಡಿದುದನ್ನೆಲ್ಲಾ ಸ್ಪಷ್ಟವಾಗಿ ಗ್ರಹಿಸುತ್ತಾರೆ. ಸಪ್ತಸಾಗರಗಳೂ ಅವರ ಜ್ಞಾನ ತೃಷೆಯನ್ನು ಅಡಗಿಸಲಾರವು; ಪ್ರಲಯ ಮೇಘವೂ ಅವರ ಕುತೂಹಲಾಸಕ್ತಿಗಳನ್ನು ನಂದಿಸಲಾರದು; ಚತುರ್ದಶ ಭುವನಗಳೇ ಅವರ ಸಾಹಸಕ್ಕೆ ಮೇರೆ, ಅವರು ನಿಂತಡೆ ನಿಲ್ಲರು, ಕುಳಿತೆಡೆ ಕೂಡರು. ಒಂದು ರೀತಿಯಲ್ಲಿ ಅವರು ನಿರಂತರ ಯಾತ್ರಿಗಳು, ಸಾಹಸೋನ್ಮುಖ ಪರಿವ್ರಾಜಕರು.[೧೪]

ಈ ಮೇಲಿನ ಮಾತು ದೇ.ಜ.ಗೌ ಅವರದ್ದು, ಇಲ್ಲಿ ಶಿಕ್ಷಣವೆನ್ನುವುದು ಕೇವಲ ಪಠ್ಯ ಪುಸ್ತಕದಿಂದ ಕಲಿಯುವ ಜ್ಞಾನವಲ್ಲ. ಅದು ವ್ಯಕ್ತಿಯು ಸ್ವತಂತ್ರವಾಗಿ ತನ್ನ ಸುತ್ತಮುತ್ತಲಿನ

ವಾತಾವರಣದಿಂದ ನೋಡಿ ಕಲಿಯಲು ಪ್ರೇರೇಪಿಸುವ, ಇಲ್ಲವೇ ಅನುಭವದ ಮೂಲಕ ಕಲಿಯುವ ವಾತಾವರಣವನ್ನು ನಿರ್ಮಿಸಬೇಕು. ಹಾಗೆಯೇ ಆಡುವ ಮಾತಿಗೆ ಗ್ರಾಂಥಿಕ ಸ್ಥಾನವನ್ನು ಕೊಡಬೇಕು ಜನತೆಯಿಂದ ರೂಪಿತವಾದ ಭಾಷೆಯನ್ನು ಶಿಕ್ಷಣದಲ್ಲಿ ಅಳವಡಿಸಬೇಕು. ಜ್ಞಾನವನ್ನು ಸ್ವತಂತ್ರವಾಗಿ ಮುಕ್ತತೆಯಿಂದ ಆಲೋಚಿಸುವಂತಾಗಬೇಕು. ಕಾರಂತರ ದೃಷ್ಟಿಯಲ್ಲಿ ಶಿಕ್ಷಣವೆನ್ನುವುದು ಜೀವನ ನಿರ್ವಹಣೆಗೆ ಬೇಕಾದಂತಹ ಜ್ಞಾನವನ್ನು ಮಕ್ಕಳಿಗೆ ಕೊಡಬೇಕೆಂಬುದಾಗಿತ್ತು.

ಒಟ್ಟಿನಲ್ಲಿ ಸ್ವಾತಂತ್ರ್ಯೋತ್ತರ ಶಿಕ್ಷಣ ಕ್ರಮವನ್ನು ಕಾರಂತರು ಖಂಡಿಸುತ್ತಲೇ ಬರುವುದನ್ನು ಶೈಕ್ಷಣಿಕ ಲೇಖನಗಳಲ್ಲಿ ಗಮನಿಸಬಹುದು. ಮಕ್ಕಳ ಇಂದ್ರಿಯಗಳನ್ನು ಬೆಳೆಸುವ, ಪೋಷಿಸುವ ಆ ಇಂದ್ರಿಯಗಳ ಮೂಲಕ ಜಗತ್ತನ್ನು ಅರಿಯುವ ಶಿಕ್ಷಣವು ದೊರೆಯುತ್ತಿಲ್ಲ ಇಂದಿನ ಶಿಕ್ಷಣ ಕ್ರಮದಲ್ಲಿ ಮಗುವಿನ ಸ್ವಂತ ಮನಸ್ಸನ್ನು ಅರಳಲು ಬೇಕಾದ ಆವರಣ ಸಾಧನಗಳನ್ನು ಶಿಕ್ಷಣ ಕ್ರಮದಿಂದ ದೂರಮಾಡಲಾಗಿದೆ. ಮಗುವಿನ ಮನಸ್ಸು, ವಯೋಮಾನ ನೋಡಿಕೊಂಡು ಆಸಕ್ತಿಯನ್ನು ಕೆರಳಿಸಿ ಎಂಬುದು ಕಾರಂತರ ತತ್ವವಾಗಿದೆ. ಈ ಮಾತು ಪ್ರಸ್ತುತ ಶಿಕ್ಷಣ ನೀತಿಗೂ ಅನ್ವಯಿಸುತ್ತದೆ. ಕನ್ನಡ ಸಾಹಿತ್ಯದಲ್ಲಿ ಯಾವುದೇ ಲೇಖಕರು ಮಕ್ಕಳ ಶಿಕ್ಷಣವನ್ನು ಕುರಿತು ಇಷ್ಟೊಂದು ಆಳವಾಗಿ ತಿಳಿದಿರುವವರು ತೀರ ಅಪರೂಪ. ೨೦ನೇ ಶತಮಾನದಲ್ಲಿ ಜೀವಿಸಿದ ಕಾರಂತರು ವಸಹಾತುಕಾಲದ ಶಿಕ್ಷಣವನ್ನು ಮತ್ತು ಸ್ವಾತಂತ್ರ್ಯನಂತರದ ಶಿಕ್ಷಣ ವ್ಯವಸ್ಥೆಯನ್ನು ಕಂಡವರು. ಆ ಶಿಕ್ಷಣವನ್ನು ಕುರಿತು ಆಳವಾಗಿ ಚಿಂತನೆಯನ್ನು ಮಾಡಿದರು. ಹಲವಾರು ಪ್ರಯೋಗಗಳನ್ನು ಮಾಡಿದರು. ಪಠ್ಯಪುಸ್ತಕಗಳನ್ನು ರಚಿಸಿದರು. ಪ್ರಾಥಮಿಕ ಮಕ್ಕಳ ಶಿಕ್ಷಣವನ್ನು ಹಲವಾರು ಸೂಕ್ತ ಸಲಹೆಗಳನ್ನು ಸೂಚಿಸಿದ್ದಾರೆ. ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಣದ ಪಠ್ಯವಸ್ತು ಭೋದನಾ ವಿಧಾನಗಳು ಹಾಗೂ ಮಕ್ಕಳ ಮನೋವಿಜ್ಞಾನವನ್ನು ಕುರಿತು ಕಾರಂತರು ಆಳವಾಗಿ ಚಿಂತಿಸಿದ್ದಾರೆ. ಪಠ್ಯ ವಿಷಯಗಳು, ಬೋಧನಾಕ್ರಮ ಶಿಕ್ಷಕರು ಹಾಗೂ ಶಾಲೆಗಳ ಬಗೆಗೆ ಕಾರಂತರು ಬರೆದಿರುವ ಬರಹಗಳು ಒಬ್ಬ ಶಿಕ್ಷಣತಜ್ಞನಷ್ಟೆ ಆಳವಾಗಿ ಅಧ್ಯಯನ ಮಾಡಿ ಬರೆದ ಬರಹಗಳಾಗಿವೆ.

**ಶಿಕ್ಷಣದ ಮಹತ್ವ**

ಜೀವನವು ಅಶಾಂತಿ, ಅತೃಪ್ತಿ, ಅಸೂಯೆಗಳ ಮಡುವಾಗದೇ ನ್ಯಾಯ, ನೀತಿ, ಪ್ರೀತಿಯ ಆಗರವಗಬೇಕೆಂಬುದು ಎಲ್ಲರ ಆಶಯವಾಗಿದೆ. ಪ್ರಾಚೀನ ಕಾಲದಲ್ಲಿ ಸಹ ವಿದ್ಯೆಯ ಭೋದನೆಯಲ್ಲಿ ಚಾರಿತ್ರ್ಯ ನಿರ್ಮಾಣಕ್ಕೆ ಎಲ್ಲಕ್ಕಿಂತಲೂ ಹೆಚ್ಚಿನ ಮಹತ್ವವನ್ನು ಕೊಡುತ್ತಿದ್ದರು. ಆಗಿನ ಶಿಕ್ಷಣಪದ್ಧತಿಯಲ್ಲಿ ವಿದ್ಯಾರ್ಥಿಗಳು ಧಾರ್ಮಿಕ ಗ್ರಂಥಗಳ ಪಠಣ, ವಿಮರ್ಶೆ, ಗುರುಗಳ ಸೇವೆ, ಧಾರ್ಮಿಕ ಹಬ್ಬಗಳ ಆಚರಣೆ, ಗುರುಕುಲದ ನಿಯಮಗಳ ಪರಿಪಾಲನೆ ಇವುಗಳ

ಮೂಲಕ ನೀತಿಯ ನಡೆ ನುಡಿಗಳನ್ನು ತಮ್ಮ ಅರಿವಿಲ್ಲದಂತೆಯೇ ಅಳವಡಿಸಿಕೊಂಡು ಬಿಡುತ್ತಿದ್ದರು. ಇಂತಹ ವ್ಯಕ್ತಿತ್ವ ಅವನ ಬದುಕಿಗೆ ಬುನಾದಿಯಾಗುತ್ತದೆ. ನಿಜವಾದ ನೀತಿಯುತ ಮನುಷ್ಯ ತನ್ನ ಕರ್ತವ್ಯಗಳನ್ನು ನಿಷ್ಠೆಯಿಂದ ಮಾಡುವ ಸ್ವಭಾವದವನಾಗಿರುತ್ತಾನೆ. ಸಮಾಜಕ್ಕೆ, ರಾಷ್ಟ್ರಕ್ಕೆ, ವಿಶ್ವಕ್ಕೆ ತನ್ನ ಕೈಲಾದ ಸೇವೆಯನ್ನು ಸಲ್ಲಿಸುತ್ತಾನೆ. ನುಡಿದಂತೆ ನಡೆಯಲು ಪ್ರಯತ್ನಿಸುತ್ತಾನೆ. ಬೇರೆಯವರ ಅಭಿವೃದ್ಧಿ ಕಂಡು ಕರುಬದೇ ಸಂತೋಷಪಡುತ್ತಾನೆ. ಮತ್ತು ನೈಜ ಮಾರ್ಗಗಳಿಂದ ಅಭಿವೃದ್ಧಿ ಹೊಂದಲು ಪ್ರಯತ್ನಿಸುತ್ತಾನೆ. ಬೇರೆಯವರಿಗೆ ಅನ್ಯಾಯ ಮಾಡದೆ ಜೀವಿಸಲು ಪ್ರಯತ್ನಿಸುತ್ತಾನೆ. ಇಂತಹ ವ್ಯಕ್ತಿಗಳು ಸಮಾಜದಲ್ಲೆಲ್ಲಾ ಇದ್ದರೆ ಸುಖ, ಸಂತೋಷ, ತೃಪ್ತಿ, ನೆಮ್ಮದಿಯನ್ನು ಕಾಣಬಹುದು. ಇಂತಹ ಸಚ್ಚಾರಿತ್ರ್ಯವುಳ್ಳ ಪೀಳಿಗೆ ನಿರ್ಮಾಣವಾಗಬೇಕಾದರೆ ಮನೆ, ಸಮಾಜ, ಶಿಕ್ಷಣ ಸಂಸ್ಥೆಗಳು ಈ ದಿಶೆಯಲ್ಲಿ ಸತತ ಪ್ರಯತ್ನವನ್ನು ಮಾಡಬೇಕಾಗುತ್ತದೆ. ಅದರಲ್ಲೂ ಮುಖ್ಯವಾಗಿ ಪ್ರಾಥಮಿಕ ಶಾಲೆಯಲ್ಲಿ ಮಗುವಿಗೆ ಬಾಲ್ಯದಿಂದಲೂ ಆಯಾ ವಯಸ್ಸಿಗೆ ತಕ್ಕಂತಹ ನೈತಿಕಶಿಕ್ಷಣ ದೊರೆಯುವಂತಾಗಬೇಕು. ಆ ಮೂಲಕ ಮಕ್ಕಳು, ಪ್ರಜ್ಞಾವಂತರೂ ಉತ್ತಮ ಚಾರಿತ್ರ್ಯದ ಹೊಣೆಗಾರ ವ್ಯಕ್ತಿಗಳೂ ಆಗಿ ರೂಪಿತವಾಗುವಂತೆ ಮಾಡಬಹುದು. ಆದುದರಿಂದಲೇ ಎಲ್ಲಾ ಶಿಕ್ಷಣ ಆಯೋಗಗಳು ಶಿಕ್ಷಣ ತಜ್ಞರು ನೀತಿ ಶಿಕ್ಷಣದ ಮಹತ್ವವನ್ನು ಎತ್ತಿ ಹಿಡಿದು ಆ ಬಗ್ಗೆ ಅನೇಕ ರೀತಿಯ ಶಿಫಾರಸ್ಸುಗಳನ್ನು ಮಾಡಿವೆ.

ಕ್ರಿ.ಶ. ೧೮೮೨ರ ಆಯೋಗವು ಶಿಕ್ಷಣ ಸಂಸ್ಥೆಗಳು, ನೈತಿಕ ಶಿಕ್ಷಣವನ್ನು ಕೊಡಬಹುದೆಂದೂ ಪಠ್ಯಪುಸ್ತಕಗಳನ್ನು ವಾಸ್ತವ, ಸಾರ್ವತ್ರಿಕ, ಧಾರ್ಮಿಕ ಮೌಲ್ಯಗಳ ಆಧಾರದ ಮೇಲೆ ರಚಿಸಬೇಕೆಂದೂ ಸೂಚಿಸಿದೆ. ಸರ್ ರಾಧಕೃಷ್ಣ ಆಯೋಗವೂ ಸಹ ನೈತಿಕ ಹಾಗೂ ಧಾರ್ಮಿಕ ಶಿಕ್ಷಣಕ್ಕೆ ಭೋದನಾ ಕ್ರಮದಲ್ಲಿ ಸೂಕ್ತಸ್ಥಾನ ಕೊಡಬೇಕೆಂದು ಸಲಹೆ ಮಾಡಿದೆ. ಗಾಂಧೀಜಿಯವರು ಸರ್ವಧರ್ಮಗಳಲ್ಲಿ ಕಂಡುಬರುವ ಸಾರ್ವತ್ರಿಕ ಮೌಲ್ಯಗಳನ್ನು ಶಾಲೆ ಕಾಲೇಜುಗಳಲ್ಲಿ ಬೋಧಿಸಬೇಕಾದ ಅಗತ್ಯವನ್ನು ಎತ್ತಿ ಹಿಡಿದಿರುವರು. ಕೊಠಾರಿ ಆಯೋಗವು ನೈತಿಕ, ಸಾಮಾಜಿಕ ಹಾಗೂ ಆಧ್ಯಾತ್ಮಿಕ ಮೌಲ್ಯಗಳು ಶಿಕ್ಷಣದ ಅವಿಭಾಜ್ಯ ಅಂಗವಾಗಬೇಕೆಂದು ಸಲಹೆಯನ್ನು ನೀಡಿದೆ. ಅಲ್ಲದೆ ಶಾಲಾ ವೇಳಾ ಪತ್ರಿಕೆಯಲ್ಲಿ ನೈತಿಕ ಶಿಕ್ಷಣಕ್ಕಾಗಿಯೇ ಕೆಲವೊಂದು ಅವಧಿಗಳನ್ನು ಮಿಸಲಿಡಬೇಕೆಂದು ನಿರ್ದಿಷ್ಟ ಸಲಹೆಯನ್ನು ಕೊಟ್ಟಿದೆ. ಈ ಶಿಕ್ಷಣಕ್ಕೆ ಬೇಕಾದ ಸೂಕ್ತ ಪಠ್ಯಗಳನ್ನು ರಾಷ್ಟ್ರಮಟ್ಟದಲ್ಲಿ ಸಿದ್ಧಪಡಿಸಬೇಕೆಂದೂ ಇದಕ್ಕೆ ಸಂಬಂಧಿಸಿದ ಭೋದನಾ ಕ್ರಮಗಳು, ಪಠ್ಯಕ್ರಮಗಳು ದೇಶಾದ್ಯಂತ ಏಕಪ್ರಕಾರವಾಗಿ ಇರಬೇಕೆಂದೂ ಸಹ ಸೂಚಿಸಿದೆ. ಕರ್ನಾಟಕದಲ್ಲಿ ಕ್ರಿ.ಶ. ೧೯೬೯-೭೦ರಿಂದ ನೈತಿಕ ಶಿಕ್ಷಣವನ್ನು ಮಾಧ್ಯಮಿಕ ಶಾಲೆಗಳಲ್ಲಿ ಭೋದಿಸಬೇಕೆಂಬ ನಿಯಮವನ್ನು ಜಾರಿಗೆ ತರಲಾಗಿದೆ. ಅದರಂತೆ ಶಾಲೆಗಳಲ್ಲಿ ನೈತಿಕ ಶಿಕ್ಷಣದ ಅವಧಿಯನ್ನು ವೇಳಾಪತ್ರಿಕೆಯಲ್ಲಿ ಕೊಡಮಾಡಲಾಗಿದೆ. ಯಾವುದೇ ಸೂಕ್ತ ಪಠ್ಯವನ್ನು ಆಯಾ ವಯಸ್ಸಿಗೆ

ತಕ್ಕಂತೆ ಸೂಚಿಸಲಾಗಿಲ್ಲ. ಸೂಕ್ತವಾದ ಪಠ್ಯಪುಸ್ತಕವನ್ನು ಆಯಾ ವಯಸ್ಸಿಗೆ ತಕ್ಕಂತೆ ಸೂಚಿಸಲಾಗಿಲ್ಲ. ಸೂಕ್ತ ಪಠ್ಯಪುಸ್ತಕಗಳೂ, ಕನ್ನಡ ಶಾಲೆಗಳಲ್ಲಿ ಕಂಡುಬರುತ್ತಿಲ್ಲ. ಅಲ್ಲದೆ ಅದು ಪರೀಕ್ಷೆಯ ವಿಷಯವೂ ಆಗಿಲ್ಲದ ಕಾರಣ ಬಹಳಷ್ಟು ಶಾಲೆಗಳು, ಅದು ಅನಗತ್ಯ ವಿಷಯವೆಂಬಂತೆ ಪರಿಗಣಿಸಿ ಆ ಅವಧಿಗಳನ್ನು ಬೇರೆ ಬೇರೆ ವಿಷಯಗಳಿಗೆ ಉಪಯೋಗಿಸಿಕೊಳ್ಳುತ್ತಿದ್ದಾರೆ. ಅಥವಾ ಆ ವಿಷಯವೇನು ಅಷ್ಟೇನೂ ಮಹತ್ವದ್ದಲ್ಲ ಎಂಬಂತೆ ಶಿಕ್ಷಕರು ಒಮ್ಮೊಮ್ಮೆ ಆ ತರಗತಿಗೂ ಹೋಗುವುದಿಲ್ಲ. ಕೆಲವರು ಯಾವುದೋ ಕಥೆ, ಹಾಡುಗಳನ್ನು ಹೇಳಿ ಮುಗಿಸುತ್ತಾರೆ. ಈ ಕಾರಣಗಳಿಂದ ವಿದ್ಯಾರ್ಥಿಗಳಲ್ಲಿ ನೀತಿ ಬೋಧನೆಯ ತರಗತಿಯೆಂದರೆ ವ್ಯರ್ಥವಾದುದು ಹಾಗೂ ಉಪಯೋಗವಿಲ್ಲದುದು ಎಂಬ ಭಾವನೆ ಬೆಳೆಯಲು ಕಾರಣವಾಗಿದೆ. ಈ ಕುರಿತು ಆಯೋಗಗಳನ್ನು ರಚಿಸಿ ಪರಿಣತರ ಸಲಹೆಯಂತೆ ಆ ವಿಷಯವನ್ನು ಶಾಲಾ ಪಠ್ಯದಲ್ಲಿ ಸೇರಿಸಿದಾಗಲೂ ಅದಕ್ಕಾಗಿ ಮಾಡಿದ ಖರ್ಚು, ವಹಿಸಿದ ಶ್ರಮ, ಉಪಯೋಗಿಸಿದ ಬುದ್ಧಿಯು ಎಲ್ಲವೂ ವ್ಯರ್ಥವಾದಂತಾಗುತ್ತದೆ. ಶಿಕ್ಷಕರು ಮಕ್ಕಳಿಗೆ ನೀತಿ ಶಿಕ್ಷಣದ ಮಹತ್ವ ಅರಿವಾಗುವಂತಹ ಧೋರಣೆ ತೋರಿಸದಿದ್ದರೆ. ಅದನ್ನು ಶಾಲಾ ಪಠ್ಯದಲ್ಲಿ ಸೇರಿಸಿದುದರ ಉದ್ದೇಶವೇ ವ್ಯರ್ಥವಾಗಿ ಬಿಡುತ್ತದೆ. ಮಕ್ಕಳಲ್ಲಿ ನೀತಿಯುತ ನಡವಳಿಕೆಯನ್ನುಂಟು ಮಾಡುವ ಜವಾಬ್ದಾರಿ ನೈತಿಕ ಶಿಕ್ಷಕನ ಒಬ್ಬನಿಂದಲೇ ಅಥವಾ ಆ ವಿಷಯ ಭೋದಿಸುವುದರಿಂದ ಮಾತ್ರ ಆಗುವುದಿಲ್ಲ. ಶಾಲೆಯ ಎಲ್ಲಾ ಶಿಕ್ಷಕರು ಯಾವ ವಿಷಯಬೋಧಿಸಿದರೂ ಸಂದರ್ಭ ಸಿಕ್ಕಾಗಲೆಲ್ಲಾ ಮೌಲ್ಯಗಳ ಬಗ್ಗೆ ಹೇಳುತ್ತಿರಬೇಕು. ಮಕ್ಕಳ ಮನಸ್ಸು ಆ ಬಗ್ಗೆ ಆಸಕ್ತವಾಗುವಂತೆ ಸತತವೂ ಪ್ರಯತ್ನಿಸುತ್ತಿರಬೇಕು. ಶಾಲೆಯ ಚಟುವಟಿಕೆಗಳ ಮೂಲಕ ಉತ್ತಮ ಮೌಲ್ಯಗಳನ್ನು ಅಳವಡಿಸಿಕೊಳ್ಳಲು ಸಾಧ್ಯವಾಗುವ ಅವಕಾಶಗಳು ಸಿಗುವಂತೆ ಮಾಡಬೇಕು.

ಇನ್ನೂ ಕೆಲವು ಶಾಲೆಗಳಲ್ಲಿ ತರಗತಿಗಳಿಗೆ ಶಿಕ್ಷಕರು ವೇಳೆಗೆ ಸರಿಯಾಗಿ ಹೋಗುವುದಿಲ್ಲ. ಕೆಲವರು ತಡವಾಗಿ ಹೋಗುತ್ತಾರೆ. ಕೆಲವೊಂದು ಸಾರಿ ಹೋಗದೆಯೂ ಇರುತ್ತಾರೆ. ಹೋದರೂ ಬೇರೆ ಯಾವುದೋ ತಮ್ಮ ಕೆಲಸಗಳನ್ನು ಮಾಡಿಕೊಳ್ಳುತ್ತಾರೆ. ಇದರಿಂದಲೂ ಮಕ್ಕಳಲ್ಲೂ ಅಶಿಸ್ತು, ಅನೈತಿಕತೆ ಬೆಳೆಯುತ್ತದೆ. ಇಂತಹ ಪರಿಸ್ಥಿತಿಗಳಿಂದ ಮಕ್ಕಳು ತಪ್ಪುಮಾಡುವ, ಬೇಜವಾಬ್ದಾರಿಯಿಂದ ವರ್ತಿಸುವ ರೀತಿಯನ್ನು ಬೆಳೆಸಿಕೊಳ್ಳುತ್ತಾರೆ. ಇಂತಹ ಸಂದರ್ಭದಲ್ಲಿ ಶಿಕ್ಷಕರು ತಮ್ಮ ತಪ್ಪಿನಅರಿವನ್ನು ಮಾಡಿಕೊಳ್ಳದೆ ಮಕ್ಕಳನ್ನೇ ದುಡುಕಿನಿಂದ ದಂಡಿಸುತ್ತಾರೆ. ಮತ್ತೆ ಕೆಲವು ಮಕ್ಕಳಿಗೆ ಪ್ರೋತ್ಸಾಹ ಕೊಡುವುದು ಅಥವಾ ಏನೇ ತಪ್ಪು ಮಾಡಿದರೂ ಅವರ ಬಗ್ಗೆ ಪಕ್ಷಪಾತ ಮನೋಭಾವದಿಂದ ಶಿಕ್ಷಿಸದಿರುವುದು ಅಲ್ಲದೇ ಬೇರೆ ಮಕ್ಕಳನ್ನು ಅಲಕ್ಷಿಸುವುದು, ಸಣ್ಣ ಕಾರಣಕ್ಕಾಗಿ ಹೀಯಾಳಿಸುವುದು ಮುಂತಾದ ಪಕ್ಷಪಾತ ರೀತಿಯ ಮನೋಭಾವದಿಂದ ವಿದ್ಯಾರ್ಥಿಗಳಲ್ಲಿ ಅಸಮಾಧನ, ಅತೃಪ್ತಿ ಉಂಟಾಗಿ ಅವರಲ್ಲಿ ಸಮತೋಲನದ ವ್ಯಕ್ತಿತ್ವ

ಬೆಳೆಯದಾಗುತ್ತದೆ. ಇದರಿಂದ ಬೇಜವಾಬ್ದಾರಿಯಿಂದ ವರ್ತಿಸುವುದು, ಸುಳ್ಳನ್ನು ಹೇಳುವುದು ಮತ್ತು ಬೇರೆಯವರಿಗೆ ಹಿಂಸೆಯನ್ನು ಕೊಡುವುದು ಮುಂತಾದ ಅನೇಕ ರೀತಿಯ ದುಷ್ಟ ಗುಣಗಳು ಬೆಳೆಯುತ್ತವೆ. ಹೀಗಿರುವಾಗ ಶಾಲೆಗಳಲ್ಲಿ ನೈತಿಕ ಶಿಕ್ಷಣವೆಂಬ ಒಂದು ಪ್ರತ್ಯೇಕ ಅವಧಿಯು ವ್ಯರ್ಥವೆಂದೇ ಹೇಳಬಹುದು. ಆದುದರಿಂದ ಶಾಲೆಗಳು ಈ ದಿಶೆಯಲ್ಲಿ ತಮ್ಮ ಕರ್ತವ್ಯವನ್ನು ಜವಾಬ್ದಾರಿಯಿಂದ ನಿರ್ವಹಿಸುವುದು ಅತ್ಯಗತ್ಯ.

ಕೇವಲ ಶಾಲೆಯೊಂದೇ ಈ ದಿಶೆಯಲ್ಲಿ ಹೆಜ್ಜೆ ಇಟ್ಟರೆ ಸಾಲದು. ಮನೆ, ಸಮಾಜ, ಸರ್ಕಾರಗಳೂ ಸಹ ಶಿಕ್ಷಣ ಸಂಸ್ಥೆಗಳೊಂದಿಗೆ ಸಹಕರಿಸಿದಾಗ ಮುಂದಿನ ತಲೆಮಾರಿನವರನ್ನು ನೀರಿಕ್ಷಿತ ರೀತಿಯಲ್ಲಿ ನಿರ್ಮಿಸಲು ಸಾಧ್ಯ. ಮುಖ್ಯವಾಗಿ ಪಾಲಕರು ಮಕ್ಕಳಿಗೆ ಮನೆಯಲ್ಲಿ ಯೋಗ್ಯ ವಾತಾವರಣವನ್ನು ನಿರ್ಮಿಸಿ ಮಕ್ಕಳು ನೀತಿಯುತ ನಡೆಗಳನ್ನು ಪಡೆಯಲು ಸಹಾಯಕ ವಾಗಬೇಕು. ಮನೆಯಲ್ಲಿ ಜನರು ಸ್ವತಃ ತಾವೇ ನೀತಿವಂತರಾಗಿ ಬಾಳಿ ಉತ್ತಮ ನಿದರ್ಶನ ಕೊಡಬೇಕು. ಮನೆಯಲ್ಲಿ ಮಕ್ಕಳು ಕುಟುಂಬದ ನಿಯಮಗಳನ್ನು ಪಾಲಿಸುವಂತೆ ಹಿರಿಯನ್ನು ಗೌರವಿಸುವಂತೆ ತಮ್ಮ ಕರ್ತವ್ಯಗಳನ್ನು ಜವಾಬ್ದಾರಿಯಿಂದ ನಿರ್ವಸಿಸುವಂತೆ ಉಪಕರಿಸಿದವರನ್ನು ಸ್ಮರಿಸುವಂತೆ, ಅಸಹಾಯಕರಿಗೆ ನೆರವು ನೀಡುವಂತೆ ಸಂಪ್ರದಾಯಗಳನ್ನು ಗೌರವಿಸುವಂತೆ ನೋಡಿಕೊಂಡು, ಶಾಲೆಯೊಡನೆ ಸಹಕರಿಸುತ್ತಾ ತಮ್ಮ ಮಕ್ಕಳಲ್ಲಿ ಉತ್ತಮ ಚಾರಿತ್ರ್ಯ ನಿರ್ಮಾಣ ಉಂಟಾಗುವಂತೆ ಮಹತ್ವದ ಪಾತ್ರವಹಿಸಬೇಕು.

ಮೌಲ್ಯಧಾರಿತ ವಿಷಯಗಳ ಪ್ರಚಾರಕ್ಕೆ ಸಾಕಷ್ಟು ಪ್ರೋತ್ಸಾಹ ಕೊಡಬೇಕು. ನೀತಿಬಾಹಿರ ನಡವಳಿಕೆಗೆ ಆಸ್ಪದವಿಲ್ಲದಂತಹ ಕಾನೂನುಗಳನ್ನು ಜಾರಿಗೆ ತರುವುದಲ್ಲದೆ ಶಿಕ್ಷಣ ನೀತಿಯಲ್ಲಿ ಎಲ್ಲ ರೀತಿಯ ಬದಲಾವಣೆ ತರಬೇಕು. ಮಕ್ಕಳ ನೈತಿಕಾಭಿವೃದ್ಧಿಗೆ ಸಹಾಯಕವಾಗುವ ಚಿತ್ರಗಳಿಗೆ ಪ್ರೋತ್ಸಾಹ ನೀಡಬೇಕು. ಶಾಲೆಯಲ್ಲಿ ಮಕ್ಕಳ ದೈಹಿಕ, ಮಾನಸಿಕ, ಬೌದ್ಧಿಕ, ಭಾವನಾತ್ಮಕ, ನೈತಿಕ, ಕ್ರಿಯಾಶೀತಾತ್ಮಕವಾದ ಮಗುವಿನ ಸರ್ವತೋಮುಖವಾದ ಬೆಳವಣಿಗೆಗೆ ಗಮನಕೊಟ್ಟು ಅವರಲ್ಲಿ ತುಲನಾತ್ಮಕ ವ್ಯಕ್ತಿತ್ವ ರೂಪಿತವಾಗಲು ಸಹಯಾಕವಾಗಬೇಕು. ವಿವಿಧ ವಿಷಯಗಳ ಮೂಲಕ ಜ್ಞಾನದ ಅಭಿವೃದ್ಧಿಗೆ ಅವಕಾಶ ಮಾಡಿಕೊಡುತ್ತ ಜೊತೆ ಜೊತೆಯಲ್ಲೇ ಸಂದರ್ಭೋಚಿತವಾಗಿ ಉಳಿದ ಅಂಶಗಳ ಬೆಳವಣಿಗೆಗೆ ಲಕ್ಷ್ಯವನ್ನು ಕೊಡಬಹುದಾಗಿದೆ. ಶಾಲೆಗಳು ಕೇವಲ ಜ್ಞಾನವನ್ನು ವಿಕ್ರಯಿಸುವ ಅಥವಾ ಉದ್ಯೋಗವನ್ನು ಪಡೆಯುವ ಸಾಧನಗಳಾದ ಮಾನವ ಜನಾಂಗದ ಅಭಿವೃದ್ಧಿಗೆ ಸಹಾಯಕವಾಗುವ ದಕ್ಷ, ಯೋಗ್ಯ ವ್ಯಕ್ತಿಗಳನ್ನು ರೂಪಿಸುವ ರೂವಾರಿಗಳಾಗಬೇಕು. ಏಕೆಂದರೆ ಒಳ್ಳೆಯ ಚಾರಿತ್ರ್ಯವನ್ನು ಹೊಂದಿದ ಜನರು ತಮ್ಮ ಹಾಗೂ ರಾಷ್ಟ್ರದ ಉನ್ನತಿಯನ್ನು ಸಾಧಿಸಬಲ್ಲರು.

ಶಿಕ್ಷಕರು ನೀತಿ ಭೋದನೆಯನ್ನು ತರಗತಿಗಷ್ಟೇ ಸೀಮಿತಗೊಳಿಸಿಕೊಳ್ಳಬಾರದು. ವಿವಿಧ ವಿಷಯಗಳನ್ನು ಭೋದಿಸುವಾಗ ಶಾಲೆಯ ಇತರ ಕಾರ್ಯಕ್ರಮಗಳನ್ನು ನಡೆಸುವಾಗ, ಆಟ ಆಡಿಸುವಾಗ ಹೀಗೆ ಅನೇಕ ಅವಕಾಶಗಳು ದೊರೆಯುತ್ತವೆ. ಆಗ ಪ್ರತಿಯೊಂದು ಸಂದರ್ಭದಲ್ಲಿ ಅವಕಾಶ ದೊರೆತಾಗಲೆಲ್ಲಾ ಮಕ್ಕಳಿಗೆಲ್ಲ ಉತ್ತಮ ಚಾರಿತ್ರ್ಯವನ್ನು ಬೆಳೆಸಬಹುದು. ಆದರೆ ಬಹಳಷ್ಟು ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳ ಆಟದ ಸಮಯದಲ್ಲಿ ಶಿಕ್ಷಕರ ಪಾತ್ರ ಅವಶ್ಯಕವಿಲ್ಲ ವೆನ್ನುವಂತೆ ಶಿಕ್ಷಕರು ಆಟಗಳ ಮೇಲ್ವಿಚಾರಣೆ ಮಾಡುವುದೇ ಇಲ್ಲ. ಇಲ್ಲಿಯೂ ಶಿಕ್ಷಕರ ಮಾರ್ಗದರ್ಶನ, ಮೇಲ್ವಿಚಾರಣೆ ಅತ್ಯಗತ್ಯ. ಹಾಗೇಯೇ ಮಾಡದಿದ್ದರೆ ಆಟದ ಬಯಲು ಅನಾಚ್ಛಾದಿತ ಶಾಲೆಯಾಗದೆ ಅನೀತಿಯುತರಾದ ಮಕ್ಕಳ ಬೆಳವಣಿಗೆಗೆ ಸಹಾಯಕವಾಗುವ ಕಮ್ಮಟವಾಗುತ್ತದೆ. ಆಟದ ಬಯಲಿನಲ್ಲಿ ಮಕ್ಕಳಿಗೆ ಸಕಾಲದಲ್ಲಿ ಸೂಕ್ತ ಸಲಹೆಯನ್ನು ಕೊಟ್ಟು ಅಪೇಕ್ಷಣೀಯ ಹಾಗೂ ಅಗತ್ಯ ಗುಣಗಳಾದ ಸಹಕಾರ, ನಿಯಮ ಪಾಲನೆ, ನಾಯಕನಿಗೆ ವಿಧೇಯನಾಗಿ ನಡೆಯುವಿಕೆ, ಸ್ವಇಚ್ಛೆಯಿಂದ ಕೆಲಸ ಮಾಡಲು ಮುಂದೆ ಬರುವ ಮನೋಭಾವ ಹಾಗೂ ಸೋಲು ಗೆಲುವುಗಳನ್ನು ಸಮಾನಭಾವದಿಂದ ಸ್ವೀಕರಿಸುವ ಸಮತೋಲನ ಸ್ವಭಾವ ಸೂಕ್ತ ಸಮಯದಲ್ಲಿ ಯೋಗ್ಯನಿರ್ಣಯ ತೆಗೆದುಕೊಳ್ಳಬಲ್ಲ ಸೂಕ್ಷ್ಮಬುದ್ಧಿ, ಸಮಯ ಪ್ರಜ್ಞೆ, ಜವಾಬ್ದಾರಿಯುತ ನಡೆ–ನುಡಿ, ಸಂಘ–ಸಂಸ್ಥೆಗಳ ಬಗ್ಗೆ ಅಭಿಮಾನ, ದೇಶಪ್ರೇಮ, ಗುರುಹಿರಿಯ ಬಗ್ಗೆ ಗೌರವ, ಉಪಕಾರ ಸ್ಮರಣೆ, ಕಷ್ಟದಲ್ಲಿರುವವರಿಗೆ ಸಹಾಯ ಮಾಡುವಿಕೆ ಮುಂತಾದ ಉತ್ತಮ ಗುಣಗಳನ್ನು ಮಕ್ಕಳು ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಳ್ಳಲು ಸಹಾಯಕವಾಗಬಹುದು. ಸಾಂದರ್ಭಿಕ ಸನ್ನಿವೇಶಗಳಲ್ಲಿ ನೈತಿಕಶಿಕ್ಷಣ ಕೊಡುವುದಲ್ಲದೆ ಪ್ರತ್ಯಕ್ಷ ಭೋದನೆಯನ್ನು ನೀತಿ ಬೋಧನಾ ಅವದಿಯಲ್ಲಿ ಮಾಡಬೇಕು. ಪ್ರಾಥಮಿಕ ಮಕ್ಕಳಿಗೆ ನೀತಿ ಬೋಧನೆಯಲ್ಲಿ ಪಂಚತಂತ್ರ, ಈಸೋಪನ ನೀತಿ ಕಥೆಗಳ ಮೂಲಕ ವಿಮರ್ಶಾತ್ಮಕ ಶಕ್ತಿಯನ್ನು ಒಳಿತು ಕೆಡುಕುಗಳ ಕಲ್ಪನೆ ಯನ್ನು ಜೀವನದ ವಿವಿಧ ಪ್ರಸಂಗಗಳಲ್ಲಿ ನಡೆದುಕೊಳ್ಳಬೇಕಾದ ಉತ್ತಮಮಟ್ಟದ ರೀತಿ ನೀತಿಗಳನ್ನು, ಧೈರ್ಯ ಸಾಹಸಗಳನ್ನು, ಕಷ್ಟ ಸಮಯದಲ್ಲಿ ಜಾಣ್ಮೆಯಿಂದ ಧೈರ್ಯ, ಸ್ಥೈರ್ಯದಿಂದ ಜೀವನವನ್ನು ಎದುರಿಸುವ ಮಾರ್ಗದರ್ಶನವನ್ನು ಪಡೆಯಬುಹದಾಗಿದೆ. ಶ್ರೇಷ್ಠ ವ್ಯಕ್ತಿಗಳ ಜೀವನ ಚರಿತ್ರೆ, ಅವರ ಜೀವನ ಮಹತ್ವ ಘಟನೆಗಳು ಅವರು ಬಾಳಿದ ಜೀವನವನ್ನು ಕುರಿತು ಪರೋಪಕಾರಕ್ಕಾಗಿ ಅವರು ನೀಡಿದ ಸಹಾಯ, ಮಾಡಿದ ಸೇವೆ, ತ್ಯಾಗ, ಮುಂತಾದವುಗಳ ಬಗೆಗೆ ಮನದಟ್ಟಾಗುವಂತೆ ವರ್ಣನೆ ಮಾಡಬಹುದು. ಈ ವಿಷಯಗಳನ್ನು ಬೋಧಿಸುವ ಶಿಕ್ಷಕ ಹೇಳುವ ವಿಚಾರಗಳು ಮಕ್ಕಳ ಮನಸ್ಸಿನ ಮೇಲೆ ಆಳವಾಗಿ ಪರಿಣಾಮ ಮಾಡುವಂತಹ ರೀತಿಯಲ್ಲಿ ಭೋದಿಸಲಬಲ್ಲವನೂ, ನೀತಿವಂತನೂ ಆಗಿರಬೇಕು. ಸ್ವತಃ ನೈತಿಕ ಜೀವನವನ್ನು ಬಾಳುವಂತಹವನಾಗಿರಬೇಕು. ಹೇಳುವುದೊಂದು

ಬಾಳುವದೊಂದಾಗಿರುವ ವ್ಯಕ್ತಿಯ ಮಾತುಗಳ ಬಗೆಗೆ ಮಕ್ಕಳಿಗೆ ಗೌರವ ಇರುವುದಿಲ್ಲ ಎಂಬ ವಿಷಯವನ್ನು ಶಿಕ್ಷಕ ಸದಾ ನೆನಪಿನಲ್ಲಿಟ್ಟು ಕೊಳ್ಳುವುದು ಅಗತ್ಯ.

ಶಾಲೆಯಲ್ಲಿ ನೀತಿ ಶಿಕ್ಷಣವನ್ನು ಕೊಡುವುದರ ಮೂಲಕ ಸಮಾಜದ ಪ್ರತಿಯೊಂದು ಮನೆಗೂ ನೀತಿಶಿಕ್ಷಣವನ್ನು ಮುಟ್ಟಿಸಬಹುದಾಗಿದೆ. ಯಾವ ಕಾನೂನು ಯಾವ ಸರ್ಕಾರವೂ ಮಾಡಲ ಸಾಧ್ಯವಾದ ಕಾರ್ಯವನ್ನು ನಿಷ್ಠವಂತನಾದ ಶಿಕ್ಷಕ ಶ್ರದ್ಧೆಯಿಂದ ತನ್ನ ಕೆಲಸವನ್ನು ಮಾಡುವ ಮೂಲಕ ಸಮಾಜ, ರಾಷ್ಟ್ರವನ್ನೇ ನೀತಿಯುತವನ್ನಾಗಿ ಮಾಡಲು ಶಕ್ತನಾಗಿದ್ದಾನೆ.

**ಅಡಿ ಟಿಪ್ಪಣೆಗಳು**

೧. ಮಾಲಿನಿ ಮಲ್ಯ ಬಿ.(ಸಂ.), ಶಿವರಾಮ ಕಾರಂತರ ಲೇಖನಗಳು, ಭಾಷೆ, ಶಿಕ್ಷಣ, ಸಂಸ್ಕೃತಿ, ಸಂಶೋಧನೆ ಸಂಪುಟ–೨, ೧೯೯೪, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ನಮ್ಮ ಶಾಲೆಗಳು, ಪು. ೮೦.

೨. ಮಹಾಬಲೇಶ್ವರ ರಾವ್, ೧೯೯೮, ರಾಷ್ಟ್ರೀಯ ಶಿಕ್ಷಣ ನೀತಿ. ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಪು. ೯

೩. ಮಾಲಿನಿ ಮಲ್ಯ ಬಿ.(ಸಂ.), ೧೯೯೪, ಶಿವರಾಮ ಕಾರಂತರ ಲೇಖನಗಳು, ಭಾಷೆ, ಶಿಕ್ಷಣ, ಸಂಸ್ಕೃತಿ, ಸಂಶೋಧನೆ ಸಂಪುಟ–೨, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಇಂದಿನ ಶಿಕ್ಷಣ ಶಿಕ್ಷಣವಲ್ಲ; ಶಿಶು ಹತ್ಯೆ, ಪು. ೭೩

೪. ಅದೇ., ಮಕ್ಕಳ ಚಟುವಟಿಕೆ, ಪು. ೮೬

೫. ಅದೇ., ರಾಷ್ಟ್ರೀಯ ಶಿಕ್ಷಣ ದೋರಣೆ ಮತ್ತು ಶಿಶುಪರ ದೃಷ್ಟಿ, ಪು. ೧೮೯

೬. ಅದೇ., ನಿಸರ್ಗದೊಡನೆ ಸಂಬಂಧ, ಪು. ೯೬

೭. ಅದೇ., ಪಠ್ಯ ವಿಷಯಗಳೂ, ಗ್ರಂಥಗಳು ಪು. ೯೯

೮. ಅದೇ., ಶಿಕ್ಷಣ ಮತ್ತು ಮಕ್ಕಳು, ಪು. ೨೧೮

೯. ಅದೇ., ನಮ್ಮ ಶಿಕ್ಷಣದ ಸಮಸ್ಯೆಗಳು, ಪು. ೧೧೩

೧೦. ಅದೇ., ಮಕ್ಕಳಿಗೆ ಸಾಹಿತ್ಯ ಪು. ೧೬೨

೧೧. ಅಶೋಕ ಟಿ.ಪಿ., ೧೯೯೩, ಕನ್ನಡ ಸಾಹಿತ್ಯ ಈ ಶತಮಾನದ ನೋಟ, ಶಿವರಾಮ ಕಾರಂತ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೯೩

೧೨. ಅದೇ., ಪು. ೨೯೬

೧೩. ಅದೇ., ಪು. ೨೯೯

೧೪. ಅದೇ., ಪು. ೨೯೯

ಅಧ್ಯಾಯ ಆರು

# ಸಮಾರೋಪ

**ಶಿ**ವರಾಮ ಕಾರಂತರು ಕನ್ನಡದ ಸಾಹಿತಿಯಾದರೂ ಈವರೆಗೆ ಹೆಚ್ಚು ಚಿಂತನೆ, ಚರ್ಚೆಗೆ ಒಳಗಾಗದೆ ಇದ್ದ ಶೈಕ್ಷಣಿಕ ವಿಚಾರಗಳನ್ನು ಮತ್ತು ಪ್ರಯೋಗಶೀಲತೆಯನ್ನು ಈ ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನವನ್ನು ಮಾಡಲಾಗಿದೆ. **ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಮತ್ತು ಪ್ರಯೋಗ** ಎಂಬ ಈ ಅಧ್ಯಯನವು ಶಿವರಾಮ ಕಾರಂತರನ್ನು ಕಾದಂಬರಿಕಾರ ರಾಗಿ ಗ್ರಹಿಸಿಕೊಂಡು ಈವರೆಗೆ ನಡೆದ ಅಧ್ಯಯನಗಳಿಗಿಂತ ಭಿನ್ನವಾಗಿ ಕಾರಂತರ ಶೈಕ್ಷಣಿಕ ಬರಹಗಳನ್ನು, ಪ್ರಯೋಗಗಳನ್ನು ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿ ಶಿಕ್ಷಣ ಕುರಿತ ಚಿಂತನೆಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ.

ವಸಾಹತುಶಾಹಿ ಶಿಕ್ಷಣ ಕುರಿತು ಕಾರಂತರ ಪ್ರತಿಕ್ರಿಯೆ ಏನು? ಅವರ ಪ್ರಯೋಗಗಳ ಹಿಂದಿರುವ ಆಶಯವೇನು? ಶಿಕ್ಷಣ ಚಿಂತನೆಯ ಕುರಿತು ಅವರು ಗ್ರಹಿಸಿರುವ ಆಲೋಚನೆಯ ವಿಧಾನದಿಂದ ಯಾವ ಬಗೆಯ ವಿಚಾರಧಾರೆಯನ್ನು ಮಕ್ಕಳ ಮನೋಲೋಕಕ್ಕೆ ದಾಟಿಸಲು ಪ್ರಯತ್ನಿಸಿದರು ಎಂಬುದನ್ನು ಈ ಅಧ್ಯಯನದ ಮೂಲಕ ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ.

ಶಿವರಾಮ ಕಾರಂತರ ಒಟ್ಟು ಶೈಕ್ಷಣಿಕ ಬರಹಗಳ ಚಿಂತನೆ, ಪ್ರಯೋಗಗಳು ತಮ್ಮ ಕಾಲದ ಶಿಕ್ಷಣಕ್ರಮದ ಲೋಪಗಳನ್ನು ಶೋಧಿಸುತ್ತಾ ಅದಕ್ಕೆ ಪ್ರತಿಕ್ರಿಯೆ ರೂಪದಲ್ಲಿ ವ್ಯಕ್ತವಾಗಿವೆ. ಈ ಚಿಂತನೆಯ ನೆಲೆಗಳು ಕೇವಲ ಚಿಂತನೆಯ ಸ್ವರೂಪದಲ್ಲೇ ಉಳಿಯದೆ ಅವು ಒಂದು

ಪ್ರಾಯೋಗಿಕ ಸನ್ನಿವೇಶವೊಂದನ್ನು ಸೃಷ್ಟಿಸಿಕೊಂಡಿರುವುದು ಕಾಣುತ್ತದೆ. ಆ ಕಾಲದ ಶಿಕ್ಷಣವು ಮಕ್ಕಳಿಗೆ ಜ್ಞಾನ ವಿಸ್ತರಿಸಿಕೊಳ್ಳಲು ಪುಸ್ತಕಗಳ ಕೊರತೆಯನ್ನು ಗಮನಿಸಿದ ಕಾರಂತರು ವಿದ್ಯಾರ್ಥಿಗಳು ಜ್ಞಾನವನ್ನು ವಿಸ್ತರಿಸಿಕೊಳ್ಳಲು ಪಠ್ಯಪುಸ್ತಕಗಳನ್ನು ರಚನೆ ಮಾಡಿದರು. ಅಷ್ಟೇ ಅಲ್ಲದೆ ಮಕ್ಕಳ ಕಥೆಗಳು, ಶಿಶುಗೀತೆಗಳು, ವಿಶ್ವಕೋಶಗಳನ್ನು ಈ ಅಧ್ಯಯನದ ಸಂದರ್ಭದಲ್ಲಿ ಅವುಗಳ ಗುಣ ವೈಶಿಷ್ಟ್ಯತೆಯನ್ನು ತಿಳಿಯಲು ಪ್ರಯತ್ನಿಸಲಾಗಿದೆ.

ಕಾರಂತರ ಶೈಕ್ಷಣಿಕ ಚಿಂತನೆ ಮತ್ತು ಪ್ರಯೋಜನಗಳ ಮುಖ್ಯ ಉದ್ದೇಶ ಮಕ್ಕಳಿಗೆ ಕಲಿಕೆ ಎನ್ನುವುದು ಯಾವುದೇ ಸಂದರ್ಭದಲ್ಲೂ ಹೊರಯಾಗದಂತೆ ಬದಲಾಯಿಸಿ ಆಟದಿಂದ ಪಾಠ ಎಂಬ ವಿಧಾನವನ್ನು ವಿವಿಧ ರೀತಿಯ ಪ್ರಯೋಗಗಳಿಂದ ತಿಳಿಸಿಕೊಟ್ಟರು. ಮಕ್ಕಳಿಗೆ ಯಾವ ಬಗೆಯಲ್ಲಿ ಪಠ್ಯಗಳು ಇರಬೇಕೆಂಬುದನ್ನು ನಿರಂತರ ಪರಿಶ್ರಮದಿಂದ ಶೋಧಿಸಿ ಕೊಂಡಿದ್ದರು. ಪ್ರಾಥಮಿಕ ಮಕ್ಕಳ ಭಾಷೆಯನ್ನು ಕಲಿಸುವ ಸಂದರ್ಭದಲ್ಲೂ ಭಿನ್ನವಾದ ಪ್ರಯೋಗಗಳನ್ನು ನಡೆಸಿದರು. ಮಗುವಿಗೆ ಆರಂಭದಲ್ಲಿ ತಾನು ಕೇಳುವ ಪದಗಳನ್ನೇ ಕಲಿಸಬೇಕು. ಭಾಷೆಯನ್ನು ಪಠ್ಯಪುಸ್ತಕಗಳಿಂದ ಕಲಿಯುವುದಕ್ಕಿಂತಲೂ ತಮ್ಮ ಸುತ್ತಲಿನ ಪರಿಸರದ ಮೂಲಕ ಕೇಳಿ ಕಲಿಯುವ ವ್ಯವಸ್ಥೆಯಾಗಬೇಕು ಎಂಬುದನ್ನು ಪ್ರಯೋಗಗಳ ಮೂಲಕ ತೋರಿಸಿಕೊಟ್ಟರು.

ವಸಾಹತು ಕಾಲದ ಶಿಕ್ಷಣವು ಮಕ್ಕಳಲ್ಲಿ ಕುತೂಹಲ ಆಸಕ್ತಿ ಅವರ ಮಟ್ಟಕ್ಕನುಗುಣವಾಗಿರ ದಂತಹ ಪಠ್ಯಪುಸ್ತಗಳನ್ನು ಗಮನಿಸಿದ್ದರು. ಕಾರಂತರು ಮಕ್ಕಳಲ್ಲಿ ಕುತೂಹಲವನ್ನುಂಟು ಮಾಡುವ ಆಟದ ಮೂಲಕ ಪಾಠ ಎಂಬ ವಿನೂತನ ಪದ್ಧತಿಯನ್ನು ರೂಢಿಸುವ ಪ್ರಯತ್ನವನ್ನು ಅವರ ಪ್ರಯೋಗಗಳಲ್ಲಿ ಕಾಣಬಹುದು. ಆ ಪ್ರಯೋಗಗಳಿಗೆ ಒಂದು ವಿಸ್ತಾರವಾದ ಆಯಾಮ ದೊರೆಯದೆ ಹೋದುದರಿಂದ ಅದು ಕೆಲವಾರು ಮಿತಿಗಳನ್ನು ಹೊಂದಿತ್ತು. ಇದನ್ನು ಅಂದಿನ ಸಮಾಜ ಸ್ವೀಕಾರ ಮಾಡದೆ ನಿರ್ಲಕ್ಷಿಸಿತು. ಹೀಗಾಗಿ ಇದನ್ನು ಪ್ರಯೋಗದ ಒಳಗಿನ ಮಿತಿ ಎನ್ನುವುದಕ್ಕಿಂತ ಅಂದಿನ ಕಾಲದ ಗ್ರಹಿಕೆಯ ಸಮಸ್ಯೆಯಾಗಿ ಕಾಣಬೇಕಾಗುತ್ತದೆ. ಇಂತಹ ಸಂಗತಿಗಳನ್ನು ಭಿನ್ನ ಭಿನ್ನಮುಖಗಳಿಂದ ಶೋಧಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕಾರಂತರು 'ಓದುವ ಆಟ', 'ಸಿರಿಗನ್ನಡ ಪಾಠಮಾಲೆ', 'ಹೊಸಗನ್ನಡ ಪಾಠಮಾಲೆ' ಎಂಬ ಮಕ್ಕಳ ಪಠ್ಯಪುಸ್ತಕಗಳನ್ನು ರಚನೆ ಮಾಡಿರುವುದರಿಂದ ಈ ಅಧ್ಯಯನ ಸಂದರ್ಭದಲ್ಲಿ ಈ ಪಾಠ ಪುಸ್ತಕಗಳ ವೈಶಿಷ್ಟ್ಯತೆ, ಅವುಗಳ ನಿರೂಪಿಸುವ ಸಚಿತ್ರ ವಿವರಗಳು, ಭಾಷಾ ಕಲಿಕೆಯ ಮಾದರಿಯ ವೈಶಿಷ್ಟ್ಯ ಹಾಗೂ ಮಿತಿಗಳನ್ನು ಈ ಅಧ್ಯಯನದ ಸಂದರ್ಭದಲ್ಲಿ ಶೋಧಿಸಲಾಗಿದೆ. ಇಂದಿಗೂ ವಿಶಿಷ್ಟವಾಗಿ ಮತ್ತು ಅನನ್ಯವಾಗಿ ಕಾಣುವ ಈ ಪಠ್ಯಪುಸ್ತಕದಲ್ಲಿ ಕಾರಂತರ ಶ್ರಮ, ಸೃಜನಶೀಲ ಚಿಂತನೆ ಬಾಲ ಶಿಕ್ಷಣದ ಕುರಿತು ಚಿಂತನೆಗಳೊಂದಿಗೆ ಅವುಗಳು ಹೊಂದಿರುವ ತಾತ್ವಿಕ ಸಂಬಂಧವನ್ನು ಇಲ್ಲಿ ಗುರುತಿಸಲಾಗಿದೆ.

ಕಾರಂತರು ವಯಸ್ಕರ ಶಿಕ್ಷಣಕ್ಷೇತ್ರದಲ್ಲಿ ಕೂಡ ಯುನೆಸ್ಕೊದ ಜೊತೆ ಸೇರಿ ಪ್ರಾಯೋಗಿಕವಾಗಿ ಅದನ್ನು ಅನುಷ್ಠಾನದಲ್ಲಿ ತರಲು ಯತ್ನಿಸಿದರು. ಮುಂದೆ ಅನಕ್ಷರಸ್ಥರಿಗಾಗಿ ಪಠ್ಯ ಹಾಗೂ ಹೆಚ್ಚಿನ ಓದಿನ ಅನುಕೂಲಕ್ಕಾಗಿ ಪುಸ್ತಕವನ್ನು ಬರೆದರು. ಇದು ಕಾರಂತರ ಯಶಸ್ವಿ ಪ್ರಯೋಗಗಳಲ್ಲಿ ಒಂದಾಗಿದೆ. ಹಲವಾರು ವರ್ಷಗಳ ನಂತರವೂ ಕಾರಂತರ ಈ ಪಠ್ಯಗಳು ಮರುಮುದ್ರಣಗೊಂಡು ವಯಸ್ಕರ ಶಿಕ್ಷಣದ ಪಠ್ಯವಾಗಿ ಮುಂದುವರಿದಿತ್ತು. ವಯಸ್ಕರ ಮತ್ತು ಮಕ್ಕಳ ಮನಸ್ಸಿಗೆ ಮುಟ್ಟುವಂತಹ ಪಠ್ಯಗಳ ನಿರೂಪಣೆ ಪಠ್ಯದ ಜೊತೆ ಜೊತೆಗೆ ಸಾಮಾಜಿಕ ಎಚ್ಚರವನ್ನು ಮೂಡಿಸುವಲ್ಲಿ ಪ್ರಯತ್ನಿಸಿದ್ದಾರೆ.

ಶಿವರಾಮ ಕಾರಂತರು ಪ್ರಾಥಮಿಕ ಶಿಕ್ಷಣಕ್ಷೇತ್ರದಲ್ಲಿಯೇ ಹೆಚ್ಚು ಪ್ರಯೋಗಗಳನ್ನು ಮಾಡಿದ್ದಾರೆ. ಬಾಲವನ ನಡೆಸಿದರು. ಪಠ್ಯಪುಸ್ತಕ ಬರೆದರು. ವಿಶ್ವಕೋಶ, ಶಬ್ದಕೋಶಗಳನ್ನು ನಿರ್ಮಿಸಿದರು. ಬಾಲಪ್ರಪಂಚ ಎಂಬ ಕಿರಿಯರ ವಿಶ್ವಕೋಶವನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಿದರು. ಶಿವರಾಮ ಕಾರಂತರು ಶೈಕ್ಷಣಿಕ ಪ್ರಯೋಗದ ಬಹಳ ಮುಖ್ಯವಾದ ಸಂಗತಿ ಎಂದರೆ ಮಕ್ಕಳಿಗೆ ಕಲಿಕೆ ಎನ್ನುವುದು ಯಾವುದೇ ಸಂದರ್ಭದಲ್ಲೂ ಹೊರೆಯಾಗದಂತೆ ಬದಲಾಯಿಸಿದ್ದು. ಅವರು ಆಯಾ ವಯಸ್ಸಿನ ಮಕ್ಕಳಿಗೆ ತಕ್ಕಂತೆ ಪಠ್ಯಗಳು ಇರಬೇಕೆಂಬುದು ನಿರಂತರ ಪರಿಶ್ರಮದಿಂದ ಶೋಧಿಸಿಕೊಂಡಿದ್ದರು.

ಕಾರಂತರಿಗೆ ಸಮಕಾಲೀನ ಶಿಕ್ಷಣವ್ಯವಸ್ಥೆಯಲ್ಲಿ ಇರುವ ದೋಷಗಳ ಅರಿವು ಬಹಳ ಸ್ಪಷ್ಟವಾಗಿತ್ತು. ಮಕ್ಕಳ ಶಿಕ್ಷಣದ ಹೆಸರಿನಲ್ಲಿ ಹಿರಿಯರು ತಮಗೆ ಉತ್ತಮ ಎಂದು ಕಂಡದ್ದನ್ನು ಪಠ್ಯವಾಗಿ ಕಲಿಸುವ ಅವರಿಗೆ ನೀತಿ, ದೇಶಭಕ್ತಿ ಕಲಿಸುವ ಕೆಲಸವನ್ನು ಮಾಡುತ್ತಿದ್ದರು. ಆದರೆ ಕಾರಂತರು ಇದಕ್ಕೆ ಭಿನ್ನವಾಗಿ ಯೋಚಿಸುತ್ತಾರೆ. ಈ ಶಿಕ್ಷಣದ ಕ್ರಮದ ಒಳಗಡೆ ಕೇವಲ ಕಂಠಪಾಟಕ್ಕೆ ಮಾತ್ರ ಪ್ರಾಧಾನ್ಯವಿದ್ದು ಇಲ್ಲಿ ಮಗುವಿಗೆ ಸ್ವಂತ ಅನುಭವದ ನಿರೂಪಣೆಗೆ ಅವಕಾಶವಿಲ್ಲ. ಶಿವರಾಮ ಕಾರಂತರ ಪ್ರಯೋಗಗಳ ಬಹುಮುಖ್ಯ ಲಕ್ಷಣಗಳ ಒಂದು ಮುಖ್ಯ ಸಂಗತಿ ಎಂದರೆ ಎಲ್ಲೂ ಕೂಡ 'ಕಲಿಸಿ ಕೊಡುವುದು' ಎಂಬ ಭಾವನೆ ಇಲ್ಲ. ಬದಲಾಗಿ ಕಲಿಕೆಗೆ ಬೇಕಾದ ಕುತೂಹಲವನ್ನು ಅರಳಿಸುವುದು ಎನ್ನುವುದು ಮುಖ್ಯ ಸಂಗತಿಯಾಗಿದೆ. ಶಿಕ್ಷಕನಾದವನು ಮಗುವಿನ ವಯೋಮಾನ ಮತ್ತು ಮನಸ್ಸು ಅರಿತಿರಬೇಕು ಎಂದು ಬಯಸಿದ್ದರು. ಮಗುವಿನ ವಯಸ್ಸು ನಿರಂತರವಾದ ಚಟುವಟಿಕೆಯಿಂದ ಕೂಡಿರುವಂತಹುದು. ಆದರೆ ನಾವು ತರಗತಿಯ ಶಿಕ್ಷಣದ ನೆಪದಲ್ಲಿ ಮಗುವಿನ ಚಟುವಟಿಕೆಗೆ ತಡೆಯನ್ನು ನೀಡುತ್ತೇವೆ ಎಂದು ಹೇಳುತ್ತಾ ಆ ಚಟುವಟಿಕೆಗಳ ಮೂಲಕವೇ ಕಲಿಕೆ ಸಾಧ್ಯ ಎನ್ನುವುದನ್ನು ತೋರಿಸಿದರು. ಬೋಧನೆಗಿಂತಲೂ ಕಲಿಕೆಯ ಆವರಣದಲ್ಲಿ ಪ್ರಚೋದನೆಯನ್ನು

ಉಂಟುಮಾಡಬೇಕು ಎಂಬ ಚಿಂತನೆ ಆಧುನಿಕ ಕಾಲದ ಶಿಕ್ಷಣ ಚಿಂತನೆಯ ಜೊತೆ ಬಹಳ ಎತ್ತರದಲ್ಲಿ ನಿಲ್ಲಬಹುದಾದ ಯೋಚನೆಯೇ ಆಗಿದೆ. ಕಾರಂತರು ಆಯೋಜಿಸಿದ ಮಕ್ಕಳ ಕೂಟ ಮತ್ತು 'ಬಾಲವನ' ಶಾಲಾಶಿಕ್ಷಣ ಹಾಗೂ ಪಠ್ಯಪುಸ್ತಕ ತಯಾರಿಸುವ ಸಂದರ್ಭದಲ್ಲಿ ಈ ಅಂಶಗಳು ಪ್ರಾಯೋಗಿಕ ಸಾಕ್ಷರತೆಯನ್ನು ಪಡೆಯುತ್ತವೆ. ಚಿತ್ರಗಳನ್ನು ಬಿಡಿಸುವ ಮೂಲಕ ನಿತ್ಯ ಬದುಕಿನ ಸನ್ನಿವೇಶದಲ್ಲಿ ಕೇಳಿದ ಹಾಡುಗಳನ್ನು ಹಾಡುವ, ಸುತ್ತಲಿನ ಪರಿಸರದಲ್ಲಿ ಸಿಗುವ ವಸ್ತುಗಳನ್ನು ಬಳಸಿಕೊಂಡು ಕಲಿಕೆಯಲ್ಲಿ ಆಸಕ್ತಿಯನ್ನು ಹುಟ್ಟಿಸುವ ಮತ್ತು ಅಭಿವ್ಯಕ್ತಿಯ ಸಾಧನವನ್ನಾಗಿಸುವ ಮೂಲಕ ಅವರ ಪ್ರಯೋಗಗಳು ವಿಶಿಷ್ಟವಾಗುತ್ತವೆ. ಭಾಷಾಶಿಕ್ಷಣದಲ್ಲಿ ಶಿಕ್ಷಣತಜ್ಞರಾಗಿರುವ ಬಲ್ಲಾರ್ಡ್‌ನ ಸೂತ್ರಗಳನ್ನು ಅನುಸರಿಸಿ ಚಿತ್ರ ಬರೆದು ವಾಕ್ಯದಿಂದ ಭಾಷೆ ಕಲಿಸುವ ಕ್ರಮವನ್ನು ಅನುಸರಿಸಿದ್ದರು. ಕಾರಂತರಿಗೆ ಪ್ರಾಥಮಿಕ ಶಿಕ್ಷಣ ಮುಖ್ಯವಾಗಿತ್ತು. ಮಗುವಿಗೆ ಭಾಷೆಯನ್ನು ಕಲಿಸುವಾಗ ತಮ್ಮ ಸುತ್ತಲಿನ ವಸ್ತುಗಳನ್ನು ತೋರಿಸುತ್ತಲೇ ಕಲಿಸಬೇಕು ಎಂದು ಬಯಸುತ್ತಿದ್ದರು. ಸುತ್ತಲಿನ ಗಿಡ ಮರಗಳ ಸೊಬಗನ್ನು ನೋಡುತ್ತಲೇ ಅವುಗಳ ಬಗ್ಗೆ ಆಸಕ್ತಿ ಹುಟ್ಟಿ ಆ ಮೂಲಕ ನಿರರ್ಗಳವಾಗಿ ಮಾತುಗಾರಿಕೆಯನ್ನು ಕಲಿಸಬಹುದು. ಮುಂದೆ ಬರಹಕ್ಕೂ ಈ ಜ್ಞಾನ ಸಂಬಂಧದ ವಸ್ತುಗಳಿಗೂ ಸಂಬಂಧವನ್ನು ಬೆಳೆಸಬಹುದು ಎನ್ನುತ್ತಾರೆ. ಈ ಮಾತು ಶಿಕ್ಷಣದೃಷ್ಟಿಯ ಸೂಕ್ಷ್ಮ ಒಳನೋಟ ಎನ್ನಬಹುದು. ಕಾರಂತರು ತಮ್ಮ ಮಕ್ಕಳಿಗೆ ಮನೆಯಲ್ಲಿಯೆ ಪ್ರಾಥಮಿಕ ಶಿಕ್ಷಣವನ್ನು ಹೇಳಿಕೊಳ್ಳುತ್ತಿದ್ದರು.

ನಾನು ಊರಲ್ಲಿದ್ದ ಪ್ರತಿ ರಾತ್ರಿಯು ಅವರಿಗೆ ಒಂದೊಂದು ಹೊಸ ಕಥೆಯನ್ನು ಹೇಳಬೇಕಾಗುತ್ತಿತ್ತು. ಮರುದಿನ ಕಾಗದ ಕತ್ತರಿಸಿ ಅಥವಾ ಬಣ್ಣ ಬರೆದು, ಆ ಕಥಾ ಪಾತ್ರಗಳ ಗೊಂಬೆಗಳನ್ನು ಒದಗಿಸಬೇಕು. ಆಗ ಅವರು ಕುಳಿತು ಘಂಟೆ ಘಂಟೆಗಳ ಕಾಲ, ಆ ಪಾತ್ರಗಳಂತೆ ನಟಿಸುತ್ತಾ ಸಂಭಾಷಣೆ ನಡೆಯಿಸುತ್ತಿದ್ದರು(ಶಿವರಾಮ ಕಾರಂತ, ೨೦೧೦, ಸ್ಮೃತಿ ಪಟಲದಿಂದ, ಪು.೪೪೪). ಎಂಬ ಮಾತುಗಳು ಮಕ್ಕಳಿಗೆ ಆಸಕ್ತಿ ಇರುವಂತಹ ವಿಷಯಗಳನ್ನು ಕಲಿಸಿದರೆ ಅಭಿರುಚಿ, ಸ್ವ-ವಿಚಾರ ಶಕ್ತಿ ಬೆಳೆಯುವುದಕ್ಕೆ ಸಾಧ್ಯವಾಗುತ್ತದೆ. ಇಂತಹ ಪದ್ಧತಿಯಿಂದ ಕಲಿಯುವಿಕೆಯು ತುಂಬಾ ಸುಲಭವಾಗುತ್ತದೆ.

ಭಾಷಾ ಬೋಧನೆಯನ್ನು ಕೇಳಿ ಕಲಿಯಬೇಕೆ ಹೊರತು ವ್ಯಾಕರಣದಿಂದಲ್ಲ ಎಂಬುದನ್ನು ಕಾರಂತರು ಶಿಕ್ಷಣಕ್ರಮದಲ್ಲಿ ಅಳವಡಿಸಿಕೊಂಡಿದ್ದರು. ತಾಯಿ ಮಗುವಿಗೆ ಭಾಷೆ ಕಲಿಸುವುದು ವ್ಯಾಕರಣದಿಂದಲ್ಲ, ಸಂಭಾಷಣೆಯಿಂದ ಎಂಬ ಸೂಕ್ಷ್ಮವನ್ನು ಅರಿತಿದ್ದ ಕಾರಂತರು ತಮ್ಮ ಪ್ರಯೋಗದ ಸಂದರ್ಭದಲ್ಲಿ ಇದೇ ಮಾದರಿಯನ್ನು ಕಲಿಕೆಗೆ ಬಳಸಿಕೊಂಡರು. ಶಬ್ದ ಬೋಧನೆಯೇ ಭಾಷಾಕಲಿಕೆಗೆ ಹೆಚ್ಚು ಸುಲಭ ಮತ್ತು ಆಕರ್ಷಕ ಎಂಬ ತತ್ವವನ್ನು ಕಾರಂತರು

ಪ್ರತಿಪಾದಿಸಿದರು. ಇದಕ್ಕಾಗಿ ಅವರೇ ಒಂದು ಕ್ರಮವನ್ನು ಅಳವಡಿಸಿಕೊಂಡಿದ್ದರು. ಚಿತ್ರ ಅಥವಾ ವಸ್ತುವನ್ನು ಕುರಿತ ಸಂಭಾಷಣೆ, ಸಂಭಾಷಣೆಯಿಂದ ಹೊಮ್ಮುವ ಶಬ್ದ, ಆ ಶಬ್ದದ ಬಿಂಬ ಕಲ್ಪನೆ, ಬಳಿಕ ಅಕ್ಷರದ ಪರಿಚಯ ಹೀಗೆ ಶಬ್ದ ಬೋಧನೆ ಸಾಗುವಾಗ ಒಂದು ಅಕ್ಷರ ಪರಿಚಯಕ್ಕಾಗಿಯೇ ಶಬ್ದಗಳನ್ನು ಕೊಡಬಾರದು ಎನ್ನುತ್ತಾ ಇದರ ಬದಲಿಗೆ ಮಗುವಿನ ಆವರಣದಲ್ಲಿರುವ ಮಗು ನಿತ್ಯವೂ ಕೇಳುವ ಸಹಜ ಬಳಕೆಯ ಶಬ್ದಗಳನ್ನೇ ಹೇಳಿಕೊಡಬೇಕು ಹಾಗೂ ಪಠ್ಯಪುಸ್ತಕಗಳೂ ಕೂಡ ನಿರುಪಯುಕ್ತ ಪದಗಳನ್ನು ಬಳಸದೆ ಅರ್ಥದ ನಿಖರತೆಗಾಗಿ ಗಮನ ವಹಿಸಬೇಕು ಎಂಬುದನ್ನು ಹೇಳುತ್ತಾರೆ.

ಶಿವರಾಮ ಕಾರಂತರ ಪ್ರಯೋಗದಲ್ಲಿ ಗುರುತಿಸಬಹುದಾದ ಮುಖ್ಯ ಸಂಗತಿ ಎಂದರೆ ತಮ್ಮ ಕಾಲದ ಪಠ್ಯದಲ್ಲಿ ಯಾವೆಲ್ಲ ಬಗೆಯ ಕೊರತೆಗಳು ಎಂಬುದಿದೆಯೊ ಅದನ್ನು ತಾವೇ ಪಠ್ಯಪುಸ್ತಕಗಳ ರಚನೆಯನ್ನು ಮಾಡಿದಾಗ ಆ ಕೊರತೆಗಳನ್ನು ನಿವಾರಿಸುವಲ್ಲಿ ಗಮನವಹಿಸಿದ್ದು. ಭಾಷಾ ಪಾಠಗಳಲ್ಲಿ ಪದಗಳು, ವಾಕ್ಯಗಳು ಮತ್ತೆ ಮತ್ತೆ ಆವರ್ತಗೊಳ್ಳಬೇಕೆಂಬ ಚಿಂತನೆಯ ಕಾರಂತರು ತಮ್ಮ ಕಾಲದ ಪಠ್ಯಗಳಲ್ಲಿ ಈ ಸಂಗತಿಗಳು ಇಲ್ಲದೇ ಹೋದಾಗ ಅವರೆ ಪಠ್ಯ ರಚಿಸಿದಾಗ ಪದಗಳ ಆವರ್ತನೆ ಸಾಕಷ್ಟು ಪ್ರಮಾಣದಲ್ಲಿರುವಂತೆ ನೋಡಿ ಕೊಂಡಿದ್ದಾರೆ.

ಕಾರಂತರು ಮಕ್ಕಳ ಪ್ರಾಥಮಿಕ ಶಿಕ್ಷಣವನ್ನು ಆಟದ ಮೂಲಕವೇ ಪಾಠವನ್ನು ಕಲಿಸಲು ಪ್ರಯತ್ನ ಮಾಡಬೇಕು ಎನ್ನುತ್ತಾರೆ. ಆದರೆ ವರ್ಷವೆಲ್ಲಾ ಈ ರೀತಿಯ ಚಟುವಟಿಕೆಗಳ ಮೂಲಕ ಪಾಠವನ್ನು ಕಲಿಸಲು ಸಾಧ್ಯವಾಗುವುದಿಲ್ಲ. ಬಾಲವನವೆಂಬ ಶಾಲೆಯನ್ನು ಆರಂಭಿಸಿ ಅಂದಿನ ಕಾಲದ ಶಿಕ್ಷಣಕ್ರಮಕ್ಕಿಂತ ಭಿನ್ನವಾದ ಪ್ರಯೋಗಗಳನ್ನು ನಡೆಸುತ್ತಾರೆ. ಆದರೆ ಸರ್ಕಾರದ ಅಂಗೀಕಾರ ಇಲ್ಲವಾದುದರಿಂದ ಜನರು ಆ ಶಾಲೆಗೆ ಮಕ್ಕಳನ್ನು ಕಳುಹಿಸಿಕೊಡಲಿಲ್ಲ. ಯಾವ ಪ್ರಯೋಗಗಳು ಚಟುವಟಿಕೆ ಪೂರ್ಣವಾಗಿ ಆಟದ ಮೂಲಕ ನಡೆಯುವ ಪಾಠವಾಗಿ ಮಕ್ಕಳನ್ನು ಆಕರ್ಷಿಸಬೇಕಿತ್ತೋ ಆ ಶಾಲೆಗೆ ಮಕ್ಕಳೇ ಬರಲಿಲ್ಲ. ಕಾರಂತರು ಬಾಲವನ ಎಂಬ ಕಲ್ಪನೆಯನ್ನು ಅದ್ಭುತವಾಗಿ ಕಟ್ಟಿದ್ದರೂ ಬೇಕಾದ ವ್ಯವಸ್ಥೆಗಳನ್ನು ಮಾಡಿಸಿದ್ದರು. ಆದರೆ ಮಕ್ಕಳಿಲ್ಲದೆ ಹೋದರೆ ಪ್ರಯೋಗದ ಸಫಲತೆಯನ್ನು ಅಳೆಯುವುದಾದರೂ ಹೇಗೆ? ಅಲ್ಲಿ ಕಲಿಯಲು ಬಂದಿರುವ ಮಕ್ಕಳು ಆಸಕ್ತಿಯಿಂದ ಬಂದವರಲ್ಲ. ತಮ್ಮ ಜೊತೆಗೆ ಅನಾಥರನ್ನು ತಂದು ಸೇರಿಸುತ್ತಾರೆ. ಇದಕ್ಕೆ ಬಹುಮುಖ್ಯವಾದ ಕಾರಣ ಜನರಲ್ಲಿ ಈ ಬಗೆಗೆ ಆಸಕ್ತಿ ಇಲ್ಲದೆ ಹೋದದ್ದು. ಅಲ್ಲಿಗೆ ಜ್ಞಾನದ ಹಸಿವಿನಿಂದ ಬರುವ ಮಕ್ಕಳು ಕಾಣಲಿಲ್ಲ. ಅದು ಹೊಟ್ಟೆ ಹಸಿದವರಿಗೆ ಒಂದು ಅನಾಥಾಲಯವನ್ನು ತೆರೆದಂತಾಯಿತು ಎನ್ನುತ್ತಾರೆ. ಬಾಲವನವು ಮೂರು ವರ್ಷಗಳ ಕಾಲ ಹಾಗೂ ಹೀಗೂ ನಡೆಸಿಕೊಂಡು ಬಂದರೂ ಕೊನೆಗೆ ನಿಂತೇ ಹೋಯಿತು.

ಕಾರಂತರೂ ನಡೆಸಿದ ಮಕ್ಕಳ ಕೂಟಗಳು ಮಕ್ಕಳಲ್ಲಿ ಅಡಗಿರುವ ಸುಪ್ತಶಕ್ತಿಯನ್ನು ಬೆಳಕಿಗೆ ತರುವ ನಿಟ್ಟಿನಲ್ಲಿ ಮಹತ್ವ ಪ್ರಯೋಗಗಳು ಎನ್ನಬಹುದು.

ಕಾರಂತರು ಸ್ವಾತಂತ್ರ್ಯೋತ್ತರ ಶಿಕ್ಷಣವ್ಯವಸ್ಥೆಯನ್ನು ಖಂಡಿಸುತ್ತಾರೆ. ಏಕೆಂದರೆ ಮಕ್ಕಳ ಶಿಕ್ಷಣದ ಹೆಸರಿನಲ್ಲಿ ಆಯೋಗಗಳಿಗೆ ಉತ್ತಮ ಎನಿಸಿದ ಪಠ್ಯಗಳನ್ನು ಮಾಡಿ ಮಕ್ಕಳಿಗೆ ಕಲಿಸುವ ಪದ್ಧತಿಯನ್ನು ಕಾರಂತರು ಒಪ್ಪುವುದಿಲ್ಲ. ಆಟವಾಡುವ ಮಕ್ಕಳಿಗೆ ದೇಶಭಕ್ತಿ, ನೀತಿ, ತತ್ವಗಳನ್ನು ಹೇಳಿಕೊಡುವುದರಿಂದ ಯಾವುದೇ ಪ್ರಯೋಜನವಿಲ್ಲ ಎಂಬುದು ಕಾರಂತರ ವಾದವಾಗಿದೆ. ಇಂದಿನ ಪ್ರಾಥಮಿಕ ಶಿಕ್ಷಣವೆನ್ನುವುದು ಕೇವಲ ಕಂಠಪಾಠಕ್ಕೆ ಪ್ರಾಧಾನ್ಯವಿದ್ದು ಮಗುವಿನ ಸ್ವಂತ ಅನುಭವದ ನಿರೂಪಣೆಗೆ ಅವಕಾಶವಿಲ್ಲದಾಗಿದೆ.

ಕಾರಂತರ ಪ್ರಯೋಗಗಳ ಬಹುಮುಖ ಲಕ್ಷಣವೆಂದರೆ ಎಲ್ಲಿಯೂ ಕೂಡ ಕಲಿಸಿಕೊಡುವ ಎಂಬ ಭಾವನೆ ಇಲ್ಲ, ಬದಲಾಗಿ ಕಲಿಕೆಗೆ ಬೇಕಾದ ಕುತೂಹಲವನ್ನು ಅರಳಿಸುವುದು ಮುಖ್ಯ ಎನ್ನುತ್ತಾರೆ. ಕಲಿಸುವ ಸಂದರ್ಭದಲ್ಲಿ ಮಗುವಿನ ವಯೋಮಾನ ಮತ್ತು ಮನಸ್ಸು ಗಮನಾರ್ಹ ಸಂಗತಿಯಾಗಬೇಕು ಎಂದೇ ಕಾರಂತರು ಬಯಸಿದ್ದರು. ಮಗುವಿನ ಮನಸ್ಸು ಬಾಲ್ಯದಲ್ಲಿ ನಿರಂತರವಾದ ಚಟುವಟಿಕೆಗಳಿಂದ ಕೂಡಿರುತ್ತದೆ. ಆದರೆ ನಾವು ತರಗತಿಯ ನೆಪದಿಂದ ಮಗುವಿನ ಚಟುವಟಿಕೆಯನ್ನು ತಡೆಯುತ್ತೇವೆ ಎಂದು ಹೇಳುತ್ತಾರೆ. ಚಟುವಟಿಕೆಯ ಮೂಲಕವೇ ಕಲಿಕೆ ಸಾಧ್ಯ ಎನ್ನುವುದನ್ನು ತೋರಿಸಿದರು. ಬೋಧನೆಗಿಂತಲೂ ಕಲಿಕೆಯ ಆವರಣದಲ್ಲಿ ಪ್ರಚೋದನೆಯನ್ನುಂಟು ಮಾಡಬೇಕು ಎಂಬ ಚಿಂತನೆ ಆಧುನಿಕ ಕಾಲದ ಶಿಕ್ಷಣದ ಚಿಂತನೆಯ ಜೊತೆ ಬಹಳ ಎತ್ತರದಲ್ಲಿ ನಿಲ್ಲಬಹುದಾದ ಯೋಚನೆಯೇ ಆಗಿದೆ.

ಶೈಕ್ಷಣಿಕ ಚಿಂತನೆ, ಮತ್ತು ಪ್ರಯೋಗಗಳ ಮುಖ್ಯ ವೈಶಿಷ್ಟ್ಯತೆ ಎಂದರೆ ಅವರ ಪ್ರಯೋಗಗಳ ಉದ್ದಕ್ಕೂ ಶಿಕ್ಷಣವೆನ್ನುವುದು ಕೇವಲ ಸ್ಮರಣಶಕ್ತಿಯನ್ನು ಹೆಚ್ಚಿಸುವ ಮಾದರಿಯದಲ್ಲ. ಶಿಕ್ಷಣದಿಂದ ಪಡೆದ ಜ್ಞಾನವನ್ನು ಮುಂದೆ ಜೀವನಾನುಭವದ ಜೊತೆಗೆ ಹೊಂದಿಸಿಕೊಳ್ಳುವುದು ಹೇಗೆ ಎಂಬುದರ ಬಗೆಗೆ ವಿವೇಚಿಸುತ್ತಾರೆ. ಶಿಕ್ಷಣಕ್ಷೇತ್ರದಲ್ಲಿ ಈ ಬಗೆಯ ತಜ್ಞತೆಯನ್ನು ಕಾರಂತರು ಸಂಪಾದಿಸಲು ಬಹಳ ಮುಖ್ಯ ಕಾರಣ ದೀರ್ಘಕಾಲದಿಂದ ಮಕ್ಕಳ ಶಿಕ್ಷಣದ ಸಮಸ್ಯೆಯನ್ನು ಹತ್ತಿರದಿಂದ ನೋಡಿದವರಾಗಿದ್ದರು. ಇದನ್ನು ತನ್ನ ಬಾಲ್ಯದಲ್ಲಿ ಅನುಭವಿಸಿದ್ದರು. ದೇಶ ವಿದೇಶಗಳ ಪ್ರವಾಸದಿಂದ ಜಗತ್ತಿನ ನಾನಾ ಭಾಗಗಳ ಜ್ಞಾನದ ತಿಳುವಳಿಕೆ ಇತ್ತು. ಈ ತಿಳುವಳಿಕೆ ವಿಜ್ಞಾನಪ್ರಪಂಚ, ಪ್ರಾಣಿಪ್ರಪಂಚದಂತಹ, ವಿಶ್ವಕೋಶಗಳನ್ನು ರಚಿಸಲು ಸಾಧ್ಯ ವಾಯಿತು. ಪ್ರತಿಯೊಂದು ಪ್ರಯೋಗವನ್ನು ಮತ್ತೆ ಮತ್ತೆ ಪ್ರಯೋಗ ಮಾಡಿ ನೋಡುತ್ತಿದ್ದರು. ತಮ್ಮ ಕಾಲದ ಸಾರ್ವಜನಿಕ ಸಹಕಾರ, ಸರ್ಕಾರದ ಇಲಾಖೆಗಳ ಸಹಕಾರ ಹೇಳಿಕೊಳ್ಳುವ

ಮಟ್ಟಿಗೆ ದೊರೆಯದೆ ಹೋದರೂ ಸ್ವಂತ ಪರಿಶ್ರಮ ಮತ್ತು ಕೆಲವೇ ಹಿತಾಕಾಂಕ್ಷಿಗಳ ಆರ್ಥಿಕ ಸಹಕಾರದಿಂದ ಈ ಪ್ರಯೋಗಗಳನ್ನು ನಡೆಸಿಕೊಂಡು ಹೋಗಬೇಕಾಯಿತು.

ಭಾಷೆಯ ವ್ಯಾಕರಣವನ್ನು ಕಲಿಸುವುದರ ಕುರಿತು ವೈಜ್ಞಾನಿಕ ಆಲೋಚನೆಗಳನ್ನು ಪ್ರತಿಪಾದಿಸಿ ಪ್ರಯೋಗಗೊಳಿಸಿದ್ದರು. ಭಾಷೆ ಕೇಳಿ ಕಲಿಯುವ ವಿಷಯವಾದುದರಿಂದ ವ್ಯಾಕರಣವೂ ಕೇಳಿಯೇ ಕಲಿಯಬೇಕು. ವ್ಯಾಕರಣದ ಸೂತ್ರಗಳನ್ನು ಕಂಠಪಾಟಗೊಳಿಸಿರುವುದರಿಂದ ಭಾಷೆ ಕರಗತ ವಾಗುವುದಿಲ್ಲ. ವ್ಯಾಕರಣದ ಪ್ರಯೋಜನವನ್ನು ಸೂಚ್ಯವಾಗಿ ತಿಳಿಸಿಕೊಡಬೇಕೆ ಹೊರತು ಅದನ್ನು ಪ್ರತ್ಯೇಕ ವಿಷಯವೆಂಬಂತೆ ಹೇಳಿಕೊಡಬೇಕಾಗಿಲ್ಲ. ಹೀಗೆ ಕಾರಂತರ ಒಂದೊಂದು ಬಗೆಯ ಪ್ರಯೋಗಶೀಲತೆಯಲ್ಲಿ ಉತ್ಕೃಷ್ಟ ಗುಣಗಳು ಇದ್ದರೂ ಅವುಗಳನ್ನು ಸರಿಯಾಗಿ ಮೌಲ್ಯಮಾಪನ ಮಾಡಿ ಗ್ರಹಿಸಬಲ್ಲ ವ್ಯವಸ್ಥೆಯನ್ನು ಕಾಣುವುದಿಲ್ಲ. ಶಿಕ್ಷಣ ಕ್ಷೇತ್ರದಲ್ಲಿ ಶಿವರಾಮ ಕಾರಂತರಂತೆ ಕೆಲಸ ಮಾಡಿದ ಅಂದಿನ ಕಾಲದಲ್ಲಿ ಬೇರೆಯವರನ್ನು ಗುರುತಿಸುವುದು ಕಷ್ಟ. ಭಾಷಾ ಬೋಧನೆಯ ಬಗೆಗೂ ಹೇಳಿದರು. ಪಠ್ಯಪುಸ್ತಕಗಳನ್ನು ರಚಿಸಿದರು. ಭಾಷಾವಿಜ್ಞಾನದ ನೆಲೆಯನ್ನು ಕಾರಂತರು ಅಧ್ಯಯನ ಮಾಡದಿದ್ದರೂ ಅದರ ಬಗೆಗೆ ಪುಸ್ತಕ ರಚಿಸಿದರು. ಪ್ರಯೋಗಗಳನ್ನು ನಡೆಸಿದರು. ಇಷ್ಟೇ ಅಲ್ಲದೇ ಭಾಷೆಯನ್ನು ಕಲಿಸುವ ಉದ್ದೇಶವೇನು, ಭಾಷಾ ಬೋಧನೆಯ ಕ್ರಮವೇನು ಎಂಬುದನ್ನು ಹೇಳುತ್ತಲೇ ಅದಕ್ಕೆ ಪೂರಕವೆಂಬಂತೆ ಪಠ್ಯಪುಸ್ತಕ ರಚನೆಯ ಮಹತ್ವವನ್ನು ತಿಳಿಸುತ್ತಾರೆ. ಭಾಷಾ ಪಠ್ಯಪುಸ್ತಕಗಳ ರಚನೆಯ ಮೂಲಕ ಆ ಕ್ಷೇತ್ರದಲ್ಲಿ ಅವರು ಕೈಗೊಂಡ ಪ್ರಯೋಗಗಳು ಹಲವು ಮಿತಿಗಳನ್ನು ಹೊಂದಿರಬಹುದಾದರೂ ಕೂಡ ಇಂದಿಗೂ ಆ ಕ್ಷೇತ್ರದಲ್ಲಿ ಕಾರಂತರ ಚಿಂತನೆಗಳು ಮತ್ತು ಪ್ರಯೋಗಗಳು ಮಾರ್ಗದರ್ಶನ ಪ್ರಯತ್ನವಾಗಿಯೇ ಕಾಣುತ್ತವೆ. ಪಠ್ಯಪುಸ್ತಕಗಳು ಹೇಗೆ ವಿಸ್ತಾರವಾದ ಆಯಾಮವನ್ನು ವಸ್ತುವಿಷಯಗಳಲ್ಲಿ ಪಡೆಯಬಹುದು ಎಂಬುದಕ್ಕೆ ಕಾರಂತರ ಈ ಪಠ್ಯಗಳೇ ಸಾಕ್ಷಿ.

ಕಾರಂತರು ಮಕ್ಕಳಿಗೆ ರಚಿಸಿದ ಪಠ್ಯಪುಸ್ತಕಗಳು ಮಕ್ಕಳಲ್ಲಿ ಕಲಿಯುವಿಕೆಯಲ್ಲಿ ಆಸಕ್ತಿ ಕರವಾಗಿರುವಂತೆ ರಚನೆಯಾಗಿರುವುದು ಕಾಣಬರುತ್ತದೆ. ಸಾಮಾನ್ಯವಾಗಿ ಪಠ್ಯಪುಸ್ತಕ ಎನ್ನುವುದು ಒಂದು ಹೊರೆ ಎಂಬ ಭಾವನೆ ಬರುವಂತಹ ಸಂದರ್ಭದಲ್ಲೇ ಅದೂ ಕೂಡ ಒಂದು ಲವಲವಿಕೆಯ ಉತ್ಸಾಹದ ನಿರೂಪಣೆಯ ಧಾಟಿಯನ್ನು ಹೊಂದಿದ್ದಾಗ ಮಕ್ಕಳಲ್ಲಿ ಆಸಕ್ತಿ ಮೂಡಿಸಲು ಸಾಧ್ಯವಾಗುತ್ತದೆ ಎನ್ನುವುದನ್ನು ಕಾರಂತರು ತೋರಿಸಿಕೊಟ್ಟಿದ್ದಾರೆ.

ಶಿವರಾಮ ಕಾರಂತರು ನಿರಂತರವಾಗಿ ಶಿಕ್ಷಣಕ್ಷೇತ್ರದಲ್ಲಿ ದುಡಿದವರು. ಶಿಕ್ಷಣಕ್ಕೆ ಸಂಬಂಧಿಸಿ ದಂತೆ ಭಾಷಣಗಳನ್ನು ಮಾಡುವಾಗ ತಮ್ಮ ಕಾಲದ ವಿದ್ಯಾಭ್ಯಾಸದ ಲೋಪಗಳನ್ನು ಎತ್ತಿ ತೋರಿಸುತ್ತಿದ್ದರು. ಜೊತೆಗೆ ಶಿಕ್ಷಕರಲ್ಲೂ ಹೊಸ ಬಗೆಯಲ್ಲಿ ಅಭಿರುಚಿಯನ್ನು ಹುಟ್ಟಿಸಲು

'ಬೋಧನೆ' ಎಂಬ ಪರಿಕಲ್ಪನೆಯನ್ನು ಸ್ಪಷ್ಟಪಡಿಸುತ್ತಾ ಮಗುವಿಗೆ ಬೇಕಾದುದು ಎಷ್ಟು ಪ್ರಮಾಣದ ಬೋಧನೆ, ಎಷ್ಟು ಪ್ರಮಾಣ ಪ್ರಚೋದನೆ ಎಂದು ತಿಳಿಸಿಕೊಟ್ಟರು. ಬೋಧನೆಯ ಉದ್ದೇಶ ಮತ್ತು ವಿಧಾನವನ್ನು ತಿದ್ದುವ ಪ್ರಯತ್ನ ಮಾಡಿದ್ದಾರೆ. ಕಾರಂತರು ಸಾರ್ವಜನಿಕ ವೇದಿಕೆಗಳಲ್ಲಿ ಮಾತನಾಡುವಾಗಲೆಲ್ಲಾ ವಿದ್ಯಾಭ್ಯಾಸದ ಮಹತ್ವವನ್ನು ಅರಿವು ಮೂಡಿಸಲು ಪ್ರಯತ್ನಿಸಿದ್ದಾರೆ. ಇದಕ್ಕಾಗಿಯೇ ಸ್ವತಃ ವಯಸ್ಕರಿಗಾಗಿ ಶಿಕ್ಷಣವನ್ನು ಕೊಡುವ ಬೇರೆ ಬೇರೆ ವಿಧಾನಗಳನ್ನು ಶೋಧಿಸುತ್ತಾ ಅವರಿಗಾಗಿ ಪಠ್ಯಗಳನ್ನು ಅನ್ಯ ಪುಸ್ತಕಗಳನ್ನು ಬರೆದರು. ಶಿಕ್ಷಣಕ್ಷೇತ್ರದಲ್ಲೆ ತೊಡಗಿದ ಸಂಶೋಧಕನೊಬ್ಬ ಮಾಡಲಾಗದೇ ಇರುವ ಮಹತ್ವದ ಕೆಲಸವನ್ನು ಕಾರಂತರು ನಿರ್ವಹಿಸಿದ್ದಾರೆ.

ಲೀಲಾ ಕಾರಂತರು ಹೇಳುವಂತೆ ಕಾರಂತರು ನಿಜವಾಗಿ ಕಾರಂತರಲ್ಲ. ಕುಶಲಿಯಾದೊಬ್ಬ ನಟ. ನಟನಂತೆ ಜೀವನ ನಾಟಕವನ್ನು ಅಭಿನಯಿಸುತ್ತಾರೆ. ಅಲ್ಲದಿದ್ದರೆ ಒಂದೇ ಜೀವನದಲ್ಲಿ ಒಂದೇ ಬಾಳಲ್ಲಿ ಇಷ್ಟೆಲ್ಲಾ ಮಾಡಲು ಸಾಧ್ಯವೆ? ಒಂದೇ ಜೀವಿಯಿಂದ ಇಷ್ಟೆಲ್ಲಾ ಆಗುವುದುಂಟೆ? ಇದು ಒಂದು ದೊಡ್ಡ ಸಮಸ್ಯೆ. ಬಿಡಿಸಲಾರದ ಒಗಟು, ನಡೆಯುವುದು ಎಲ್ಲವೂ ನಾಟಕದಂತೆ, ಕಾರಂತರು ಹಿನ್ನೆಲೆಯಲ್ಲಿ ತೆರೆಯ ಮರೆಯಲ್ಲಿ ನಿಶ್ಚಲರು.

ಕಾರಂತರನ್ನು ಏನೆನ್ನಬೇಕು? ಚಿತ್ರಕಾರನೆ, ಶಿಲ್ಪಿಯೆ, ಗಾಯಕನೆ, ನರ್ತಕನೆ, ಸಾಹಿತಿಯೆ, ನಟನೆ, ಏನು ಏನು? ಹೀಗೆ ಎಂದು ಹೇಳುವುದಕ್ಕೆ ಕಷ್ಟ. ಕಾರಂತರು ಸಪ್ತವರ್ಣದ ಕಾಮನಬಿಲ್ಲು. ಆದರೆ ನಟನೆಂದು ಹೇಳುವ ಮನಸ್ಸು. ಎಲ್ಲವನ್ನೂ ನಟಿಸುವುದೇ ಜೀವನವೇ ಅವರ ರಂಗಭೂಮಿ. ನಿಜವಾದ ಕಾರಂತ ಏನು ಎಂಬ ಅರಿವು ಯಾರಿಗೂ ಇಲ್ಲ. ಸ್ವತಃ ಅವರಿಗಾದರೂ ಇಲ್ಲವೋ! ಎಂದು ಹೇಳುತ್ತಾರೆ.(ಅಶೋಕ ಟಿ.ಪಿ., ೧೯೯೩, ಕನ್ನಡ ಸಾಹಿತ್ಯ ಈ ಶತಮಾನದ ನೋಟ, ಪು. ೩೦೬)

ಕಾರಂತರು ಪಡೆದ ಜ್ಞಾನವನ್ನು ಜೀವನಾನುಭವದ ಜೊತೆಗೆ ಹೊಂದಿಸಿಕೊಳ್ಳುವುದು ಹೇಗೆ ಎಂಬುದರ ಬಗ್ಗೆ ಮಾತನಾಡುತ್ತಾರೆ. ವಿವೇಚನಾ ಶಕ್ತಿ ವಿಕಾಸವಾಗಬೇಕಾದರೆ ಮಗುವಿನಲ್ಲಿ ಕುತೂಹಲವನ್ನು ಬೆಳೆಸಬೇಕು. ಹಾಗೆ ಉಂಟಾಗುವ ಕುತೂಹಲವೇ ಜೀವನದ ಸಂದರ್ಭದಲ್ಲೂ ಬಳಕೆಯಾಗುತ್ತದೆ. ಕುತೂಹಲ ಹುಟ್ಟದೆ ಏನನ್ನೂ ಹೇಳಿಕೊಡಬೇಕಾಗಿಲ್ಲ ಎನ್ನುವ ಮಾತು ಶಿಕ್ಷಣದ ಪೂರ್ಣತೆಯ ತಿಳಿವಳಿಕೆಯಾಗಿ ಕಾಣುತ್ತದೆ. ಕಾರಂತರ ಶಿಕ್ಷಣದ ಚಿಂತನೆ ಮತ್ತು ಪ್ರಯೋಗಶೀಲತೆಯಲ್ಲಿ ಬಹಳ ಗಂಭೀರವಾಗಿ ಗಮನಿಸಬೇಕಾದ ಮುಖ್ಯ ಅಂಶಗಳಿವೆ. ಶಿಕ್ಷಣ ಕ್ಷೇತ್ರದಲ್ಲಿ ಈ ಬಗೆಯ ತಜ್ಞತೆಯನ್ನು ಕಾರಂತರು ಸಂಪಾದಿಸಲು ಬಹಳ ಮುಖ್ಯ ಕಾರಣ ಅವರು ಬಹಳ ದೀರ್ಘಕಾಲದಿಂದ ಮಕ್ಕಳ ಶಿಕ್ಷಣದ ಸಮಸ್ಯೆಯನ್ನು ಕಂಡಿದ್ದರು. ತನ್ನ

ಬಾಲ್ಯದಲ್ಲಿ ಅವರೂ ಕೂಡ ಅನುಭವಿಸಿದ್ದರು. ಕಾರಂತರಿಗೆ ಜಗತ್ತಿನ ನಾನಾ ಭಾಗಗಳ ಅರಿವಿತ್ತು. ಈ ತಿಳಿವಳಿಕೆಯ ಕಾರಣದಿಂದಲೇ ಅವರು ಬಾಲಪ್ರಪಂಚ, ವಿಜ್ಞಾನಪ್ರಪಂಚ, ಪ್ರಾಣಿಪ್ರಪಂಚದಂತಹ ವಿಶ್ವಕೋಶಗಳನ್ನು ರಚಿಸಲು ಸಾಧ್ಯವಾದುದು. ನಿರಂತರವಾದ ಉತ್ಸಾಹ ದಣಿವಾಗದ ವ್ಯಕ್ತಿತ್ವ ಅವರದಾಗಿತ್ತು. ಪ್ರತಿಯೊಂದು ಸಂಗತಿಯನ್ನು ಮತ್ತೆ ಮತ್ತೆ ಪ್ರಯೋಗ ಮಾಡಿ, ಅಳೆದು ತೂಗಿ ನೋಡುವ ಸ್ವಭಾವ ಅವರಲ್ಲಿತ್ತು. ತಮ್ಮ ಕಾಲದ ಸಾರ್ವಜನಿಕರ ಸಹಕಾರ, ಸರಕಾರದ ಇಲಾಖೆಗಳ ಸಹಕಾರ ಇವರಿಗೆ ಹೇಳಿಕೊಳ್ಳುವ ಮಟ್ಟಿಗೆ ದೊರೆಯಲಿಲ್ಲ. ಆದ್ದರಿಂದ ಅವರ ಪ್ರಯೋಗಗಳಿಗೆ ಕೆಲವೊಂದು ಮಿತಿಗಳನ್ನು ತಂದೊಡ್ಡಿತು. ಸರಕಾರದ ಸಹಾಯವೇ ಇಲ್ಲದೆ ಇನ್ನೂ ಕೆಲವೊಮ್ಮೆ ಸರಕಾರದ ಅಡ್ಡಿಗಳ ಹೊರತಾಗಿಯೂ ಸ್ವಂತ ಪರಿಶ್ರಮ ಮತ್ತು ಕೆಲವೇ ಹಿತಾಕಾಂಕ್ಷಿಗಳ ಆರ್ಥಿಕ ಸಹಕಾರದಿಂದ ಈ ಪ್ರಯೋಗಗಳನ್ನು ನಡೆಸಿಕೊಂಡು ಹೋಗಬೇಕಾಯಿತು.

ಶಿವರಾಮ ಕಾರಂತರು ತಮ್ಮನ್ನು ಕೇವಲ ಕಾದಂಬರಿಗಳ ಬರವಣಿಗೆಗೆ ಸೀಮಿತಗೊಳಿಸಿ ಕೊಂಡವರಲ್ಲ. ಕಲೆ, ವಿಜ್ಞಾನ, ಪ್ರವಾಸ, ಆತ್ಮಕಥನ, ಜೀವನಚರಿತ್ರೆ, ಹೀಗೆ ಹಲವಾರು ಕ್ಷೇತ್ರಗಳಲ್ಲಿ ಕೃಷಿ ಮಾಡಿದ್ದಾರೆ. ಶಿಕ್ಷಣಕ್ಷೇತ್ರದಲ್ಲಿ ಹಲವಾರು ಪ್ರಯೋಗಗಳನ್ನು ನಡೆಸಿದ್ದಾರೆ. ಮೇಡಂ ಮಾಂಟೆಸರಿ, ಪಿ.ಬಿ. ಬಲ್ಲಾರ್ಡ್‌ನಾಥ್ ಶಿಕ್ಷಣತಜ್ಞರ ವಿಚಾರಧಾರೆಯನ್ನು ಅರಗಿಸಿ ಕೊಂಡು ಸ್ವತಂತ್ರವಾದ ಹಾದಿಯಲ್ಲಿ ನಡೆದರು. ಕನ್ನಡ ಸಾಹಿತ್ಯದಲ್ಲಿ ಶಿವರಾಮ ಕಾರಂತರ ಹಾಗೆ ಶಿಕ್ಷಣದ ಬಗ್ಗೆ ಯೋಚನೆ ಮಾಡಿದ ಪ್ರಯೋಗಗಳನ್ನು ಮಾಡಿದ ಹಾಗೆ ಇನ್ನೋರ್ವ ಸಾಹಿತಿ ಕನ್ನಡದಲ್ಲಿಲ್ಲ ಎಂದೇ ಹೇಳಬಹುದು. ಶಿಕ್ಷಣ ಕ್ಷೇತ್ರದ ವಿವಿಧ ವಿಭಾಗಗಳಾದ ಪೂರ್ವ ಪ್ರಾಥಮಿಕ, ಪ್ರಾಥಮಿಕ, ಪ್ರೌಢಶಾಲಾ ವ್ಯಾಸಂಗ, ವಯಸ್ಕಶಿಕ್ಷಣ, ಭಾಷಾಶಿಕ್ಷಣ, ನೀತಿಶಿಕ್ಷಣ ಪಠ್ಯಪುಸ್ತಕಗಳ ರಚನೆ, ಇತ್ಯಾದಿಗಳ ಕುರಿತು ಆಳವಾಗಿ ಚಿಂತನೆ ಮಾಡಿದ್ದಾರೆ. ಈ ಕುರಿತು ಅವರ ಹಲವಾರು ಶೈಕ್ಷಣಿಕ ಬರಹಗಳನ್ನು, ಬಿಡಿ ಲೇಖನಗಳನ್ನು, ಭಾಷಣಗಳನ್ನು, ಪಠ್ಯಪುಸ್ತಕಗಳನ್ನು ಕಾಣಬಹುದು. ಶಿವರಾಮ ಕಾರಂತರ ದೃಷ್ಟಿಯಲ್ಲಿ ವ್ಯಕ್ತಿಯೇ ಮುಖ್ಯ. ಅವನು ಬೆಳೆದರೆ ಆತನ ಬಾಳು ಬೆಳಗುತ್ತದೆ. ಎನ್ನುತ್ತಾರೆ. ಕಾರಂತರ ದೃಷ್ಟಿಯಲ್ಲಿ ನಿಜವಾದ ಶಿಕ್ಷಣದ ಸಾರ್ಥಕತೆ ಇರುವುದು ಅಂತರಂಗದ ವಿಕಸನದಲ್ಲಿ, ವ್ಯಕ್ತಿಯ ಸ್ವಂತ ಜೀವನಕ್ಕೆ ಬೇಕಾದ ವೃತ್ತಿ ಶಿಕ್ಷಣ ಕೊಡುವುದು ಶಿಕ್ಷಣದ ಒಂದು ಮುಖವಾದರೆ ಸಾಮಾಜಿಕ ತಿಳಿವಳಿಕೆ ಒದಗಿಸುವುದು ಅದರ ಇನ್ನೊಂದು ಮುಖವಾಗಿದೆ. ವ್ಯಕ್ತಿಯು ಸಮಾಜ ಮತ್ತು ದೇಶದೊಡನೆ ಹೊಂದಿ ಕೊಳ್ಳುವುದಕ್ಕೆ ಬೇಕಾದ ಸತ್‌ಶೀಲವನ್ನು ರೂಪಿಸುವುದು ಶಿಕ್ಷಣದ ಮೂರನೆಯ ಮುಖ. ಈ ಮೂರು ಮುಖಗಳುಳ್ಳ ಶಿಕ್ಷಣ ಎಲ್ಲರಿಗೂ ದೊರಕಬೇಕೆಂಬುದೇ ಕಾರಂತರ ಚಿಂತನೆಯಾಗಿತ್ತು. ಇದು ಇಂದಿಗೂ ಪ್ರಸ್ತುತವೆನಿಸುತ್ತದೆ.

**ಈ ಅಧ್ಯಯನದಿಂದ ಕಂಡುಕೊಂಡ ಫಲಿತಗಳು**

**ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಮತ್ತು ಪ್ರಯೋಗ** ಇದು ಪ್ರಸ್ತುತ ಅಧ್ಯಯನದ ಶೀರ್ಷಿಕೆಯಾಗಿದೆ. ಶಿವರಾಮ ಕಾರಂತರನ್ನು ಕಾದಂಬರಿಕಾರರಾಗಿ ಗ್ರಹಿಸಿಕೊಂಡು ಇದುವರೆಗೆ ನಡೆದ ಅಧ್ಯಯನಗಳಿಗಿಂತ ಪ್ರಸ್ತುತ ಅಧ್ಯಯನವು ಭಿನ್ನವಾಗಿದೆ. ಈ ಅಧ್ಯಯನದಿಂದ ಕಂಡುಕೊಂಡ ಮುಖ್ಯವಾದ ಫಲಿತಗಳನ್ನು ಈ ಕೆಳಗಿನಂತೆ ಗುರುತಿಸ ಲಾಗಿದೆ.


- **ವಸಾಹತುಶಾಹಿ ಶಿಕ್ಷಣ: ಶಿವರಾಮ ಕಾರಂತರ ಪ್ರತಿಕ್ರಿಯೆ ಮತ್ತು ಪ್ರಯೋಗ** ಇದು ಪ್ರಸ್ತುತ ಅಧ್ಯಯನದ ಶೀರ್ಷಿಕೆಯಾಗಿದೆ. ಶಿವರಾಮ ಕಾರಂತರನ್ನು ಕಾದಂಬರಿಕಾರರಾಗಿ ಗ್ರಹಿಸಿಕೊಂಡು ಇದುವರೆಗೆ ನಡೆದ ಅಧ್ಯಯನಗಳಿಗಿಂತ ಪ್ರಸ್ತುತ ಅಧ್ಯಯನವು ಭಿನ್ನವಾಗಿದೆ. ಈ ಅಧ್ಯಯನದಿಂದ ಕಂಡುಕೊಂಡ ಮುಖ್ಯವಾದ ಫಲಿತಗಳನ್ನು ಈ ಕೆಳಗಿನಂತೆ ಗುರುತಿಸ ಲಾಗಿದೆ.

- ಶಿವರಾಮ ಕಾರಂತರು ರೂಪಿಸಿದ ಶೈಕ್ಷಣಿಕ ವಿಚಾರಧಾರೆ ಮತ್ತು ಅವರು ಮಾಡಿರುವ ವಿವಿಧ ರೀತಿಯ ಶೈಕ್ಷಣಿಕ ಪ್ರಯೋಗಗಳು ಇಂದಿಗೂ ಪ್ರಸ್ತುತವೆನಿಸಿರುವುದು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.
- ಶಿವರಾಮ ಕಾರಂತರ ಶೈಕ್ಷಣಿಕ ಚಿಂತನೆ ಮತ್ತು ಪ್ರಯೋಗಗಳ ಮುಖ್ಯ ಉದ್ದೇಶ ಮಕ್ಕಳಿಗೆ ಕಲಿಕೆ ಎನ್ನುವುದು ಯಾವುದೇ ಸಂದರ್ಭದಲ್ಲೂ ಹೊರೆಯಾಗದಂತೆ ಬದಲಾಯಿಸಿ ಆಟದಿಂದ ಪಾಠ ಎಂಬ ವಿಧಾನವನ್ನು ವಿವಿಧ ರೀತಿಯ ಪ್ರಯೋಗಗಳಿಂದ ತಿಳಿಸಿಕೊಟ್ಟಿರು ವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.
- ಕಾರಂತರ ಚಿಂತನೆಯ ನೆಲೆಗಳು ಕೇವಲ ಚಿಂತನೆಯ ಸ್ವರೂಪದಲ್ಲೇ ಉಳಿಯದೆ ಅವುಗಳಿಗೆ ಒಂದು ಪ್ರಾಯೋಗಿಕ ಸನ್ನಿವೇಶವೊಂದನ್ನು ಸೃಷ್ಟಿಸಿಕೊಂಡಿರುವುದು ಕಂಡು ಬರುತ್ತದೆ. ಮಕ್ಕಳಿಗೆ ಭಾವನೆಗಳನ್ನು ಪ್ರಕಟಿಸಲು ಅನುಕೂಲವಾಗುವ ರೀತಿಯಲ್ಲಿ ಶಿಕ್ಷಣವು ಚಿಕ್ಕಂದಿನಿಂದಲೂ ದೊರೆಯಬೇಕು. ನಾಟಕ, ಸಂಗೀತ, ಕವಿತೆ, ಚಿತ್ರಲೇಖನ ಮೊದಲಾದವು ಶಿಕ್ಷಣದ ಜೀವಾಳವಾಗಿರಬೇಕು ಎಂಬುದು ಕಾರಂತರ ಮುಖ್ಯ ಆಶಯವಾಗಿರುವುದು ಅವರ ಬರಹಗಳಿಂದ ತಿಳಿದು ಬರುತ್ತದೆ.
- ಕಾರಂತರು ಪಾಶ್ಚಾತ್ಯ ಗ್ರಂಥಗಳ ಓದಿನಿಂದ ಪ್ರಭಾವಿತರಾದರೂ ಪೂರ್ವ ಪ್ರಾಥಮಿಕ ಮತ್ತು ಪ್ರಾಥಮಿಕ ಶಿಕ್ಷಣದಲ್ಲಿ ಮಕ್ಕಳನ್ನು ಶಾಲೆಯ ಗೋಡೆಗಳ ಮಧ್ಯೆ ಶಿಕ್ಷಣವನ್ನು ಕಲಿಸುವ ಬದಲು ನಿಸರ್ಗದ ಜೊತೆ ಬೆಳೆಯುವಂತೆ ಅನುಕೂಲ ಮಾಡಿಕೊಡಬೇಕು.

ಗಿಡಮರಗಳನ್ನು ಪರಿಚಯಿಸುವುದು ಪ್ರಾಣಿಪಕ್ಷಿಗಳ ಹೆಸರುಗಳನ್ನು ತಿಳಿಸುವುದರ ಮೂಲಕ ಮಕ್ಕಳಲ್ಲಿ ಆಸಕ್ತಿಯನ್ನು ಬೆಳೆಯಿಸಬೇಕೆಂಬ ವಿಚಾರಗಳು, ಶಿಕ್ಷಣ ಸುಧಾರಣೆಗೆ ಇಲ್ಲಿನ ಸ್ಥಿತಿಗತಿಗಳ ನೆಲೆಯಿಂದಲೇ ವಿವೇಚಿಸಿರುವುದನ್ನು ಈ ಅಧ್ಯಯನದ ಮೂಲಕ ಕಂಡು ಕೊಳ್ಳಲಾಗಿದೆ.

- ಶಿಕ್ಷಣವೆನ್ನುವುದು ಕೇವಲ ಕಂಠಪಾಠಕ್ಕೆ ಮಾತ್ರ ಸೀಮಿತವಾಗದೆ ಮಕ್ಕಳ ಮನೋವಿಕಾಸವನ್ನು ಬೆಳೆಸುವಂತಹ ಒಂದು ಮಾಧ್ಯಮವಾಗಬೇಕು ಎಂಬುದು ಕಾರಂತರ ಮುಖ್ಯ ಧೋರಣೆ ಯಾಗಿತ್ತು

- ಕಾರಂತರಂತೆ ಕುವೆಂಪು ಮತ್ತು ಗೋಪಾಲಕೃಷ್ಣ ಅಡಿಗ, ತೇಜಸ್ವಿ ಮುಂತಾದವರು ಶಿಕ್ಷಣ ಕುರಿತ ಚಿಂತನೆ ಮಾಡಿದವರಲ್ಲಿ ಮುಖ್ಯರು. ಪರಂಪರೆ ಮತ್ತು ಶಿಕ್ಷಣವನ್ನು ಕುರಿತು ತೀವ್ರವಾಗಿ ಚರ್ಚಿಸಿದ್ದಾರೆ. ಕುವೆಂಪು ಅವರು ಸಂಪ್ರಾದಾಯಿಕ ಶಿಕ್ಷಣ ಪದ್ಧತಿಯ ತಾರತಮ್ಯತೆಯನ್ನು ಅದರ ಭಾಗವಾದ ಜಾತಿಯ ಪ್ರಶ್ನೆಗಳನ್ನು ಪುರಾಣದ ಪ್ರತಿಮೆಗಳ ಮೂಲಕ ವಿಶ್ಲೇಷಣೆಗೆ ಒಳಪಡಿಸಿದರು. ಹಾಗೆಯೇ ಆಧುನಿಕ ಶಿಕ್ಷಣ ಪದ್ಧತಿಯ ಲೋಪದೋಷಗಳನ್ನು ತಿದ್ದಿ ಸುಧಾರಣೆಗಳನ್ನು ತರಲು ಪ್ರಯತ್ನಿಸಿದರು.

- ಅಡಿಗರು ಸ್ವಾತಂತ್ರ್ಯನಂತರದ ಶಿಕ್ಷಣದ ಇತಿಮಿತಿಗಳನ್ನು ಕುರಿತು ಹಲವಾರು ಲೇಖನಗಳನ್ನು ಬರೆದಿದ್ದಾರೆ. ಆ ಬರಹಗಳಲ್ಲಿ ಭಾಷೆಯ ಶಿಕ್ಷಣ ಪದ್ಧತಿಯ ಲೋಪದೋಷಗಳನ್ನು ವಿಶ್ಲೇಷಿಸಿ ಅದರ ಮುನ್ನಡತೆಗೆ ಬೇಕಾದ ಹಲವಾರು ಮಾರ್ಗಗಳನ್ನು ಚಿಂತಿಸಿದ್ದಾರೆ ಎಂಬುದನ್ನು ಈ ಅಧ್ಯಯನದ ಸಂದರ್ಭದಲ್ಲಿ ನಾನು ಮನಗಂಡಿದ್ದೇನೆ.

- ಕನ್ನಡದ ಮುಖ್ಯ ಲೇಖಕರಲ್ಲಿ ಒಬ್ಬರಾದ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಅವರು ತಮ್ಮ ಅನೇಕ ಬರಹಗಳಲ್ಲಿ ಆಧುನಿಕ ಶಿಕ್ಷಣದ ಸ್ವರೂಪವನ್ನು ಕುರಿತು ಚಿಂತಿಸಿದ್ದಾರೆ. ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಮಾತೃಭಾಷೆಯಲ್ಲಿಯೇ ಮಗುವಿಗೆ ಕಲಿಸಬೇಕು, ಇಂಗ್ಲಿಷ್ ಮಾಧ್ಯಮವನ್ನು ಹೇರುವ ಮೂಲಕ ಮಕ್ಕಳ ಸೃಜನಶೀಲತೆಯನ್ನು ಕುಂಠಿತಗೊಳಿಸಬಾರದು. ಪ್ರಾಥಮಿಕ ಮಕ್ಕಳ ಶಿಕ್ಷಣವನ್ನು ಕುರಿತು ಅವರ ಚಿಂತನೆಗಳನ್ನು ಈ ಅಧ್ಯಯನದ ಸಂದರ್ಭದಲ್ಲಿ ಮನಗಂಡಿದ್ದೇನೆ.

- ತಂದೆ ತಾಯಿಗಳು ತಮ್ಮ ಹಳಹಲಿಕೆಯ ಹೊರೆಯನ್ನು ಮಕ್ಕಳ ಮೇಲೆ ಹೇರುತ್ತಿದ್ದಾರೆ. ಇವರ ಮನೋಸ್ಥಿತಿಯನ್ನು ಇಂದಿನ ಶಿಕ್ಷಣ ಸಂಸ್ಥೆಗಳು ವ್ಯಾಪಾರಿಕೇಂದ್ರಗಳಾಗಿ ಮಾರ್ಪಡಿಸಿವೆ. ಕಾರಂತರ ಚಿಂತನೆಗಳು ಇಂತಹ ಶಿಕ್ಷಣದ ನಿರಾರ್ಥಕತೆಯನ್ನು ಚರ್ಚಿಸಿವೆ.

- ಶಿವರಾಮ ಕಾರಂತರ ಪ್ರಯೋಗಗಳ ಬಹುಮುಖ್ಯ ಲಕ್ಷಣಗಳ ಒಂದು ಮುಖ್ಯ ಸಂಗತಿ ಎಂದರೆ ಎಲ್ಲೂ ಕೂಡ ಕಲಿಸಿ ಕೊಡುವುದು ಎಂಬ ಭಾವನೆ ಇಲ್ಲ. ಬದಲಾಗಿ ಕಲಿಕೆಗೆ ಬೇಕಾದ ಕುತೂಹಲವನ್ನು ಅರಳಿಸುವುದು ಅವರ ಪ್ರಯೋಗಗಳಲ್ಲಿ ಕಂಡುಬರುತ್ತದೆ.
- ಭೂಗೋಳ, ಗಣಿತ, ವಿಜ್ಞಾನ, ಭಾಷಾ ಪಾಠ, ಮಕ್ಕಳ ಸಾಹಿತ್ಯ ಮೊದಲಾದ ಹಲವು ಜ್ಞಾನ ಶಿಸ್ತುಗಳ ಮೂಲಕ ಹೊಸ ಮಾದರಿಯನ್ನು ಶಿಕ್ಷಣದಲ್ಲಿ ಭಾಷೆ ಹೇಗಿರಬೇಕು, ವಾಕ್ಯ ರಚನೆ ಹೇಗಿರಬೇಕು ಎಂಬುದರ ಕುರಿತು ಸಲಹೆಗಳನ್ನು ನೀಡುವುದರ ಜೊತೆಗೆ ತಾವೇ ಸ್ವತಃ ಸಿರಿಗನ್ನಡ ಪಾಠಮಾಲೆ, ಹೊಸಗನ್ನಡ ಪಾಠಮಾಲೆ ಎಂಬ ಮಕ್ಕಳ ಪುಸ್ತಕಗಳನ್ನು ರಚಿಸಿ, ಈ ಪುಸ್ತಕದಲ್ಲಿ ಕ್ಲಿಷ್ಟ ಶಬ್ದಗಳನ್ನು ಕಡಿಮೆ ಮಾಡಿ, ಭಾಷೆಯ ಸರಳ ನುಡಿಗಟ್ಟುಗಳ ಮೂಲಕ ಪ್ರಯೋಗಗಳನ್ನು ಕೈಗೊಂಡಿದ್ದಾರೆ. ಮಕ್ಕಳ ಬಗ್ಗೆ ಅವರಿಗಿದ್ದ ಅಪಾರವಾದ ಕಾಳಜಿವಹಿಸಿ ಬಾಲವನವನ್ನು ನಿರ್ಮಿಸಿರುವುದು ಕಂಡು ಬರುತ್ತದೆ. ಈ ಎಲ್ಲಾ ಅಂಶಗಳನ್ನು ಆಧರಿಸಿ ಕಾರಂತರೂ ಒಬ್ಬ ಶಿಕ್ಷಣತಜ್ಞರೆಂದು ಹೇಳಬಹುದಾಗಿದೆ.

# ಅನುಬಂಧಗಳು

೧. ಮೂಲ ಆಕರಗಳು

೨. ಪೂರಕ ಆಕರಗಳು

೩. ಕಾರಂತರ ಶೈಕ್ಷಣಿಕ ಪ್ರಯೋಗಗಳು

# ಅನುಬಂಧಗಳು

## ೧. ಮೂಲ ಆಕರಗಳು

೧. ಮಾಲಿನಿ ಮಲ್ಯ ಬಿ.(ಸಂ), ೧೯೯೩, **ವ್ಯಕ್ತಿ ಚಿತ್ರಗಳು ವಿಮರ್ಶೆಗಳು, ಸಂ–೧,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೨. ಮಾಲಿನಿ ಮಲ್ಯ ಬಿ.(ಸಂ), ೧೯೯೪, **ಭಾಷೆ ಶಿಕ್ಷಣ ಸಂಸ್ಕೃತಿ ಸಂಶೋಧನೆ, ಸಂ-೨,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೩. ಮಾಲಿನಿ ಮಲ್ಯ ಬಿ. (ಸಂ), ೧೯೯೪, **ಕಲಾ ಜಗತ್ತು ಸಂ–೩,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೪. ಮಾಲಿನಿ ಮಲ್ಯ ಬಿ. (ಸಂ), ೧೯೯೪, **ಅನುಭವಗಳು ಮತ್ತು ಸಾಹಿತ್ಯ ಚಿಂತನೆ, ಸಂ–೪,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೫. ಮಾಲಿನಿ ಮಲ್ಯ ಬಿ. (ಸಂ), ೧೯೯೪, **ವೈಚಾರಿಕ ಬಿಡಿ ಬರಹಗಳು, ಸಂ-೫,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೬. ಮಾಲಿನಿ ಮಲ್ಯ ಬಿ. (ಸಂ), ೧೯೯೪, **ಐತಿಹಾಸಿಕ ರಾಜಕೀಯ ವಿಚಾರಗಳು, ಸಂ–೬,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೭. ಮಾಲಿನಿ ಮಲ್ಯ ಬಿ. (ಸಂ), ೧೯೯೪, **ನಾಡು ನಿಸರ್ಗ, ಪರಿಸರ, ಸಂ–೭,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೮. ಮಾಲಿನಿ ಮಲ್ಯ ಬಿ. (ಸಂ), ೧೯೯೪, **ಸೃಜನಶೀಲ ಬಿಡಿ ಬರಹಗಳು, ಸಂ–೮,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೯. ಶಿವರಾಮ ಕಾರಂತ, ೧೯೮೪, **ಹುಚ್ಚುಮನಸ್ಸಿನ ಹತ್ತು ಮುಖಗಳು,** ಅಕ್ಷರ ಪ್ರಕಾಶನ, ಸಾಗರ.

೧೦. ಶಿವರಾಮ ಕಾರಂತ, ೧೯೩೬, **ಬಾಲಪ್ರಪಂಚ ಭಾಗ-೧, ೨, ೩** ಸತ್ಯಶೋಧನ ಪ್ರಕಟಣ ಮಂದಿರ, ಬೆಂಗಳೂರು.

೧೧. ಶಿವರಾಮ ಕಾರಂತ, ೧೯೯೫, **ವಿಜ್ಞಾನ ಪ್ರಪಂಚ ಭಾಗ-೧, ೨, ೩, ೪,** ಹರ್ಷ ಮುದ್ರಣ ಪ್ರಕಟಣಾಲಯ, ಪುತ್ತೂರು.

೧೨. ಶಿವರಾಮ ಕಾರಂತ, ೧೯೯೦, **ಪ್ರಾಣಿಪ್ರಪಂಚ,** ಅಕ್ಷರ ಪ್ರಕಾಶನ, ಸಾಗರ.

೧೩. ಶಿವರಾಮ ಕಾರಂತ, ೧೯೯೫, ಸಿರಿಗನ್ನಡ **ಪಾಠಮಾಲೆ ಓದುವ ಆಟ–೨,** ಎಸ್ ಬಿ ಎಸ್ ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

೧೪. ಶಿವರಾಮ ಕಾರಂತ, ೧೯೯೫, ಸಿರಿಗನ್ನಡ **ಪಾಠಮಾಲೆ ಓದುವ ಆಟ–೩,** ಎಸ್ ಬಿ ಎಸ್ ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

೧೫. ಶಿವರಾಮ ಕಾರಂತ, ೨೦೦೭, **ಗಜರಾಜ,** ಸೀತಾ ಬುಕ್ ಸೆಂಟರ್, ಉಡುಪಿ.

೧೬. ಶಿವರಾಮ ಕಾರಂತ, ೨೦೦೧, **ಢಂ ಢಂ ಢೋಲು ಶಿಶುಗೀತೆಗಳು ಅಭಿನಯ ಗೀತೆಗಳು,** ಸಪ್ನ ಬುಕ್ ಹೌಸ್, ಬೆಂಗಳೂರು.

೧೭. ಶಿವರಾಮ ಕಾರಂತ, ೨೦೦೭, **ಅರಸಿಕರಲ್ಲ,** ಸಪ್ನ ಬುಕ್ ಹೌಸ್, ಬೆಂಗಳೂರು.

೧೮. ಶಿವರಾಮ ಕಾರಂತ, ೨೦೧೧, **ಅಪೂರ್ವ ಪಶ್ಚಿಮ,** ಸಪ್ನ ಬುಕ್ ಹೌಸ್, ಬೆಂಗಳೂರು.

೧೯. ಶಿವರಾಮ ಕಾರಂತ, ೨೦೦೨, **ಪಕ್ಷಿಗಳ ಅದ್ಭುತ ಲೋಕ,** ಜಡಭರತ ಪ್ರಕಾಶನ, ಧಾರವಾಡ.

೨೦. ಶಿವರಾಮ ಕಾರಂತ, ೧೯೮೩, **ಬಾಳ್ವೆಯೇ ಬೆಳಕು,** ಸಾಹಿತ್ಯ ಭಂಡಾರ, ಹುಬ್ಬಳ್ಳಿ.

## ೨. ಪೂರಕವಾದ ಆಕರಗಳು


೧. ಅನಂತನಾರಾಯಣ ಎಸ್., ೧೯೯೨, **ಕಾರಂತರ ಕಾದಂಬರಿಗಳಲ್ಲಿ ನಿಸರ್ಗ,** ಕರ್ನಾಟಕ ಸಂಘ, ಪುತ್ತೂರು.

೨. ಅರವಿಂದ ಚೊಕ್ಕಾಡಿ, **ಶಿಕ್ಷಣದಲ್ಲಿ ವ್ಯಕ್ತಿತ್ವ ವಿಕಾಸ,** ೨೦೦೭, ಸುಮುಖ ಪ್ರಕಾಶನ, ಬೆಂಗಳೂರು.

೩. ಅಶೋಕ ಟಿ.ಪಿ. ೧೯೯೨, **ಶಿವರಾಮ ಕಾರಂತ ಎರಡು ಅಧ್ಯಯನಗಳು,** ಅಕ್ಷರ ಪ್ರಕಾಶನ, ಹೆಗ್ಗೋಡು,

೪. ಅಶೋಕ ಟಿ.ಪಿ.(ಸಂ), ೧೯೯೩, **ಶಿವರಾಮ ಕಾರಂತ ಈ ಶತಮಾನದ ನೋಟ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಅಶೋಕ ಟಿ.ಪಿ., ೧೯೯೦, **ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಆಧುನೀಕರಣದ ಪ್ರಕ್ರಿಯೆ,** ಕರ್ನಾಟಕ ಸಂಘ, ಪುತ್ತೂರು.

೬. ಅಶೋಕ ಟಿ.ಪಿ.(ಸಂ), ೧೯೯೩, **ಶಿವರಾಮ ಕಾರಂತ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಇನಾಂದಾರ್ ವಿ.ಎಂ., ೧೯೮೨, **ಶಿವರಾಮ ಕಾರಂತರ ಬದುಕು ಬರಹ,** ಉಷಾ ಸಾಹಿತ್ಯ ಮಾಲೆ, ಮೈಸೂರು.

೮. ಉಮಾಶಂಕರ್ ಪೆರಿಯೋಡಿ(ಸಂ), ೧೯೯೭, **ತೆರೆ, ಆರು ಶೈಕ್ಷಣಿಕ ಬರಿಗಾಲ ಸಂಶೋಧನೆಗಳ ಸಂಕಲನ,** ಸಂಗತಿ, ಮಂಗಳೂರು.

೯. ಗಜೇಂದ್ರಗಡ ಶ್ಯಾಮರಾಯ(ಅನು), ಕಾಶ್ಯಪ ಆರ್.ಎ.(ಮೂಲ), ೧೯೭೭, **ಭಾರತೀಯ ಶಿಕ್ಷಣ ಮೀಮಾಂಸೆ,** ದ್ವೈಪಾಯನ ಟ್ರಸ್ಟ್, ಮುಂಬಯಿ.

೧೦. ಕುಮಾರ್ ಟಿ.ಎಂ., ೨೦೧೧, **ಸಮಕಾಲೀನ ಶಿಕ್ಷಣ ಚರ್ಚೆಗಳು,** ಸಪ್ನ ಬುಕ್ ಹೌಸ್, ಬೆಂಗಳೂರು.

೧೧. ಕುರಾಡಿ ಸೀತಾರಾಮ ಅಡಿಗ, ೨೦೦೧, **ಬದ್ಧತೆಯ ಬದುಕು,** ಶಿವರಾಮ ಕಾರಂತ ಅಧ್ಯಯನ ಕೇದ್ರ, ವಿವೇಕಾನಂದ ಕಾಲೇಜು, ಪುತ್ತೂರು.

೧೨. ಕುಲಕರ್ಣಿ ವ್ಹಿ. ಎಸ್, ೧೯೮೪, **ಆಧುನಿಕ ಶಿಕ್ಷಣದ ಅರ್ಥ ವಿಸ್ತಾರ,** ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ.

೧೩. ಕೋಣಿ ಶಿವಾನಂದ ಕಾರಂತ, ೨೦೧೧, **ಕಡಲ ತಡಿಯ ಭಾರ್ಗವ,** ಕಾಂತಾವರ ಕನ್ನಡ ಸಂಘ(ರಿ), ಉಡುಪಿ.

೧೪. ಸೀತಾರಾಮಯ್ಯ ವಿ. ಆಚಾರ್ಯ ಪಾ.ವೆಂ., ೧೯೯೩, **ಜ್ಞಾನಪೀಠ ಪ್ರಶಸ್ತಿ ವಿಜೇತ ಕನ್ನಡಿಗರು,** ಎಂ.ಜಿ.ಎಂ. ಕಾಲೇಜು, ಉಡುಪಿ.

೧೫. ಗುರುಲಿಂಗ ಕಾಪಸೆ, ೨೦೦೦, **ಶಿವರಾಮ ಕಾರಂತ ಸಾಂಸ್ಕೃತಿಕ ಅನುಸಂಧಾನ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೬. ಗೋಪಾಲಕೃಷ್ಣಯ್ಯ(ಅನು), ಥೇಕೆಡತಾ.ಕೆ.ಕೆ.(ಮೂಲ), ೧೯೯೮, **ಶತಮಾನದ ಅಂಚಿನಲ್ಲಿ ಶಿಕ್ಷಣ,** ನವಕರ್ನಾಟಕ ಪ್ರಕಾಶನ, ಬೆಂಗಳೂರು

೧೭. ಚಂದ್ರಶೇಖರ ಎಸ್.(ಅನು), ನಿಂಗಣ್ಣ ಸಿ.(ಮೂಲ), **ದಕ್ಷಿಣ ಭಾರತದ ವಸಾಹತುಶಾಹಿ ಸಂಘರ್ಷ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೮. ಚಂದ್ರಶೇಖರ ಟಿ.ಆರ್, ೨೦೦೮, **ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿ ಗತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೯. ಚಿದಾನಂದ ಸಾಲಿ, ೨೦೧೦, **ಶಿಕ್ಷಣ ಮತ್ತು ಜೀವನಶೈಲಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ದೀಕ್ಷಿತ್ ಜಿ.ಎಸ್.(ಅನು), ತಾರಾಚಂದ್(ಮೂಲ), ೧೯೯೨, **ಭಾರತದಲ್ಲಿ ಸ್ವಾತಂತ್ರ್ಯ ಚಳವಳಿ,** ಕರ್ನಾಟ ವಿಶ್ವವಿದ್ಯಾಲಯ, ಧಾರವಾಡ.

೨೧. ತಾಳ್ತಜೆ ವಸಂತಕುಮಾರ, **ಶಿವರಾಮ ಕಾರಂತ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೧. ತುಳಸಿಕುಮಾರಿ, ೨೦೦೯, ***ಡಾ. ಶಿವರಾಮ ಕಾರಂತರ ಶೈಕ್ಷಣಿಕ ಚಿಂತನೆಗಳು ಮತ್ತು ಪ್ರಯೋಗ,*** (ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ), ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ, ಬಲ್ಮಠ, ಮಂಗಳೂರು.

೨೨. ನಾಗರಾಜ (ಅನು), ಮಜುಂದಾರ ಆರ್.ಸಿ.(ಮೂಲ), ೨೦೦೫, **ಬ್ರಿಟೀಷ್ ಪಾರಮ್ಯ ಮತ್ತು ಭಾರತೀಯ ಪುನರುಜ್ಜೀವನ (೨) (ಭಾಗ-೧),** ಭಾರತೀಯ ವಿದ್ಯಾಭವನ, ಬೆಂಗಳೂರು.

೨೩. ನಾರಾಯಣಘಟ್ಟ ಎ.ಆರ್, ೧೯೯೩, **ಶಿಕ್ಷಣಮಾಧ್ಯಮ ಸಮಗ್ರ ಚಿಂತನ,** ಗೀತಾ ಕುಟೀರ, ಬೆಂಗಳೂರು.

೨೪. ನಾರಾಯಣ ಸ್ವಾಮಿ ಕೆ.(ಸಂ), ೧೯೭೭, **ನಿತ್ಯನೂತನ ಶಿಕ್ಷಣ(ವಿನೋಬಾ)** ಕರ್ನಾಟಕ ಸರ್ವೋದಯ ಸಾಹಿತ್ಯ ಸಮಿತಿ, ಬೆಂಗಳೂರು.

೨೫. ಪಾಗುಂಡಪ್ಪ., ೨೦೧೫, ಲಿವಿಂಗ್ ಸೋಷಿಯಾಲಜಿ (ತ್ರೈಮಾಸಿಕ ಪತ್ರಿಕೆ), ಡಾ. ಚಂದ್ರಶೇಖರ್ ಆರ್.ವಿ.(ಸಂ), **ಶಿವರಾಮ ಕಾರಂತ: ಶಿಕ್ಷಣ ನೀತಿಯ ಪ್ರಸ್ತುತತೆ,** ನಿರ್ವಚನ ಪ್ರಕಾಶನ, ಮಾಲೂರು.

೨೬. ಪಾದೇಕಲ್ಲು ನರಸಿಂಹಭಟ್ಟ, ೨೦೦೪, **ಶಿಕ್ಷಣ–ಶೋಧನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೭. ಬಾಲಚಂದ್ರ ಜಯಶೆಟ್ಟಿ(ಸಂ), ೨೦೦೨, **ಪ್ರಾಥಮಿಕ ಶಿಕ್ಷಣ ಮಕ್ಕಳ ಮೂಲಭೂತ ಹಕ್ಕು,** ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ.

೨೮. ಭಾಸ್ಕರ್ ರಾವ್ ಬಿ, ೧೯೮೨, **ಇಂದಿನ ಶಿಕ್ಷಣ ಪದ್ಧತಿ ಅಸಂಗತ ಅವೈಜ್ಞಾನಿಕ,** ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

೨೯. ಭಾರತೀದೇವಿ ಮೂಡುಮಾರ್ನಾಡು(ಅನು.), ರಾಮಪ್ಪ ಕೆ.(ಮೂಲ), ೨೦೦೬ **ಸಾಂಸ್ಕೃತಿಕ ಅನುಸಂಧಾನ,** ಸಿಂಚನ ಕನ್ನಡ ವೇದಿಕೆ, ಬೆಂಗಳೂರು.

೩೦. ಬಿದರಿ ಆಯ್. ಎಸ್., ೧೯೭೪, **ಶಿಕ್ಷಣ ಮತ್ತು ಸಂಸ್ಕೃತಿ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೧. ಬುರ್ಲಿ ಎಸ್.ಎ.(ಅನು), ರಾಯಬರ್ನ್ ಎಮ್.(ಮೂಲ), ೧೯೯೧, **ಭಾರತದಲ್ಲಿ ಮಾತೃಭಾಷೆಯ ಬೋಧನೆಯ ಬಗ್ಗೆ ಸಲಹೆಗಳು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೨. ಮನು ಬಳಿಗಾರ(ಸಂ), ೧೯೯೮, **ಬಹುಮುಖಿ,** ಪರಮ ಶಂಕರ ಪ್ರಕಾಶನ, ಶಿಗ್ಗಿ ಬೆಳಗಾವಿ.

೩೩. ಮಹಾಬಲೇಶ್ವರ ರಾವ್, ೧೯೯೨, **ಶಿಕ್ಷಣ: ಕಾರಂತರ ದೃಷ್ಟಿ-ಸೃಷ್ಟಿ,** ಕರ್ನಾಟಕ ಸಂಘ, ಪುತ್ತೂರು.

೩೪. ಮಹಾಬಲೇಶ್ವರ ರಾವ್, ೨೦೦೭, **ಶಿಕ್ಷಣ ವರ್ತಮಾನ,** ಐಬಿಎಚ್ ಪ್ರಕಾಶನ, ಬೆಂಗಳೂರು.

೩೫. ಮಹಾಬಲೇಶ್ವರ ರಾವ್, ೧೯೯೯, **ಪ್ರಾಥಮಿಕ ಶಿಕ್ಷಣ ಸಮಸ್ಯೆಗಳು ಸವಾಲುಗಳು,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೬. ಮಹಾಬಲೇಶ್ವರ ರಾವ್, ೧೯೯೨, **ಬಹುಮುಖ ಶಿಕ್ಷಣ,** ಎಸ್.ಬಿ.ಎಸ್.ಪಬ್ಲಿಷರ್ಸ್, ಬೆಂಗಳೂರು.

೩೭. ಮಹಾಬಲೇಶ್ವರ ರಾವ್, ೨೦೦೩, **ಮನೆ ಶಾಲೆ,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೮. ಮಹಾಬಲೇಶ್ವರ ರಾವ್, ೨೦೦೯, **ಶಿಕ್ಷಣ ಪರಿವರ್ತನೆ,** ಸುಧಾ ಎಂಟರ್ ಪ್ರೈಸಸ್, ಬೆಂಗಳೂರು.

೩೯. ಮಹಾಬಲೇಶ್ವರ ರಾವ್, ೨೦೧೦, **ಮೆಕಾಲೆಯ ಮಕ್ಕಳು,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೪೦. ಮಹಾಬಲೇಶ್ವರ ರಾವ್, ೧೯೯೮, **ರಾಷ್ಟ್ರೀಯ ಶಿಕ್ಷಣ ನೀತಿ,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೪೧. ಮಾಲಿನಿ ಮಲ್ಯ ಬಿ.(ಸಂ), ೧೯೯೭, **ಶಿವರಾಮ ಕಾರಂತರ ಕೃತಿ ಕೈಪಿಡಿ,** ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೪೨. ಮಾಲಿನಿ ಮಲ್ಯ ಬಿ., ೨೦೦೬, **ಶಿವರಾಮ ಕಾರಂತರ ಸಾಹಿತ್ಯ ಶ್ರೇಣಿ, ಸಂಪುಟ–೨೭,** ಹರಟೆ ವಿಡಂಬನೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೪೩. ಮಾಲಿನಿ ಮಲ್ಯ ಬಿ., ೨೦೦೭, **ಶಿವರಾಮ ಕಾರಂತ,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೪೪. ಮಾಲಿನಿ ಮಲ್ಯ ಬಿ., ೧೯೯೨, **ನಾನು ಕಂಡ ಕಾರಂತರು,** ಅಕ್ಷರ ಪ್ರಕಾಶನ, ಹೆಗ್ಗೋಡು.

೪೫. ಮಾಲಿನಿ ಮಲ್ಯ ಬಿ., ೧೯೯೯, **ಕಾರಂತ ಉವಾಚ,** ಶಿವರಾಮ ಕಾರಂತ ಅಧ್ಯಯನ ಕೇಂದ್ರ, ಪುತ್ತೂರು.

೪೬. ಮಾಲಿನಿ ಮಲ್ಯ ಬಿ., (ಸಂ), ೨೦೧೧, **ಶಿವರಾಮ ಕಾರಂತ ವಾಙ್ಮಯ ವೃತ್ತಾಂತ,** ಸಪ್ನ ಬುಕ್ ಹೌಸ್, ಬೆಂಗಳೂರು.

೪೭. ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ೨೦೦೩, **ಭಾರತೀಯ ವಿದ್ಯಾಭ್ಯಾಸ,** ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು.

೪೮. ರಾಜಶೇಖರಯ್ಯ ಕೆ.ಎನ್., ೨೦೦೬, **ಶಿಕ್ಷಣ ಮತ್ತು ಮನೋವಿಕಾಸ** ಸುಮುಖ ಪ್ರಕಾಶನ, ಬೆಂಗಳೂರು.

೪೯. ರಾಮಚಂದ್ರ ಎಮ್.(ಸಂ), ೧೯೯೭, **ಕಾಲಪುರುಷ ಕಾರಂತ ಶತಮಾನ ಲೇಖನ ಸಂಕಲನ,** ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೫೦. ರಾಮಯ್ಯಂಗಾರ್ ಹೆಚ್.ಜೆ, ೧೯೯೪, **ಕೆಲವು ಶಿಕ್ಷಣಪದ್ಧತಿಗಳು,** ಶ್ರೀ ಸಾಯಿರಂಗ ಕಲ್ಯಾಣ ಮಂಟಪ, ಬೆಂಗಳೂರು.

೫೧. ರೇಣುಕ ಪ್ರಸನ್ನ, ೧೯೭೯, **ಪ್ರಚಲಿತ ಶಿಕ್ಷಣ: ಒಂದು ಚಿಂತನೆ,** ವಿಶ್ವನಾಥ ಪ್ರಕಾಶನ ಸರಸ್ವತಿಪುರಂ, ಮೈಸೂರು.

೫೨. ವೀರಭದ್ರಪ್ಪ ಬಿ.ವಿ.(ಸಂ), ೨೦೦೫, **ಹೊಸತು ವಾಚಿಕೆ, ಶಿಕ್ಷಣ ಮತ್ತು ಸಂಸ್ಕೃತಿ,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫೩. ಶಿವರಾಮ ಕಾಡನಕುಪ್ಪೆ(ಸಂ), **೧೯೯೮, ಶಿವರಾಮ ಕಾರಂತ ಹತ್ತು ಅಧ್ಯಯನಗಳು,** ಭಾರತಿ ಪ್ರಕಾಶನ, ಮೈಸೂರು.

೫೪. ಶಿವರುದ್ರಪ್ಪ ಎಸ್.ಎನ್., ೨೦೦೮, **ಸ್ವಾತಂತ್ರ್ಯೋತ್ತರ ಭಾರತ (ಕ್ರಿ.ಶ. ೧೯೪೭ರಿಂದ ೨೦೦೬ರವರೆಗೆ),** ಪೌರಸ್ತ್ಯ ಪ್ರಕಾಶನ, ಮೈಸೂರು.

೫೫. ಶಿವರಾಮ ಕಾರಂತ, ೧೯೯೨, **ಸಿರಿಗನ್ನಡ ಮಾಲೆ–೨,** ಎಸ್.ಬಿ.ಎಸ್. ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

೫೬. ಶಿವಾರೆಡ್ಡಿ ಕೆ.ಸಿ., ೨೦೦೩, **ಕನ್ನಡದ ಹಾಡು ಪಾಡು,** ಅಧ್ಯಯನ ಮಂಡಲ, ಬೆಂಗಳೂರು

೫೭. ಶ್ರೀನಿವಾಸ ಹಾವನೂರ, ೨೦೦೦, **ಹೊಸಗನ್ನಡ ಅರುಣೋದಯ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳರು.

೫೮. ಶೇಷಗಿರಿರಾವ್ ಎಲ್.ಎಸ್.(ಸಂ), ೧೯೭೮, **ಕಾರಂತ ಕಿರಣ,** ಅಭಿನಂದನ ಉತ್ಸವ ಸಮಿತಿ, ಬೆಂಗಳೂರು.

೫೯. ಸದಾಶಿವಯ್ಯ ಕೆ.ಎಸ್., ೧೯೮೦, **ಸೆಮಿಸ್ಟರ್ ಶಿಕ್ಷಣ: ಒಂದು ಅಧ್ಯಯನ.** ವಿಶ್ವನಾಥ ಪ್ರಕಾಶನ, ಮೈಸೂರು.

೬೦. ಸೀತಾರಾಮಯ್ಯ ವಿ., ೧೯೫೬, **ಶಿವರಾಮ ಕಾರಂತ,** ಎಂ.ಜಿ.ಎಂ. ಕಾಲೇಜು, ಉಡುಪಿ,

೬೧. ಸುಮತೀಂದ್ರ ನಾಡಿಗ(ಅನು), ೨೦೦೨, **ಶೀಲ ಬದುಕಿಗಾಗಿ ಶಿಕ್ಷಣ,** ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ಬೆಂಗಳೂರು.

೬೨. ಹನುಮಂತ ರೆಡ್ಡಿ ಜೆ., ೨೦೦೭, **ಶೈಕ್ಷಣಿಕ ತತ್ವಗಳು,** ಚೇತನ ಬುಕ್ ಹೌಸ್, ಮೈಸೂರು.

೬೩. ಹರಿದಾಸ ಭಟ್ಟ ಕು.ಶಿ.(ಸಂ), ೧೯೬೯, **ಕಾರಂತ ಪ್ರಪಂಚ,** ಅಭಿನಂದನ ಸಮಿತಿ, ಉಡುಪಿ.

೬೪. ಹಂಡೆ ಕೆ.ಆರ್., ೧೯೮೭, **ಸಾರ್ಥಕ ಶಿಕ್ಷಣ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೬೫. ಹೆಗಡೆ ಅರ್.ಡಿ., ೨೦೦೮, **ಭಾರತದಲ್ಲಿ ಶಿಕ್ಷಣ: ಸವಾಲು–ಸಾಧ್ಯತೆ,** ಚಿಂತನ ಪುಸ್ತಕ, ಉತ್ತರ ಕನ್ನಡ.

## ೩. ಶಿವರಾಮ ಕಾರಂತರ ಶೈಕ್ಷಣಿಕ ಪ್ರಯೋಗಗಳು

೧. ೧೯೩೦, ಮೊಳಹಳ್ಳಿ ಶಿವರಾಯರ ಬೆಂಬಲದಿಂದ ಮೊದಲ ಮಕ್ಕಳ ಕೂಟ, ಉಪ್ಪಿನಂಗಡಿಯಲ್ಲಿ.

೨. ೧೯೩೧, ಪುತ್ತೂರಿನಲ್ಲಿ ೧೦ ದಿನಗಳ ದಸರೆಯ ಉತ್ಸವ.

೩. ೧೯೩೨, ಪಂಜೆ ಮಂಗೇಶರಾಯರ ನೆರವಿನಿಂದ ಮಂಗಳೂರಿನಲ್ಲಿ ಶೈಕ್ಷಣಿಕ ಪ್ರಯೋಗಗಳು.

೪. ೧೯೩೪, ಚಿತ್ರಮಯ ದಕ್ಷಿಣ ಕನ್ನಡದ ಭೂವಿವರಣೆಯ ಪುಸ್ತಕ ಪ್ರಕಟಣೆ.

೫. ೧೯೩೫, ಚಿತ್ರಮಯ ದಕ್ಷಿಣ ಹಿಂದೂಸ್ಥಾನ ಪುಸ್ತಕ ಪ್ರಕಟಣೆ.

೬. ೧೯೪೧, ಸಿರಿಗನ್ನಡ ಪಾಠಮಾಲೆ ಪಠ್ಯಪುಸ್ತಕಗಳ ರಚನೆ.

೭. ೧೯೩೫, ಪುತ್ತೂರಿನಲ್ಲಿ ಬಾಲವನ ಆರಂಭ.

೮. ೧೯೩೬, ಬಾಲಪ್ರಪಂಚ ಕಿರಿಯರ ವಿಶ್ವಕೋಶದ ಪ್ರಕಟಣೆ.

೯. ೧೯೪೧, ಸಿರಿಗನ್ನಡ ಅರ್ಥಕೋಶ ಪ್ರಕಟಣೆ.

೧೦. ೧೯೫೪, ಮೈಸೂರಿನ ಇಲವಾಲದಲ್ಲಿ ಯುನೆಸ್ಕೋದವರು ನಡೆಸಿದ ವಯಸ್ಕ ಶಿಕ್ಷಣ ಕಾರ್ಯಕ್ರಮಕ್ಕೆ ಜೋಗಿ ಕಂಡ ಊರು, ಜೋಗಿ ಒಲಿದ ಊರು, ಅಖಿಲ ಸೇವೆ, ಹುಟ್ಟು ಸಾವು ಒಟ್ಟು ಮುಂತಾದ ಕನ್ನಡ ಪಠ್ಯಪುಸ್ತಕಗಳ ರಚನೆ.

೧೧. ೧೯೫೯, ವಿಜ್ಞಾನಪ್ರಪಂಚ ರಚನೆ.

೧೨. ೧೯೩೬, ಸಾಮಾನ್ಯ ವಿಜ್ಞಾನ ಭಾಗ ೧–೨ ರಚನೆ.

೧೩. ೧೯೪೦, ಸಮಾಜ ನೀತಿ ಭಾಗ ೧, ೨ ರಚನೆ.

೧೪. ೧೯೬೭, ಅದ್ಭುತ ಜಗತ್ತು ವಿಜ್ಞಾನ ಮಾಲೆಯಲ್ಲಿ ವಿಚಿತ್ರ ಖಗೋಳ ಮತ್ತು ನಮ್ಮ ಭೂಖಂಡಗಳು ರಚನೆ.

